ಶ್ರೀಮನ್ನಾರಾಯಣಪಂಡಿತಾಚಾರ್ಯರಿಂದ ರಚಿತವಾದ

# ಅಣುಮಧ್ವವಿಜಯ

(ಪ್ರಮೇಯನವಮಾಲಿಕಾ)



ಮಹಾಭಾಷ್ಯವೆಂಕಟಭಟ್ಟವಿರಚಿತ

(ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತ)

# ಗೂಢಭಾವಪ್ರಕಾಶಿಕಾ

(ಕನ್ನಡಾನುವಾದಸಹಿತ)


❀ ಗೌರವ ಸಂಪಾದಕರು ❀

ವಿದ್ವಚ್ಚೂಡಾಮಣಿ, ರಾಜಾ ಎಸ್. ಗಿರಿ ಆಚಾರ್ಯರು

❀ ಅನುವಾದಕರು ❀

ವಿದ್ವಾನ್ ಎಸ್.ವಿ. ಭೀಮಭಟ್ಟರು

❀ ಸಂಪಾದಕರು ❀

ವಿದ್ವಾನ್ ರಾಜಾ ಎಸ್. ಪವಮಾನಾಚಾರ್ಯರು



❀ ಪ್ರಕಾಶಕರು ❀

ಅಧ್ಯಕ್ಷರು

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ

ಶ್ರೀರಾಘವೇಂದ್ರಸ್ವಾಮಿ ಮಠ

ಮಂತ್ರಾಲಯ - 518 345 (A.P.)

ಪ್ರಕಾಶಕರು : ಅಧ್ಯಕ್ಷರು
ಶ್ರೀಗುರುಸಾರ್ವಭೌಮಸಂಸ್ಕೃತವಿದ್ಯಾಪೀಠ
ಮಂತ್ರಾಲಯ - 518 345

ಪ್ರತಿಗಳು : 1000
( 1997 )



ಮುದ್ರಕರು : ಆಶಾ ಗ್ರಾಫಿಕ್ಸ್ ಪ್ರೈವೇಟ್ ಲಿಮಿಟೆಡ್
ಕುಮಾರಪಟ್ಟಣಂ - 581 123
ಧಾರವಾಡ ಜಿಲ್ಲೆ, ಕರ್ನಾಟಕ

# ಶ್ರೀ ಮಧ್ವಾಚಾರ್ಯರು



ಶ್ರೀಮದಾನಂದತೀರ್ಥೇಂದುಭಾಸನಂ ಮಮ ಮಾನಸೇ ।
ಆಶಾಸೇ ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ ॥

# ಶ್ರೀ ರಾಘವೇಂದ್ರತೀರ್ಥಗುರುಸಾರ್ವಭೌಮರು
## ಮಂತ್ರಾಲಯ



ಮೂಕೋಽಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥

# ಶ್ರೀ ಸುಜಯೀಂದ್ರತೀರ್ಥರು



ಸುಯಮೀಂದ್ರ ಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ॥

॥ ಶ್ರೀಮನ್ಮೂಲರಾಮೋ ವಿಜಯತೇ ॥

# ಅನುಗ್ರಹವಚನ

ಶ್ರೀಮದ್ಧಂಸನಾಮಕ ಪರಮಾತ್ಮನಿಂದ ಪ್ರಾರಂಭವಾದ ಸಾಕ್ಷಾತ್ಪರಂಪರೆಗೆ ಸೇರಿದವರೂ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಸುಪ್ರತಿಷ್ಠಿತವಾದ ವೇದಾಂತವಿದ್ಯಾಸಾಮ್ರಾಜ್ಯದ ಭವ್ಯದಿವ್ಯ ಪೀಠಾಧಿಪತಿಗಳೂ, ಕಲಿಯುಗದ ಕಲ್ಪವೃಕ್ಷ ಕಾಮಧೇನುಗಳೆಂಬ ದಿಗಂತ ವಿಶ್ರಾಂತ ಕೀರ್ತಿಪ್ರತಿಷ್ಠೆಗಳಿಂದ ವಿಶ್ವವಿಖ್ಯಾತರಾದ ಮಂತ್ರಾಲಯದ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರವರ ಭವ್ಯ ಪರಂಪರೆಯಲ್ಲಿ ಮುಂದುವರೆದವರೂ ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರಕರಾದ

## ಶ್ರೀ 1008 ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ

## ಅನುಗ್ರಹವಚನ

ಕಲಿಯುಗ ಕಲ್ಪವೃಕ್ಷ ಕಾಮಧೇನು ಸದೃಶರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಪೂರ್ವಾಶ್ರಮದಲ್ಲೇ ರಚಿಸಿದ ಗೂಢಭಾವ ಪ್ರಕಾಶಿಕಾ ಎಂಬ ವ್ಯಾಖ್ಯಾನವನ್ನು (ಅಣುಮಧ್ವವಿಜಯಕ್ಕೆ) ಕನ್ನಡಾನುವಾದ ಸಹಿತವಾಗಿ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ಪ್ರಚುರಿಸಿದ್ದನ್ನು ಈಗ ಭಕ್ತರ ಅನುಕೂಲಕ್ಕಾಗಿ ಪುಸ್ತಕರೂಪದಲ್ಲಿ ನಮ್ಮ ಆಜ್ಞೆಯಂತೆ ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದ ವತಿಯಿಂದ ಮುದ್ರಿಸುತ್ತಿದ್ದಾರೆ. ಇದರ ಲಾಭವನ್ನು ಸಕಲ ಆಸ್ತಿಕ ಜನರು ಪಡೆದು ಉದ್ಧೃತರಾಗಲೆಂದು ಅಸ್ಮದುಪಾಸ್ಯಮೂರ್ತಿ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲರಾಮಚಂದ್ರದೇವರನ್ನು ಪ್ರಾರ್ಥಿಸಿ ಹಾರೈಸುವೆವು.

ಇತ್ಯನೇಕ ನಾರಾಯಣ ಸ್ಮರಣೆಗಳು.

# ಮುನ್ನುಡಿ

ಜಗತ್ತು ಕಂಡಿರುವ ತತ್ತ್ವಜ್ಞಾನಿಗಳಲ್ಲಿ ಶ್ರೀಮಧ್ವಾಚಾರ್ಯರ ವ್ಯಕ್ತಿತ್ವ ತುಂಬಾ ಉನ್ನತವಾದದ್ದು ಹಾಗೂ ಶ್ರೇಷ್ಠವಾದದ್ದು. ಅವರು ಜಗತ್ತಿಗೆ ನೀಡಿದ ನಿರ್ದುಷ್ಟವೂ ಸುಂದರವೂ ಆದ ತತ್ತ್ವಜ್ಞಾನ ಮತ್ತು ಅವರ ಬಹುಮುಖ ಪ್ರತಿಭೆಯ ಉಜ್ವಲ ವ್ಯಕ್ತಿತ್ವ ಅದಕ್ಕೆ ಮುಖ್ಯ ಕಾರಣಗಳಾಗಿವೆ. ಅವರ ಸರ್ವಮೂಲ ಗ್ರಂಥಗಳ ಅಧ್ಯಯನದಂತೆಯೇ ಅವರ ಜೀವನದ ಅಧ್ಯಯನವೂ ಜಿಜ್ಞಾಸುಗಳ ಬಾಳಿಗೆ ಬೆಳಕನ್ನು ನೀಡುವಲ್ಲಿ ತುಂಬಾ ಮಹತ್ತರವಾದದ್ದು. ಅಂತಹ ಮಧ್ವಾಚಾರ್ಯರ ಜೀವನ ಮತ್ತು ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವ ವಿಷಯದಲ್ಲಿ ನಾರಾಯಣಪಂಡಿತಾಚಾರ್ಯರು ಮಾಡಿರುವ ಉಪಕಾರ ಬಹಳ ಉನ್ನತವಾದದ್ದು. ಈ ಭೂಮಂಡಲದಲ್ಲಿ ಅಲಂಕಾರಪ್ರಾಯವಾದ ಪರಮಧರ್ಮಕ್ಷೇತ್ರವಾದ ಅತಿಪುಣ್ಯಸಾಧನೀಭೂತವಾದ ಭಾರತ ದೇಶದಲ್ಲಿ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಪರಿಪಾಕದಿಂದ ಹೊಂದಲ್ಪಟ್ಟ ಜನ್ಮವುಳ್ಳ ಮಾನವರಿಗೆ ಅದರಲ್ಲೂ ವೈಷ್ಣವಕುಲದಲ್ಲಿ ಜನಿಸಿದ ಸುಚೇತನರಿಗೆ ಗುರುಗಳ ಅನುಗ್ರಹ ಮೂಲಕ ಶ್ರೀಹರಿಯ ಅನುಗ್ರಹವನ್ನು ಹೊಂದಿ ಸಕಲದುಃಖ ನಿವೃತ್ತಿಪೂರ್ವಕ ಪರಮಾನಂದಪ್ರಾಪ್ತಿರೂಪವಾದ ಮೋಕ್ಷದ ಸಾಧನೆಯು ಮುಖ್ಯ ಕರ್ತವ್ಯವಾಗಿದೆ. "ಅಪ್ಯಚ್ಯುತೋ ಗುರುದ್ವಾರಾಪ್ರಸಾದಕೃತ್" ಓಂ ಪ್ರದಾನವದೇವ ಹಿ ತದುಕ್ತಮ್ ಓಂ ಇತ್ಯಾದ್ಯನೇಕಪ್ರಮಾಣಗಳಿಂದ ಶ್ರೀಹರಿಯ ಪರಮಾನುಗ್ರಹವು ಗುರುಗಳ ಅನುಗ್ರಹದಿಂದಲೇ ಸಾಧ್ಯ. ಗುರುಗಳಲ್ಲಾದರೂ ಜೀವೋತ್ತಮರಾದ ಭಾರತೀರಮಣಮುಖ್ಯಪ್ರಾಣದೇವರೇ ಪ್ರಥಮರು. ನಿರಂತರ ಸಕಲ ಪ್ರಾಣಿಗಳಲ್ಲಿದ್ದುಕೊಂಡು ಪ್ರತಿದಿನ ಜನ್ಮ ಇರುವವರೆಗ ಮಾಡಲ್ಪಡುವ ಹಂಸಮಂತ್ರರೂಪವಾದ ಭಗವದಾರಾಧನೆಯಿಂದ ನಾವು ಜೀವಿಸಿದ್ದೇವೆಯೋ. ಅಂತಹ ಮುಖ್ಯಪ್ರಾಣದೇವರು ಹನುಮ-ಭೀಮ-ಮಧ್ವ ಎಂಬ ಮೂರು ರೂಪಗಳಿಂದ ಅವತರಿಸಿ, ರಾಮ-ಕೃಷ್ಣ-ವೇದವ್ಯಾಸ ರೂಪನಾದ ಶ್ರೀಹರಿಯ ಸೇವೆಯನ್ನು ಮಾಡಿ ಭಕ್ತರನ್ನು ಉದ್ಧರಿಸಿದ್ದಾರೆ. ಅಂತಹ ಶ್ರೀಮದಾಚಾರ್ಯರ ವಿಶಿಷ್ಟ ಚರಿತ್ರೆಯನ್ನು ಶ್ರೀತ್ರಿವಿಕ್ರಮ ಪಂಡಿತಾಚಾರ್ಯರ ಮೂರನೇ ಮಕ್ಕಳಾದ ಶ್ರೀನಾರಾಯಣಪಂಡಿತಾಚಾರ್ಯರು ಒಂದು ಸಾವಿರದ ಎಂಟು ಶ್ಲೋಕಗಳಿಂದ ಕೂಡಿದ 16 ಸರ್ಗಗಳಿಂದ ಕೂಡಿದ "**ಸುಮಧ್ವವಿಜಯ**" ಎಂಬ ಉತ್ತಮವಾದ ಮಹಾಕಾವ್ಯವನ್ನು ರಚಿಸಿದ್ದಾರೆ.

ಅಂತಹ ಸುಮಧ್ವವಿಜಯದ ಸಾರವನ್ನು, ದ್ವಾತ್ರಿಂಶಲ್ಲಕ್ಷಣಗಳಿಂದ ಪೂರ್ಣರಾದ ಪರಮಾಚಾರ್ಯರೇ ನಮ್ಮ ಗುರುಗಳೂ ಪೂಜ್ಯರೂ ಆದ ವಾಯುದೇವರು ಎಂದು ಸೂಚನೆ ಮಾಡಲು 32 ಸ್ರಗ್ಧರಾವೃತ್ತಗಳಿಂದ ಕೂಡಿದ "ಅಣುಮಧ್ವವಿಜಯ" ಎಂಬ ಗ್ರಂಥವನ್ನು ರಚಿಸುವ ಮೂಲಕ ಶ್ರೀನಾರಾಯಣ ಪಂಡಿತಾಚಾರ್ಯರು ಸಂಗ್ರಹಿಸಿದ್ದಾರೆ. ಅಂತಹ ಅಣುಮಧ್ವವಿಜಯಕ್ಕೆ ಉತ್ತಮವಾದ ವ್ಯಾಖ್ಯಾನವನ್ನು ಶ್ರೀರಾಘವೇಂದ್ರತೀರ್ಥರು ಪೂರ್ವಾಶ್ರಮದಲ್ಲೇ ರಚಿಸಿದ್ದಾರೆಂಬುದು ಸುಪ್ರಸಿದ್ಧವಾಗಿದೆ. ಶ್ರೀಮದ್ವಾದೀಂದ್ರತೀರ್ಥರಿಂದ. ವಿರಚಿತವಾದ ಗುರುಗುಣಸ್ತವನದಲ್ಲಿ ಈ ವ್ಯಾಖ್ಯಾನವನ್ನು ಉಲ್ಲೇಖಿಸಿ ಈ ರೀತಿ ಪ್ರಶಂಸಿಸಿದ್ದಾರೆ.

*ಧೀರಶ್ರೀರಾಘವೇಂದ್ರಂ ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ*
*ದೃಷ್ಟ್ವಾ ಸಂತುಷ್ಟಚೇತಾಃ ದಶಮತಿರಚಿರಾದಭ್ಯಷಿಂಚತ್ ಪದೇಸ್ವೇ ।*
*ನೂನಂ ವಾಣೀ ತದೀಯಾನನನಲಿನಗತಾ ತತ್ಕೃತಸ್ವಪ್ರಿಯೈಕ*
*ಪ್ರತ್ಯಾಸಂಗಪ್ರಹೃಷ್ಟಾ ಸ್ವಯಮಪಿ ತದನು ಸ್ವೇ ಪದೇಚಾಭ್ಯಷಿಂಚತ್ ॥*

(ಗುರುಗುಣಸ್ತವನ - 16)

ಗೂಢಭಾವಪ್ರಕಾಶಿಕಾ ಎಂಬ ಹೆಸರುಳ್ಳ ಪ್ರಸಿದ್ಧವಾದ ಈ ವ್ಯಾಖ್ಯಾನವು ಸರಲವು. ಅನ್ವಯಮೂಲಕ ಮೂಲಾರ್ಥವನ್ನು ಪ್ರಕಾಶಿಸುವುದೂ ಆಗಿದೆ. ಅಲ್ಲಲ್ಲಿ "ಇದಮತ್ರಾಕೂತಂ", "ಅಯಂಭಾವಃ" ಇತ್ಯಾದಿಯಾಗಿ ಸುಮಧ್ವವಿಜಯದಲ್ಲಿರುವ ಕಥಾಭಾಗವನ್ನು ಸಂಗ್ರಹಿಸುವ ಮೂಲಕ ಪಂಡಿತರಿಗೆ ಬಾಲಕರಿಗೆ ಸಂತೋಷವನ್ನುಂಟು ಮಾಡುತ್ತಿದೆ ಎಂಬ ವಿಷಯದಲ್ಲಿ ಅದನ್ನು ಓದುವ ಹೃದಯಗಳೇ ಪ್ರಮಾಣಗಳು.

ಇಂತಹ ಅಣುಮಧ್ವವಿಜಯಕ್ಕೆ ಸುಮಾರು 6 ವ್ಯಾಖ್ಯಾನಗಳು ಉಪಲಬ್ಧಗಳಾಗಿವೆ. ಅವುಗಳ ಪೈಕಿ ಶ್ರೀರಾಘವೇಂದ್ರತೀರ್ಥರ ಗುರುಸಾರ್ವಭೌಮರ ಪೂರ್ವಾಶ್ರಮದ ಕೃತಿಯಾದ ಈ ಗೂಢಭಾವ ಪ್ರಕಾಶಿಕಾ ಎಂಬ ವ್ಯಾಖ್ಯಾನ ಸಹಿತವಾಗಿ ಅಣುಮಧ್ವವಿಜಯದ ಕನ್ನಡಾನುವಾದವನ್ನು ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ನಮ್ಮ ಶ್ರೀಮಠದ ಆಸ್ಥಾನವಿದ್ವಾಂಸರಾದ ಶ್ರೀ ಎಸ್.ವಿ. ಭೀಮಭಟ್ಟರು ಧಾರಾವಾಹಿಯಾಗಿ ಮುದ್ರಿಸಿದ್ದನ್ನು ಈಗ ಭಕ್ತರ ಅನುಕೂಲಕ್ಕಾಗಿ ಶ್ರೀ ಶ್ರೀಗಳವರ ಅಪ್ಪಣೆ ಮೇರೆಗೆ ಪುಸ್ತಕರೂಪದಲ್ಲಿ ಮುದ್ರಿಸುತ್ತಿದ್ದೇವೆ. ಇದರ ಸಂಪಾದನೆ, ಕರಡು ತಿದ್ದುವ ಕಾರ್ಯದಲ್ಲಿ ಸಹಕರಿಸಿದವರಿಗೆ, ಓದುಗರಿಗೆ, ಮುದ್ರಕರಿಗೆ ಎಲ್ಲರಿಗೂ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮೂಲರಾಮಚಂದ್ರದೇವರು ಇತೋಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯಾದಿಗಳನ್ನು ಕೊಟ್ಟು ಕಾಪಾಡಲೆಂದು ಹಾರೈಸುತ್ತೇವೆ.

ಇತಿ

**ಸಂಪಾದಕ ಮಂಡಲೀ**



# ಶ್ರೀ ಮದಣುಮಧ್ವವಿಜಯಃ
# (ಶ್ರೀ ಪ್ರಮೇಯ ನವಮಾಲಿಕಾ)
# ಶ್ರೀಮತ್ ಕವಿಕುಲತಿಲಕ ತ್ರಿವಿಕ್ರಮಪಂಡಿತಾಚಾರ್ಯಸುತ ನಾರಾಯಣಪಂಡಿತಾಚಾರ್ಯ ವಿರಚಿತಾ
# ಮಹಾಭಾಷ್ಯವೆಂಕಟಭಟ್ಟ (ಶ್ರೀ ರಾಘವೇಂದ್ರಸ್ವಾಮಿನಾಂ ಪೂರ್ವಾಶ್ರಮ ನಾಮಧೇಯಂ) ಕೃತಗೂಢಭಾವ ಪ್ರಕಾಶಿಕಾ
## ವ್ಯಾಖ್ಯಾನಸಹಿತಾ

## ಅವತಾರಿಕಾ

ಶ್ರೀಹಂಸನಾಮಕ ಪರಮಾತ್ಮ, ಚತುರ್ಮುಖ ಬ್ರಹ್ಮದೇವರು, ಸನಕ, ಸನಂದನ, ಸನಾತನ, ಸನತ್ಕುಮಾರರೆಂಬ ಬ್ರಹ್ಮಮಾನಸಪುತ್ರರು · ದೂರ್ವಾಸರು · ಜ್ಞಾನನಿಧಿತೀರ್ಥರು · ಗರುಡವಾಹನತೀರ್ಥರು, ಕೈವಲ್ಯತೀರ್ಥರು, ಜ್ಞಾನೇಶತೀರ್ಥರು, ಪರತೀರ್ಥರು, ಸತ್ಯಪ್ರಜ್ಞತೀರ್ಥರು, ಪ್ರಾಜ್ಞತೀರ್ಥರು, ಅಚ್ಯುತಪ್ರೇಕ್ಷತೀರ್ಥರು, ಶ್ರೀಮದಾನಂದತೀರ್ಥರು ಈ ಕ್ರಮದಲ್ಲಿ ವೇದಶಾಸ್ತ್ರಸಂಮತವಾದ ಹರಿಸರ್ವೋತ್ತಮತ್ವ ಸಿದ್ಧಾಂತವು (ಸತ್ಸಿದ್ಧಾಂತವು) ತ್ರೈಲೋಕ್ಯದಲ್ಲಿಯೂ ನೆಲೆಗೊಂಡು ಸಜ್ಜನೋದ್ಧಾರ ಕಾರ್ಯದಲ್ಲಿ ನಿರಂತರವಾಗಿ ಸಾಗಿತ್ತು. ಈ ಪರಂಪರೆಯಲ್ಲಿ ನಮಗೆ ಆದಿ ಗುರುಗಳಾದ ಶ್ರೀಮುಖ್ಯಪ್ರಾಣ ದೇವರು ಪರಮಾತ್ಮನಿಂದ ಆಜ್ಞಪ್ತರಾಗಿ ಇಂದಿಗೆ ಏಳುನೂರು ವರ್ಷಗಳ ಹಿಂದೆ ಈ ಭರತಖಂಡದ ದಕ್ಷಿಣಪಥದಲ್ಲಿ ಪಾವನಪರಶುರಾಮ ಕ್ಷೇತ್ರದ ಪಾಜಕಕ್ಷೇತ್ರದಲ್ಲಿ ಶ್ರೀಮದಾಚಾರ್ಯರಾಗಿ ಅವತರಿಸಿ ನಮಗೆ ಸುದರ್ಶನ ಮುದ್ರೋಪದೇಶವನ್ನು ಅನುಗ್ರಹಿಸಿ ಪರಮೋಪಕಾರ ಮಾಡಿದ್ದಾರೆ. ಅವರು 'ಪ್ರಾಪ್ತೇನರೇಷು ಜನನೇ ನರವತ್ ಪ್ರವೃತ್ತಿಃ' ಎಂಬಂತೆ ಮನುಷ್ಯರಂತೆಯೇ ನಡೆದುಕೊಂಡಿದ್ದರೂ, ಭಕ್ತರ ಉದ್ಧಾರಕ್ಕಾಗಿ ಯುಗನುಸಾರವಾಗಿ ಅಮಾನುಷಗಳಾದ ಅನೇಕ ಅದ್ಭುತಕಾರ್ಯಗಳನ್ನು ಮಾಡಿದ್ದಾರೆ. ತನ್ನ ಮತ್ತೊಂದು ರೂಪದಂತೆಯೇ ಇರುವ ಭಾಷ್ಯಾನುಭಾಷ್ಯಾದಿ ಗ್ರಂಥಗಳನ್ನು ರಚಿಸಿದ್ದಾರೆ. "ಏಕೋನಾಶೀತಿ ವರ್ಷಾಣಿ ನೀತ್ವಾ ಮಾನುಷ ದೃಷ್ಟಿಗಃ। ಪಿಂಗಲಾಬ್ದೇ ಮಾಘಶುದ್ಧ ನವಮ್ಯಾಂ ಬದರೀಂ ಯಯೌ" ಎಂಬ ಉಕ್ತಿಯಂತೆ ಅವರು ಕ್ರಿ.ಶ. 1238 ರಿಂದ 1317ರ ವರೆಗೆ 79 ವರ್ಷಪರ್ಯಂತ ಮನುಷ್ಯರ ದೃಷ್ಟಿಗೆ ಗೋಚರವಾಗಿದ್ದು ಪಿಂಗಳಸಂವತ್ಸರ ಮಾಘಶುದ್ಧ ನವಮಿಯ ದಿನ ಅದೃಶ್ಯರಾಗಿ ಬದರಿಗೆ ಪ್ರಯಾಣ ಮಾಡಿದರು. ಇಂದಿಗೂ "ಅದೃಶ್ಯೋಽಸೌರೂಪ್ಯಪೀಠೇ ದೃಶ್ಯೋಽಸ್ತಿಬದರೀತಟೇ" ಎಂಬಂತೆ ಅದೃಶ್ಯರಾಗಿ ತನ್ನ ಭಕ್ತರ ಬಳಿಯಲ್ಲಿ ಇದ್ದಂತೆ; ಬದರಿಯಲ್ಲಿ ತಮ್ಮ ಗುರುಗಳಾದ ಶ್ರೀ ವೇದವ್ಯಾಸರ ಬಳಿಯಲ್ಲಿ ಸಾಕ್ಷಾತ್ತಾಗಿ ಈಗಲೂ ಇದ್ದಾರೆಂದು ಪ್ರಾಜ್ಞರ ಮಾತಿನಿಂದ ತಿಳಿದು ಬರುತ್ತದೆ.

ಇಂತಹ ಶ್ರೀ ಮಧ್ವಾಚಾರ್ಯರ ಚರಿತ್ರೆಯನ್ನು ಅವರ ಸಾಕ್ಷಾತ್ ಶಿಷ್ಯರಲ್ಲಿ ಗ್ರಹಸ್ಥಾಶ್ರಮಿಗಳಲ್ಲಿ ಪ್ರಮುಖರಾದ ಕವಿಕುಲತಿಲಕ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರ ಮಕ್ಕಳಾದ ನಾರಾಯಣಪಂಡಿತಾಚಾರ್ಯರು ಶ್ರೀ ಮತ್ಸುಮಧ್ವವಿಜಯವೆಂಬ

ಮಹಾಕಾವ್ಯರೂಪದಲ್ಲಿ ಬರೆದಿದ್ದಾರೆ. ಅಲ್ಲಿ ಹದಿನಾರು ಸರ್ಗಗಳಲ್ಲಿ ಹೇಳಿರುವ ವಿಷಯವನ್ನೇ 'ಪ್ರಮೇಯನವಮಾಲಿಕ' ಯೆಂಬ ಅಣುಸ್ತೋತ್ರಕಾವ್ಯದಲ್ಲಿ ಸಂಗ್ರಹಿಸಿರುತ್ತಾರೆ. ಈ ಗ್ರಂಥದಲ್ಲಿ ದ್ವಾಂತ್ರಿಂಶಲ್ಲಕ್ಷಣ (32) ಗಳಿಂದ ಕೂಡಿರುವ ಆಚಾರ್ಯರ ಸ್ಮರಣೆಗೆಂಬಂತೆ ಸ್ರಗ್ಧರಾವೃತ್ತದ 32 ಶ್ಲೋಕಗಳಿಂದ ಶ್ರೀಮತ್ಸುಮಧ್ವವಿಜಯದ ಕಥೆಯ - ವಿಷಯವನ್ನೆಲ್ಲಾ ಸಂಕ್ಷಿಪ್ತ - ಗಂಭೀರವಾದ ಶೈಲಿಯಿಂದ ಸಂಗ್ರಹಿಸಿರುತ್ತಾರೆ. ಪೃಥ್ವೀವೃತ್ತದಿಂದ ನಿಬದ್ಧವಾದ ಕೊನೆಯ 33ನೆಯ ಶ್ಲೋಕದಿಂದ ಗ್ರಂಥಕರ್ತರಾದ ತಮ್ಮ ಹೆಸರನ್ನು ತಿಳಿಸಿದ್ದಾರೆ. ಶ್ರೀಮತ್ ಸಮಧ್ವವಿಜಯವು ಮಂತ್ರತುಲ್ಯವಾದ ಮಹಾಕಾವ್ಯ. ಪಾರಾಯಣ ಮಾತ್ರದಿಂದ ಮಹಾಪುಣ್ಯಪ್ರದವಾದ ಗ್ರಂಥರತ್ನ ಪ್ರಾಚೀನಾಚಾರ್ಯರು ಅದನ್ನು ನಿತ್ಯ ಪಾರಾಯಣದ ಗ್ರಂಥವಾಗಿ ಇಟ್ಟುಕೊಂಡಿದ್ದರು. ಆದರೆ ಸಜ್ಜನರಿಗೆ ಆಚಾರ್ಯರ ಸಮಗ್ರ ಚರಿತ್ರೆ ಮತ್ತು ಮಹಿಮೆಯನ್ನು ಸುಮಧ್ವವಿಜಯದ ಪಾರಾಯಣದ ಮೂಲಕ ತಿಳಿಯಲು ಅವಕಾಶವಿಲ್ಲದಿದ್ದಾಗ ಸಾಧ್ಯವಿಲ್ಲದಿದ್ದಾಗ ಅವರ ಸಹಾಯಕ್ಕೆಂದು ಶ್ರೀ ನಾರಾಯಣಪಂಡಿತಚಾರ್ಯರು ಸಕಲಾಭಿಷ್ಟಗಳನ್ನೀಯುವ ಸಜ್ಜನಕರ್ಣಾಭರಣದಂತಿರುವ ಪ್ರಮೇಯನವಮಾಲಿಕೆಯೆಂಬ ಈ ಅಣುಮಧ್ವವಿಜಯವನ್ನು ರಚಿಸಿದ್ದಾಗಿ ಸೂಚಿಸಿರುತ್ತಾರೆ.

ಇಂತಹ ಪವಿತ್ರವಾದ ಗ್ರಂಥರತ್ನಕ್ಕೆ ಶ್ರೀ ರಾಘವೇಂದ್ರಗುರುಸಾರ್ವಭೌಮರು ಪೂರ್ವಾಶ್ರಮದಲ್ಲಿ ಮಹಾಭಾಷ್ಯ ವೆಂಕಟಭಟ್ಟರೆಂಬ ಅಭಿಧಾನವನ್ನು ಹೊಂದಿದ್ದಾಗ 'ಗೂಢಭಾವ ಪ್ರಕಾಶ' ಎಂಬ ವ್ಯಾಖ್ಯಾನವನ್ನು ರಚಿಸಿ ಅಣುಮಧ್ವವಿಜಯದ ನಿಗೂಢವಾದ ಅಭಿಪ್ರಾಯವನ್ನು ತಿಳಿಯಲು ಸಜ್ಜನರಿಗೆ ಬಹಳ ದೊಡ್ಡ ಸಹಾಯಮಾಡಿ ಅನುಗ್ರಹಿಸಿದ್ದಾರೆ. ಪ್ರಮೇಯನವಮಾಲಿಕಾ ಎಂಬ ಹೆಸರುಳ್ಳ ಈ ಅಣುಮಧ್ಯವಿಜಯದ ವ್ಯಾಖ್ಯಾನವಾದ ಗೂಢಭಾವ ಪ್ರಕಾಶಿಕೆಯ ಸಂಸ್ಕೃತ ಭಾಗವನ್ನೂ ಅದರ ಸರಳವಾದ ಕನ್ನಡ ಅನುವಾದವನ್ನೂ ಶ್ರೀಹರಿವಾಯುಗಳ ಮತ್ತು ಶ್ರೀ ಗುರುರಾಜರ ಪ್ರೀತಿಗಾಗಿ, ಸಜ್ಜನರ ಉಪಕಾರಕ್ಕಾಗಿ ಮುಂದೆ ಕೊಡುತ್ತಿದ್ದೇವೆ. ಗುರ್ವನುಗ್ರಹಾಪೇಕ್ಷಿಗಳಾದ ಸಜ್ಜನರು ಇದರಿಂದ ಪ್ರಯೋಜನವನ್ನು ಪಡೆಯುತ್ತಾರೆಂದು ಆಶಿಸುತ್ತೇವೆ.

卐 卐 卐 卐 卐 卐 卐 卐 卐 卐 卐 卐

ಶ್ರೀ ಗುರುಭ್ಯೋನಮಃ

## (ಶ್ರೀಮದಣುಮಧ್ವವಿಜಯಃ)

# ಶ್ರೀಪ್ರಮೇಯನವಮಾಲಿಕಾ

### ಮಂಗಳಾಚರಣ – ಹನುಮದವತಾರವರ್ಣನ

ಶ್ರೀ ಮುಖ್ಯಪ್ರಾಣದೇವರ ಮೊದಲನೆಯ ಅವತಾರವಾದ ಶ್ರೀ ಹನುಮಂತನ ಅವತಾರದ ಕಥೆಯನ್ನು ಸಂಗ್ರಹಿಸುವ ಮೂಲಕ ನಾರಾಯಣಪಂಡಿತಾಚಾರ್ಯರು ಮಂಗಳಾಚರಣೆಯನ್ನು ಮಾಡಿದ್ದಾರೆ.

**ಶ್ರೀಶಪ್ರಿತ್ಯೈಪ್ರಜಾತಃ ಸುಮಹಿತಮಹಿಮಾ ಶ್ರೀಹನೂಮಾನ್ನಿದೇಶಾ**
**ದ್ರಾಮಸ್ಯೋಲ್ಲಂಘಿತಾಬ್ಧಿಃ ಸಹರಿರಥಗತಃ ಸೇತುನಾಪಿಷ್ಟದುಷ್ಟಃ।**
**ಭೂಭೃನ್ನಿರಾವಣಾರಿಂ ಪುರಗಮುರುದಯಂ ಪೂಜಾಯಿತ್ವಾಸಸೀತಂ**
**ಪಶ್ಯನ್ ಕಿಂಪೂರುಷೇತಂ ಸತತಮಪಿಮಹಾನ್ ಪ್ರಾಣಮುಖ್ಯೋsವತನ್ನಾಂ ।।೧।।**

# ಶ್ರೀ ಮಹಾಭಾಷ್ಯವೆಂಕಟಭಟ್ಟ ವಿರಚಿತಾ ಗೂಢಭಾವ ಪ್ರಕಾಶಿಕಾ

ಶ್ರೀ ಗುರುಭ್ಯೋನಮಃ

ಇಂದಿರಾಪತಿ ಮಾನಮ್ಯ ಪೂರ್ಣಬೋಧಾನ್ ಗುರೂನಪಿ।
ವ್ಯಾಖ್ಯಾಸ್ಯಾಮಿ। ಯಥಾಬೋಧಂ ಪ್ರಮೇಯನವಮಾಲಿಕಾಮ್ ॥೧॥
ಇಹಾನ್ವಯ ಮುಖ್ಯೇನೈವ ಶ್ಲೋಕಾರ್ಥೋಽಪಿ ನಿರೂಪ್ಯತೇ।
ಗೂಢಾಭಾವ ಪ್ರಕಾಶಶ್ಚಕ್ರಿಯತೇ ಪ್ರೀತಯೇ ಹರೇಃ ॥೨॥

ಇಹಖಲು ಸಂಸಾರಕಾಂತರೇ ಸಂಚಾರೋದರ್ಕ ದುಃಖಾನಲ ಸಂತಪ್ತ ನಿಜ ಜನಕುಮುದವೃಂದಾನಿ ಅನುಜಿಘೃಕ್ಷುಃ ನಾರಾಯಣ ಪಂಡಿತಾಚಾರ್ಯಃ ನಿಖಿಲಸಂತಾಪ ಶಾಮಕ ಭಗವತ್ ಪ್ರಸಾದೋನ್ಮೀಲಕದ್ಭಕ್ತಿ ನಿದಾನಾಽಖಿಲಗುರುವಾಯು ಭಕ್ತಿಜನಕತದವತಾರಲೀಲಾನಸಂಧಾನಾಯ ತಲ್ಲೀಲಾಃ ಸಂಜಿಘೃಕ್ಷುಃ ಆದೌ ಹನುಮದವತಾರ ಲೀಲಾಂ ಸಂಗೃಹ್ಣಾತಿ ಶ್ರೀಶೇತಿ ।

**ತಾತ್ಪರ್ಯ** - ಈ ಸಂಸಾರವೆಂಬುದು ಅರಣ್ಯಪ್ರಾಯವಾದುದು. ಇಲ್ಲಿ ಸಂಚಾರ ಮಾಡಲೇಬೇಕಾಗಿದೆ. ಆದರೆ **ಅದರ ಉತ್ತರ ಫಲವು** ದುಃಖ. ಆ ದುಃಖವೆಂಬ ಬೆಂಕಿಯಿಂದ ಸಂತಾಪಕ್ಕೊಳಗಾದ ಸಜ್ಜನವೃಂದವನ್ನು, ನೈದಿಲೆ **ಹೂವುಗಳನ್ನು ಚಂದ್ರನು** ಸಂತೋಷಪಡಿಸುವಂತೆ ಸಂತೈಸಲು ಅವರಿಗೆ ಅನುಗ್ರಹಮಾಡುವ ಅಪೇಕ್ಷೆಯುಳ್ಳ **ಶ್ರೀನಾರಾಯಣಪಂಡಿತಾಚಾರ್ಯರು ಮೊದಲು** ಹನುಮದವತಾರದ ಲೀಲೆಯನ್ನು ಸಂಗ್ರಹಿಸುತ್ತಿದ್ದಾರೆ. ಏಕೆಂದರೆ ಎಲ್ಲಾ **ಸದ್ಭಕ್ತರ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ** ಮೂರುತಾಪಗಳನ್ನು ಪರಿಹರಿಸಿ ಪರಮಾತ್ಮನು ಅನುಗ್ರಹವನ್ನು (ಉದ್ಬೋಧನ) **(ಅಭಿವ್ಯಕ್ತ) ಮಾಡಲು ಪರಮಾತ್ಮ** ಪರಮಭಕ್ತಿಯು ಬೇಕು. ಆ ಹರಿಭಕ್ತಿಗೆ ಮೂಲಕಾರಣವಾದುದು ಅಖಿಲ ಗುರುಗಳಾದ ಮುಖ್ಯಪ್ರಾಣದೇವರ ಭಕ್ತಿಯು ಬೇಕು. ಅವರಲ್ಲಿ ಭಕ್ತಿ ಹುಟ್ಟಬೇಕಾದರೆ ಅವರ ಚರಿತ್ರೆಯನ್ನೂ **ಲೀಲೆಯನ್ನೂ ಕೇಳಬೇಕು.** ಅದಕ್ಕಾಗಿ ಈ ಜೀವೋತ್ತಮರ ಚರಿತ್ರ ಗ್ರಂಥವನ್ನು ರಚಿಸಲಾಗಿದೆ. ಶ್ರೀ ವಾಯುದೇವರ, ಹನುಮಂತ, **ಭೀಮಸೇನ,** ಮಧ್ವ ಎಂಬ ಮೂರು ಅವತಾರಗಳಲ್ಲಿ ಮೊದಲನೆಯದಾದ ಶ್ರೀ ಹನುಮಂತದೇವರ ಚರಿತ್ರೆಯನ್ನು ಒಂದು ಶ್ಲೋಕದಿಂದ ಇಲ್ಲಿ ಸಂಗ್ರಹಿಸಿದ್ದಾರೆ.

ಶ್ರೀಶಸ್ಯ ಪ್ರೀತ್ಯೈ ಪ್ರೀತಯೇ । ಘಿತಿ ಹ್ರಸ್ವಶ್ಚ (1-4-6) ಇತಿ ವಾ ನದೀತ್ವಂ ಪ್ರಜಾತಃ ಕೇಸರಿಣಃ **ಸಕಾಶಾತ್** ಆಂಜನಾಯಾಂ ಅವತೀರ್ಣಃ । ಜನೇರಕರ್ಮಕತ್ವಾತ್ ಗತ್ಯರ್ಥಾಕರ್ಮಕೇತ್ಯಾದಿನಾ (ಗತ್ಯರ್ಥಾಕರ್ಮಕ ಶ್ಲಿಷಶೀಙಸ್ಥಾಸವಸಜನರುಹಜೀರ್ಯತಿಭ್ಯಶ್ಚ 3-4-72) ಕರ್ತರಿಕ್ತಃ । ಸುಮಹಿತಮಹಿಮಾ ದೇವೈಃ ಸಪೂಜಿತ ಮಾಹಾತ್ಮ್ಯಃ **ಶ್ರೀ ಹನುಮಾನ್**॥ ಅನೇನಜನನಾನಂತರಮೇವ, ಉದ್ಯದಾದಿತ್ಯಂ ಗ್ರಸಿತುಂ ಅಭ್ಯುತ್ಪತಂತಂ, ಆದಿತ್ಯಸಮೀಪಸ್ಥಂ **ತತ್ಕಾಂತ್ಯಾ, ರಕ್ತಂ ರಾಹುಂ** ದೃಷ್ಟ್ವಾ, ಆದಿತ್ಯಂ ತ್ಯಕ್ತ್ವಾ, ರಾಹಮೇವ ಅಭಿಸಸಾರ। ರಾಹುಶ್ಚ ಇಂದ್ರಂ ಶರಣಂ **ಪ್ರಾಪ್ತಃ ಇಂದ್ರಶ್ಚ ತಸ್ಮೈಶಿರವೇ** ವಜ್ರಮಮೋಚ । ತೇನ (ಅಸ್ಯಹನುಃ) ಭಂಗಂ ಆಪ' ಇತ್ಯಾದಿ ಚರಿತಂ **ಸೂಚಿತಂ ಭವತಿ । ರಾಮಸ್ಯ ನಿದೇಶಾತ್** 'ಸೀತಾನ್ವೇಷಣಾಯ ಯಾಹಿ' ಇತ್ಯನುಶಾಸನಾತ್ ಉಲ್ಲಂಘಿತಾಬ್ಧಿಃ **ಉತ್ತೀರ್ಣವಾರಿಧಿಃ, ಉಲ್ಲಂಘಿತಾಬ್ಧಿಃ ಇತಿಸಾಮಾನ್ಯೋಕ್ತ್ಯಾ** ದ್ವಿರುಲ್ಲಂಘನಸ್ಯಾಪ್ಯುಕ್ತತ್ವೇನ ಲಂಕಾಂಪ್ರತಿಗಂತು ಅಬ್ಧಿಂತೀರ್ತ್ವಾಲಂಕಾಯಾಂ **ಸರ್ವತ್ರ ಸೀತಾಮನ್ವಿಷ್ಯ,** ಅಶೋಕೇ ತಾಂದೃಷ್ಟ್ವಾ, ರಾಮಾಂಗುಲೀಯಂ ತಸ್ಯೈದತ್ವಾ, ತತಃ **ಚೂಡಾಮಣಿ ಮಾದಾಯ, ಅಶೋಕವನಂ ಉನ್ಮೂಲ್ಯ,** ರಾವಣಸ್ಯ ತೃತೀಯ ಭಾಗಬಲಂ ಹತ್ವಾ, ಲಂಕಾಂ ದಗ್ಧ್ವಾಪುನಃ **ಅಬ್ಧಿಂ ತೀರ್ಣವಾನ್, ಇತ್ಯೇತಾವದುಕ್ತಂ** ಭವತಿ।

**ಅಥರಾಮಂ** ದೃಷ್ಟ್ವಾ, ಸಕಲ **ವೃತ್ತಾಂತ ವಿಜ್ಞಾಪನಾನಂತರಂ, ಸಹರಿಃ (ಹರಿಣಾ)** ರಾಮೇಣ. ಸಹಿತಃ ಹರಿಭಿಃ ಕಪಿಭಿಃ ಸಹಿತಃ ಇತಿವಾ, ಸೇತುನಾ **ಸಮುದ್ರ ಸೇತುಬಂಧೇನ (ಗತಃ) ಲಂಕಾಂ** ಪ್ರಾಪ್ತಃ ಗತ್ಯರ್ಥತ್ವಾತ್ ಕರ್ತರಿಕ್ತಃ

ಪಿಷ್ಟದುಷ್ಟಃ ಪಿಷ್ಟಃ ಮುಷ್ಟಿನಾ ಚೂರ್ಣೀಕೃತಃ ದುಷ್ಟಃ ರಾವಣಃಯೇನಸಃ ಭೂಭೃತಂ ಗಂಧಮಾಧನ ಪರ್ವತಂ ನಯತಿ ಪ್ರಾಪಯತಿ ಕಪೀನ್ ಉಜ್ಜೀವಯಿತುಂ ಇತಿ ಭೂಭೃನ್ನೀಃ, ಸತ್ಸೂದ್ವಿಷೇತ್ಯಾದಿನಾಕ್ವಿಪ್ (ಸತ್ ಸೂದ್ವಿಷದ್ರುಹದುಹಯುಜವಿದಭಿದಚ್ಛಿದಜನೀರಾಜಾಮುಪಸರ್ಗೇsಪಿಕ್ವಿಪ್ 3-2-61) ಸಂಹಿತಾಯಾಂ ರೋರೀತಿ (8-3-14) ರೇಫಸ್ಯಲೋಪಾತ್, ಢ್ರಲೋಪೇ ಪೂರ್ವಸ್ಯದೀರ್ಘೋsಣಃ (6-3-111) ಇತಿದೀರ್ಘಶ್ಚ, ರಾವಣಾರಿಂ ರಾವಣಂ ಹತವಂತಂ, ತತಃ ಪುರಂ ಅಯೋಧ್ಯಾಂಗಚ್ಛತೀಪುರಗಃ, (ಅನ್ಯತ್ರಾಪಿ ದೃಶ್ಯತೇ ಇತಿವಗಮೇರ್ಡಃಅಂತಾತ್ಯಂತಾಧ್ವ ದೂರಪಾರ ಸರ್ವಾನಂತೇಷುಡಃ, (3-2-48 ಸೂತ್ರಸ್ಥ ವಾರ್ತಿಕಂ) ಇತಿಗಮೇರ್ಡಃ ರಾವಣಂ ಹತ್ವಾಸ್ವಪುರಂಗತ್ವಾ ಪಟ್ಟಾಭಿಷಿಕ್ತ ಇತ್ಯರ್ಥಃ, ಉರುದಯಂ, ಉರ್ವೀಧಯಾ ಯಸ್ಯೇತಿ ತಥೋಕ್ತಃ ತಂ, ಸ್ವಸ್ಮಿನ್ ಅಧಿಕದಯಾಂ ಕುರ್ವಾಣಂ ಇತ್ಯರ್ಥಃ, ಸ್ತ್ರಿಯಾಃ ಪುಂವತ್ (ಸ್ತ್ರಿಯಾಃ ಪುಂವದ್ಭಾಷಿತಪುಂಸ್ಕಾದನೂಜಸಮಾನಾಧೀಕರಣೇಸ್ತ್ರಿಯಾಮಪೂರಣೀ ಪ್ರಿಯಾದಿಷು 6-3-34). ಇತಿ ಉರುಶಬ್ದೇ ಪುಂವದ್ಭಾವಃ ಗೋಸ್ತ್ರಿಯೋರೀತಿ (ಗೋಸಿಯೋರುಪಸರ್ಜನಸ್ಯ 1-2-48) ದಯಾಶಬ್ದೇಹ್ರಸ್ವಃ, ಸಸೀತಂ ಸೀತಾ ಸಮೇತಂ ರಾಮಂಪೂಜಾಯಿತ್ವಾ, ಸರ್ವೈಕರಣೈಃ ಸಂಪೂಜ್ಯ, ಕಿಂಪೂರುಷೇ ಕಿಂಪುರುಷಖಂಡೇ, ತಂರಾಮಂ, ಸತತಂ, ಪಶ್ಯನ್, ಅಪರೋಕ್ಷೀಕುರ್ವನ್ ಮಹಾನ್ ಪ್ರಾಣಮುಖ್ಯಃ, ಪ್ರಾಣೇಷು ಜೀವೇಷು, ಯದ್ವಾ ಇಂದ್ರಿಯಾಭಿಮಾನಿಷು ಶ್ರೇಷ್ಠಃ, ಸಃ, ಮಾಂ, ಅವತಾತ್, ರಕ್ಷತು ಅವರಕ್ಷಣೇ ಆಶಿಷಿಲೋಟ್ ತುಹ್ಯೋಸ್ತಾತಙ (ತುಹ್ಯೋಸ್ತಾತಙ ಆಶಿಷ್ಯನ್ಯತರಸ್ಯಾಂ 7-1-35) ಇತಿ ವಾತಾತಙ್ ॥೧॥

**ಪದಚ್ಛೇದ** - ಶ್ರೀಶಪ್ರಿತ್ಯೈ, ಪ್ರಜಾತಃ, ಸುಮಹಿತಮಹಿಮಾ, ಶ್ರೀಹನೂಮಾನ್, ನಿದೇಶಾತ್, ರಾಮಸ್ಯ, ಉಲ್ಲಂಘಿತಾಬ್ಧಿಃ, ಸಹರಿಃ, ಅಥ, ಗತಃ ಸೇತುನಾ, ಪಿಷ್ಟದುಷ್ಟಃ, ಭೂಭೃನ್ನೀಃ, ರಾವಣರಿಂ, ಪುರಗಂ, ಉರುದಯಂ ಪೂಜಾಯಿತ್ವಾ, ಸಸೀತಂ, ಪಶ್ಯನ್, ಕಿಂಪೂರಷೇ, ತಂ ಸತತಂ ಅಪಿ, ಮಹಾನ್ ಪ್ರಾಣಮುಖ್ಯಃ, ಅವತಾತ್ ಮಾಂ,॥

**ಅನ್ವಯ** - ಶ್ರೀಶಪ್ರಿತ್ಯೈ, ಪ್ರಜಾತಃ, ಸಮಹಿತಮಹಿಮಾ, ಶ್ರೀಹನೂಮಾನ್, ರಾಮಸ್ಯ, ನಿದೇಶಾತೇ, ಉಲ್ಲಂಘಿತಾಭಿಃ, ಅಥ, ಸಹರಿಃ, ಸೇತುನಾಗತಃ, ಪಿಷ್ಟದುಷ್ಟಃ, ಭೂಭೃನ್ನೀಃ, ರಾಣಾರಿಂ, ಪುರಗಂ, ಉರುದಯಂ, ಸಸೀತಂ (ತಂ) ಪೂಜಾಯಿತ್ವಾ (ಅಪಿ) ಕಿಪೂರಷೇ ತಂ, ಸತತಂ, ಪಶ್ಯನ್, ಮಹಾನ್, ಪ್ರಾಣಮುಖ್ಯಃ (ಸಃ) ಮಾಂ, ಅವತಾತ್,

**ಅನ್ವಯಾರ್ಥ** - ಶ್ರೀಶ=ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಪ್ರೀತ್ಯೈ=ಸಂತೋಷಕ್ಕೋಸ್ಕರ, ಪ್ರಜಾತಃ ಆವಿರ್ಭವಿಸಿದ ಸುಮಹಿತ=(ದೇವತೆಗಳಿಂದ) ಚೆನ್ನಾಗಿ ಪೂಜಿಸಲ್ಪಟ್ಟ ಮಹಿಮಾ=ಮಹಾತ್ಮ್ಯವುಳ್ಳ ಶ್ರೀ ಹನೂಮಾನ್=ಕಾಂತಿಯುಕ್ತರಾದ (ಪೂಜ್ಯರಾದ) ಹನುಮಂತದೇವರು, ರಾಮಸ್ಯ=ಶ್ರೀ ರಾಮಚಂದ್ರನ, ನಿದೇಶಾತ್=ಅಪ್ಪಣೆಯಿಂದ, ಉಲ್ಲಂಘಿತ=ದಾಟಲ್ಪಟ್ಟ, ಅಬ್ಧಿಃ=ಸಮುದ್ರವುಳ್ಳವರಾಗಿ, ಅಥ=ಅನಂತರ ಸಹರಿಃ=ಶ್ರೀರಾಮದೇವರಿಂದ ಸಹಿತರಾಗಿ (ಕಪಿಗಳಿಂದ ಕೂಡಿದವರಾಗಿ) ಸೇತುನಾ= (ಸಮುದ್ರದ ಮೇಲೆ ಕಟ್ಟಲ್ಪಟ್ಟ) ಸೇತುವಿನಿಂದ, ಗತಃ=(ಲಂಕೆಯನ್ನು ಕುರಿತು) ಹೋದವರಾಗಿ, ಪ್ಲಿಷ್ಟ= (ಮುಷ್ಟಿಯಿಂದ) ಪುಡಿ ಮಾಡಲ್ಪಟ್ಟ (ಗುದ್ದಿದ) ದುಷ್ಟಃ=ದುರ್ಜನನಾದ=ರಾವಣನುಳ್ಳವರಾಗಿ, ಭೂಭೃನ್ನೀಃ=ಗಂಧಮಾದನ ಪರ್ವತವನ್ನು ಒಯ್ಯುತಕ್ಕಂತಹವರಾಗಿ, ರಾವಣಾರಿಂ=ರಾವಣನ ಶತ್ರುವಾದ (ರಾವಣನನ್ನು ಸಂಹರಿಸಿರತಕ್ಕ) ಪುರಗಂ= ಅಯೋಧ್ಯಾಪಟ್ಟಣವನ್ನು ಕುರಿತು ಹೋಗುತ್ತಿರುವ ಉರುದಯಂ= (ತನ್ನಲ್ಲಿ) ಅಧಿಕವಾದ ಕರುಣೆಯುಳ್ಳ, ಸಸೀತಂ= ಸೀತಾ ಸಮೇತನಾದ, (ತಂ=ಆ ಶ್ರೀರಾಮಚಂದ್ರನನ್ನು) ಪೂಜಾಯಿತ್ವಾ=ಸಕಲಕರಣಗಳಿಂದಲೂ ಭಕ್ತಿಪೂರ್ವಕವಾಗಿ ಅರ್ಚಿಸಿ, ಅಪಿ=ಮತ್ತು, ಕಿಂಪೂರುಷೇ=ಕಿಂಪುರಷಖಂಡದಲ್ಲಿ, ತಂ=ಆ ಶ್ರೀರಾಮಚಂದ್ರನನ್ನು, ಸತತಂ=ಯಾವಾಗಲೂ, ಪಶ್ಯನ್=ಪ್ರತ್ಯಕ್ಷವಾಗಿ ನೋಡುತ್ತಾ ಇರುವ, ಮಹಾನ್=ಪೂಜ್ಯರಾದ, ಪ್ರಾಣಮುಖ್ಯಃ=ಜೀವರಲ್ಲಿ ಉತ್ತಮರಾದ (ಇಂದ್ರಿಯಾಭಿಮಾನಿದೇವತೆಗಳಿಗಿಂತ ಉತ್ತಮರಾದ) ವಾಯುದೇವರು, ಮಾಂ=ನನ್ನನ್ನು ಅವತಾತ್=ಕಾಪಾಡಲಿ.

**ತಾತ್ಪರ್ಯ** - ದೇವತೆಗಳೆಲ್ಲರೂ ಯಾರ ಮಹಿಮೆಯನ್ನು ಕೊಂಡಾಡಿ ಗೌರವಿಸುತ್ತಾರೋ ಅಂತಹ ಜೀವೋತ್ತಮರಾದ ಮುಖ್ಯಪ್ರಾಣದೇವರು ಪರಮಾತ್ಮನ ಅಪ್ಪಣೆಯಿಂದ ಪರಮಾತ್ಮನ ಪ್ರೀತಿಗೋಸ್ಕರ ಕೇಸರಿಯೆಂಬ ವಾನರನ ಪತ್ನಿಯಾದ ಅಂಜನಾದೇವಿಯಲ್ಲಿ ಹನುಮಂತನೆಂಬ ಹೆಸರಿನಿಂದ ಪ್ರಾದುರ್ಭವಿಸಿದರು. ಶ್ರೀಮನ್ನಾರಾಯಣನು

ರಾಮನಾಗಿ ಅವತರಿಸಿದಾಗ ಆ ಶ್ರೀರಾಮದೇವರ ಸೇವೆಯಲ್ಲಿ ನಿರತರಾಗಿ ಅವರ ಅಜ್ಞಾನುಸಾರವಾಗಿ ಸೀತಾನ್ವೇಷಣೆ ಮಾಡುತ್ತಾ ಸಮುದ್ರವನ್ನು ದಾಟಿ ಲಂಕೆಗೆ ಹೋಗಿ ರಾಮರ ಸಂದೇಶವನ್ನು ಸೀತೆಗೆ ತಲುಪಿಸಿ ಸೀತಾದೇವಿಯ ಸಂದೇಶವನ್ನು ಶ್ರೀರಾಮದೇವರಿಗೆ ತಲುಪಿಸಿದರು. ಅನಂತರ ಶ್ರೀರಾಮಚಂದ್ರ ದೇವರು ಸಮಸ್ತ ಕಪಿಗಳೊಂದಿಗೆ ಸಮುದ್ರದ ಬಳಿಗೆ ಬಂದು ಸಮುದ್ರದಲ್ಲಿ ಸೇತುವನ್ನು ನಿರ್ಮಾಣ ಮಾಡಿಸಿ ಅದರ ಮೂಲಕವಾಗಿ ಲಂಕೆಗೆ ಬಂದರು. ಅಲ್ಲಿ ಯುದ್ಧ ಸಂದರ್ಭಲ್ಲಿ ಶ್ರೀ ಹನುಮಂತದೇವರು ರಾವಣನನ್ನು ಮುಷ್ಟಿಯಿಂದ ಪ್ರಹರಿಸಿ ಸಂಜೀವನಾದಿ ಮೂಲಿಕೆಗಳುಳ್ಳ ಗಂಧಮಾದನ ಪರ್ವತವನ್ನು ಲೀಲೆಯಿಂದ ತಂದು ಕಪಿಗಳನ್ನು ಬದುಕಿಸಿದರು. ರಾವಣನ ಸಂಹಾರ ಮಾಡಿ ಅಯೋಧ್ಯಾ ಪಟ್ಟಣಕ್ಕೆ ಬಂದು ಪಟ್ಟಾಭಿಷೇಕ್ತನಾದ ಸೀತಾಸಮೇತನಾದ ಶ್ರೀರಾಮಚಂದ್ರನ ವಿಶೇಷವಾದ ಕೃಪೆಗೆ ಪಾತ್ರರಾದರು. ಆ ಶ್ರೀರಾಮಚಂದ್ರನನ್ನು ಭಕ್ತಿಯಿಂದ ಪೂಜಿಸಿ, ಶ್ರೀ ರಾಮನು ಪರಂಧಾಮಕ್ಕೆ ಹೋದ ಮೇಲೆ ಕಿಂಪುರುಷ ಖಂಡದಲ್ಲಿ ಶ್ರೀರಾಮನನ್ನು ಅಪರೋಕ್ಷವಾಗಿ ನೋಡುತ್ತಾ ವಾಸಮಾಡುತ್ತಿದ್ದಾರೆ. ಅಂತಹ ಪೂಜ್ಯರಾದ ಮುಖ್ಯ ಪ್ರಾಣದೇವರು ನನ್ನನ್ನು ಕಾಪಾಡಲಿ.

**ವಿಶೇಷಾಂಕ** - ಸುಮಹಿತ ಮಹಿಮಾ ಎಂಬ ವಿಶೇಷಣದಿಂದ ಶ್ರೀ ಹನುಮತದೇವರ ಬಾಲ್ಯದ ಚರಿತೆಯು ಸೂಚಿತವಾಗಿದೆ. ಜನನಾನಂತರದಲ್ಲಿಯೇ ತಾಯಿಯಾದ ಅಂಜನಾದೇವಿಯು ಹಣ್ಣನ್ನು ತರಲು ಹೋದಾಗ ಸೂರ್ಯನು ಉದಯಿಸುತ್ತಿದ್ದುದನ್ನು ನೋಡಿ, ತನ್ನ ಸ್ವಾಮಿಯನ್ನು ಸೂರ್ಯಮಂಡಲದಲ್ಲಿ ನೋಡಲು ಬಯಸಿ ಮೇಲಕ್ಕೆ ಹಾರಿದರು. ಆಗ (ಆ ಸಮಯದಲ್ಲಿ ರಾಹುವು ಸೂರ್ಯನನ್ನು ನುಂಗಲು ಬರುತ್ತಿದ್ದನು.) ಸೂರ್ಯನ ಬಳಿಯಲ್ಲಿದ್ದ **ರಾಹುವು ಸೂರ್ಯನ ಕಾಂತಿಯಿಂದ** ಕೆಂಪಾಗಿ ಕಾಣುತ್ತಿದ್ದನು. ಸ್ವಭಾವತಃ ದುಷ್ಟ ಜನರ ಚೇಷ್ಟೆಯನ್ನು ಸಹಿಸದ **ಪುಟ್ಟವನಾದರೂ ದಿಟ್ಟ ಹನುಮಂತನು** ಸೂರ್ಯನನ್ನು **ಬಿಟ್ಟು** ರಾಹುವನ್ನೇ ನಿಗ್ರಹಿಸಲು **ಹೋದನು.** ರಾಹುವು **ಇಂದ್ರನನ್ನು ಮೊರೆಹೊಕ್ಕಾಗ ಇಂದ್ರನು ವಜ್ರಾಯುಧದಿಂದ ಈ ಶಿಶುರೂಪಿ ಮುಖ್ಯಪ್ರಾಣನ ಕೆನ್ನೆಗೆ ಹೊಡೆದನು. ಆದರೂ ಮುಖ್ಯಪ್ರಾಣನ ಕಪೋಲಕ್ಕೆ ಏನೂ ಆಗಲಿಲ್ಲ, ಅದು ಪ್ರಶಸ್ತವಾಗಿಯೇ ಇತ್ತು.** (ಪ್ರಶಸ್ತಃ ಹನುಃ ಅಸ್ಯ **ಅಸ್ತೀತಿ ಹನುಮಾನ್, ಹನೂಮಾನ್) ಆದುದರಿಂದಲೇ ಅವನಿಗೆ ಹನುಮಂತನೆಂದು** ಹೆಸರು ಇತ್ಯಾದಿ ಕಥೆಯು **ಸೂಚಿತವಾಗುತ್ತದೆ.**

---

**ಉಲ್ಲಂಘಿತಾಬ್ಧಿ - ಎಂಬ ವಿಶೇಷಣದಿಂದ** ಸಾಮಾನ್ಯವಾಗಿ ಸಮುದ್ರಲಂಘನವನ್ನು ಹೇಳಿದ್ದರಿಂದ ಎರಡು ಬಾರಿ **ಸಮುದ್ರಲಂಘನವನ್ನು** ಹೇಳಿದಂತಾಯಿತು. ಲಂಕೆಗೆ ಹೋಗಲು ಸಮುದ್ರವನ್ನು ದಾಟಿ ಸೀತೆಯನ್ನು ಕಂಡು ಶ್ರೀರಾಮದೇವರ ಉಂಗುರವನ್ನು ಸೀತಾದೇವಿಗೆ ಕೊಟ್ಟು, ಆ ಸೀತಾದೇವಿಯಿಂದ ಚೂಡಾಮಣಿಯನ್ನು ಸ್ವೀಕರಿಸಿ ಅಶೋಕವನವನ್ನು ಧ್ವಂಸಮಾಡಿ ರಾವಣನ ಮೂರನೆ ಒಂದು ಭಾಗದಷ್ಟು ಸೈನ್ಯವನ್ನು ಸಂಹರಿಸಿ ಲಂಕೆಯನ್ನು ಸುಟ್ಟು ಪುನಃ ಸಮುದ್ರವನ್ನು ದಾಟಿ ಹಿಂದಿರುಗಿ ಶ್ರೀರಾಮನ ಬಳಿಗೆ ಬಂದನು ಎಂಬ ಕಥೆಯು ಇದರಿಂದ ಸೂಚಿತವಾಗಿದೆ.

**ವಿಗ್ರಹ** - ಶ್ರಿಯಾಃ, ಈಶಃ ಶ್ರೀಶಃ, ಶ್ರೀಶಸ್ಯ ಪ್ರೀತಿಃ ಶ್ರೀಶ ಪ್ರೀತಿಃ ತಸ್ಯೈ। ಪ್ರಕರ್ಷೇಣ ಜಾತಃ ಪ್ರಜಾತಃ। ಸುಷ್ಟು ಮಹಿತಃ ಸುಮಹಿತಃ, ಸುಮಹಿತಃ ಮಹಿಮಾ, ಯಸ್ಯಸಃ ಸುಮಹಿತಮಹಿಮಾ। ಹನುಃಅಸ್ಯಅಸ್ತೀತಿ ಹನೂಮಾನ್, ಶ್ರೀಯುಕ್ತಶ್ಚಾಸೌ ಹನೂಮಾಂಶ್ಚ ಶ್ರೀ ಹನೂಮಾನ್,। ಉಲ್ಲಂಘಿತಃ ಅಬ್ಧಿಃ ಯೇನಸಃ ಉತಂಘೀತಾಬ್ಧಿಃ। ಹರಿಣಾ (ಹರಿಭಿಃ ಸಹವಾ) ಸಹವರ್ತತೆ. ಇತಿ ಸಹರಿಃ। ಪಿಷ್ಟ ಃ ದುಷ್ಟ ಃ ಯೇನಸ ಃ ಪಿಷ್ಟದುಷ್ಟಃ। ಭುವಂ ಬಿಭರ್ತೀತಿ ಭೂಭೃತ್ ಭೂಭೃತಂ ನಯತೀತಿ ಭೂಭನ್ನೀಃ। ರಾವಣಸ್ಯ ಅರಿಃ ರಾವಣಾರಿಃ, ತಂ।'ಪುರಂ ಗಚ್ಛಚೀಚಿ ಪುರಗಃ ತಂ। ಉರ್ವೀದಯಾಯಸ್ಯಸಃ ಉರುದಯಃ ತಂ। ಸೀತಯಾ ಸಹವರ್ತತೇ ಇತಿ ಸಸೀತಃ ತಂ। ಪ್ರಾಣೇಷು ಮುಖ್ಯಃ ಪ್ರಾಣಮುಖ್ಯಃ ।

**ಕ್ರಿಯಾಪದ** - ಅವತಾತ್, ಅವತು ಅವತಾತ್, ಅವತಾಂ ಅವಂತು, ಅವ, ಅವತಾತ್, ಅವತಂ ಅವತ,

ಆವಾನಿ ಅವಾವ ಅವಾಮ ಅವರಕ್ಷಣಾಗತಿಕಾಂತಿ ಪ್ರೀತಿತೃಪ್ತಿ ಅವಗಮ ಪ್ರವೇಶ ಶ್ರವಣ ಸ್ವಾಮ್ಯರ್ಥಯಾಚನಕ್ರಿಯಾ ಇಚ್ಛಾ ಅವಾಪ್ತಿ ಆಲಿಂಗನ ಹಿಂಸಾ - ಆದಾನ - ಭಾಗವೃದ್ಧಿಷು ಇತಿ ರಕ್ಷಣಾದ್ಯರ್ಥಕಾತ್ ಅವಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಪ್ರಾರ್ಥನಾಯಾಂ, (ಆಶಿಷಿ) ಲೋಟ್ ಪ್ರಥಮ ಪುರುಷ ಏಕವಚನೇ ಅವತಾತ್ ಇತಿರೂಪಂ

**ಪ್ರಯೋಗ** – ಪ್ರಾಣಮುಖ್ಯಃ ಮಾಂ ಅವತಾತ್ (ಕರ್ತರಿ) ಪ್ರಾಣಮುಖ್ಯೇನ ಅಹಂ ಅವ್ಯೈ (ಕರ್ಮಣಿ)

❀ ❀ ❀ ❀ ❀ ❀ ❀ ❀

# ಶ್ರೀ ಪ್ರಮೇಯ ನವಮಾಲಿಕಾ

**(ಅಣುಮಧ್ವವಿಜಯಃ)**

ಶ್ರೀ ಮಹಾಭಾಷ್ಯ ವೆಂಕಟಭಟ್ಟಾಚಾರ್ಯ ವಿರಚಿತಃ
ಗೂಢಭಾವ ಪ್ರಕಾಶಃ ಪ್ರತಿಪದಾರ್ಥ ಸಮಲಂಕೃತಃ ।

**ಇಂದಿರಾಪತಮಾನಮ್ಯ ಪೂರ್ಣಬೋಧಾನ್ ಗುರೂನಪಿ।**
**ವ್ಯಾಖ್ಯಾಸ್ಯಾಮಿ ಯಥಾಬೋಧಂ ಪ್ರಮೇಯನವಮಾಲಿಕಾಮ್ ।।೧।।**

**ಪದಚ್ಛೇದ** - ಇಂದರಾಪತಿಂ, ಅನಮ್ಯ, ಪೂರ್ಣಬೋಧಾನ್, ಗುರೂನ್, ಅಪಿ, ವ್ಯಾಖ್ಯಾಸ್ಯಾಮಿ, ಯಥಾಬೋಧಂ, ಪ್ರಮೇಯನವಮಾಲಿಕಾಮ್

**ಅನ್ವಯ** - (ಅಹಂ) ಇಂದಿರಾಪತಿಂ, ಆನಮ್ಯ, ಪೂರ್ಣಬೋಧಾನ್, ಗುರೂನ್, ಅಪಿ, ಆನಮ್ಯ, ಯಥಾ ಬೋಧಂ, ಪ್ರಮೇಯನವಮಾಲಿಕಾಂ ವ್ಯಾಖ್ಯಾಸ್ಯಾಮಿ

**ಅನ್ವಯಾರ್ಥ** - (ಅಹಂ=ನಾನು) ಇಂದಿರಾಪತಿಂ=ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನನ್ನು, ಆನಮ್ಯ= ಭಕ್ತ್ಯಾದಿ ಅತಿಶಯ ಸಹಿತವಾಗಿ ನಮಸ್ಕರಿಸಿ, ಪೂರ್ಣಬೋಧಾನ್=ಸರ್ವಜ್ಞರಾದ ಶ್ರೀಮಧ್ವಾಚಾರ್ಯರೆಂಬ ಗುರುಗಳನ್ನೂ ಗುರೂನ್ ಅಪಿ=ಇತರ ಗುರುಗಳನ್ನೂ (ನನ್ನ ಸಾಕ್ಷಾತ್ ಗುರುಗಳನ್ನೂ) (ಆನಮ್ಯ=ಯಥಾಯೋಗ,ವಾಗಿ ಭಕ್ತ್ಯಾದ್ಯತಿಶಯ ಪೂರ್ವಕವಾಗಿ ನಮಸ್ಕರಿಸಿ) ಯಥಾಬೋಧಂ=ನನ್ನ ತಿಳುವಳಿಕೆಗೆ ಅನುಸಾರವಾಗಿ (ಶಿಷ್ಯರ ತಿಳುವಳಿಕೆಗೆ ಅನುಸಾರವಾಗಿ) ಪ್ರಮೇಯನವಮಾಲಿಕಾಂ=ಪ್ರಮೇಯನವಮಾಲಿಕಾ ಎಂಬ ಗ್ರಂಥವನ್ನು (ಅಣುಮಧ್ವವಿಜಯವನ್ನು) ವ್ಯಾಖ್ಯಾಸ್ಯಾಮಿ= ವ್ಯಾಖ್ಯಾನ ಮಾಡುವೆನು.

**ಇಹಾನ್ವಯಮುಖೇನೈವ ಶ್ಲೋಕಾರ್ಥೋ ನಿರೂಪ್ಯತೇ**
**ಗೂಢಭಾವಪ್ರಕಾಶಶ್ಚ ಕ್ರಿಯತೇ ಪ್ರೀತಯೇ ಹರೇಃ ।।೨।।**

**ಪದಚ್ಛೇದ** - ಇಹ, ಅನ್ವಯ ಮುಖೇನ, ಏವ, ಶ್ಲೋಕಾರ್ಥಃ, ಅಪಿ, ನಿರೂಪ್ಯತೇ, ಗೂಢಭಾವಪ್ರಕಾಶಃ ಚ, ಕ್ರಿಯತೇ, ಪ್ರೀತಯೇ, ಹರೇಃ

**ಅನ್ವಯ** - ಇಹ (ಮಯಾ) ಅನ್ವಯಮುಖೇನ, ಏವ, ಶ್ಲೋಕಾರ್ಥ, ಅಪಿ ನಿರೂಪ್ಯತೇ, ಹರೇಃ ಪ್ರೀತಯೇ, ಗೂಢಭಾವಪ್ರಕಾಶಃ, ಚ, ಕ್ರಿಯತೇ.

**ಅನ್ವಯಾರ್ಥ** - ಇಹ=ಈ ವ್ಯಾಖ್ಯಾನದಲ್ಲಿ (ಮಾಯಾ=ನನ್ನಿಂದ) ಅನ್ವಯಮುಖೇನ **ಏವ=ಅನ್ವಯದ** ಮೂಲಕವಾಗಿಯೇ (ಅನ್ವಯವನ್ನು ಹೇಳುವಾಗಲೇ) ಶ್ಲೋಕಾರ್ಥಃ ಅಪಿ= ಶ್ಲೋಕದ ಅರ್ಥವೂ **ಕೂಡ, ನಿರೂಪ್ಯತೇ=** ಹೇಳಲ್ಪಡುತ್ತದೆ. ಹರೇಃ=ಶ್ರೀಹರಿಯ, ಪ್ರೀತಯೇ=ಪ್ರೀತಿಗೋಸ್ಕರ, ಗೂಢಭಾವಪ್ರಕಾಶಃ ಚ=ರಹಸ್ಯವಾದ **ಅಣುಮಧ್ವವಿಜಯ** ಶ್ಲೋಕದ ಅಭಿಪ್ರಾಯಪ್ರಕಾಶವೂ ಕ್ರಿಯತೇ=ಮಾಡಲ್ಪಡುತ್ತದೆ.

ಇಹಖಲು ಸಂಸಾರಕಾಂತಾರೇ=ಈ ಸಂಸಾರವೆಂಬ ದುರ್ಗಮವಾದ (ಅಡವಿಯಲ್ಲಿ) ದಾರಿಯಲ್ಲಿ, ಸಂಚರೋದರ್ಕದುಃಖಾಲನಲಸಂತಪ್ತ ನಿಜಜನಕುಮುದವೃಂದಾನಿ, ಸಂಚಾರ=ಸಂಚರಿಸುವುದರಿಂದ, ಉದರ್ಕ=ಮುಂದೆ ಬರುವ ಫಲರೂಪವಾದ, ದುಃಖಾನಲ=ದುಃಖವೆಂಬ ಅಗ್ನಿಯಿಂದ, ಸಂತಪ್ತ=ತುಂಬಾ ತಾಪಹೊಂದಿರುವ, ನಿಜಜನ=ತನ್ನ ಭಕ್ತಜನರೆಂಬ, ಕುಮುದವೃಂದಾನಿ=ನೈದಿಲೆ ಹೂವುಗಳ ರಾಶಿಗಳನ್ನು, ಅನುಜಿಘೃಕ್ಷು=ಅನುಗ್ರಹಿಸುವ ಇಚ್ಛೆಯುಳ್ಳ, ನಾರಾಯಣ ಪಂಡಿತಾಚಾರ್ಯಃ=ಶ್ರೀಮನ್ನಾರಾಯಣಪಂಡಿತಾಚಾರ್ಯರು, ನಿಖಿಲಸಂತಾಪಶಾಮಕ ಭಗವತ್ ಪ್ರಸಾದೋನ್ಮಿಲಕತದ್ಭಕ್ತಿ ನಿದಾನಾಖಿಲಗುರುವಾಯುಭಕ್ತಿಜನಕತದವಾರಲೀಲಾನುಸಂಧಾನಾಯ, ನಿಖಿಲ=ಎಲ್ಲಾ, ಸಂತಾಪ=ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ಮೂರುವಿಧ ಸಂತಾಪಗಳ, ಶಾಮಕ=ಪರಿಹಾರಕವಾದ, ಭಗವತ್ ಪ್ರಸಾದ=ಷಣ್ಗುಣೈಶ್ವರ್ಯಸಂಪನ್ನನಾದ ಶ್ರೀಮನ್ನಾರಾಯಣನ, ಪ್ರಸಾದ=ಅನುಗ್ರಹದ, ಉನ್ನೀಲಕ=ಪ್ರಾಕಟ್ಯವನ್ನು ಉಂಟುಮಾಡುವ, ತದ್ಭಕ್ತಿ=ಆ ಶ್ರೀಹರಿಯಲ್ಲಿ ಮಾಡಬೇಕಾದ ಮಹಾತ್ಮ್ಯಜ್ಞಾನ ಪೂರ್ವಕ ಸುದೃಢ ಸ್ನೇಹಕ್ಕೆ, ನಿದಾನ=ಕಾರಣವಾದ, ಅಖಿಲಗುರು=ಸಮಸ್ತ ಲೋಕಕ್ಕೆ ಗುರುಗಳಾದ, ವಾಯು=ಶ್ರೀ ಮುಖ್ಯ ವಾಯುದೇವರ, ಭಕ್ತಿ=ಯಥಾಯೋಗ್ಯವಾದ ಮಹಾತ್ಮ್ಯಜ್ಞಾನಪೂರ್ವಕ ಸುದೃಢ ಸ್ನೇಹರೂಪವಾದ ಭಕ್ತಿಗೆ, ಜನಕ=ಉತ್ಪಾದಕವಾದ, ತದವತಾರ=ಆ ಮುಖ್ಯ ವಾಯುದೇವರ ಅವತಾರಗಳ, ಲೀಲಾ= ಕ್ರೀಡಾರೂಪವಾದ ಮಹಿಮೆಗಳ, ಅನುಸಂಧಾನಾಯ=ಮನಸ್ಸಿನಲ್ಲಿ ಭಾವನೆ ಮೂಡುವುದಕ್ಕೋಸ್ಕರ, ತಲ್ಲೀಲಾಃ=ಆ ವಾಯುದೇವರ ಲೀಲೆಗಳನ್ನು, ಸಂಜಿಘೃಕ್ಷುಃ=ಸಂಗ್ರಹಿಸುವ ಇಚ್ಛೆ ಉಳ್ಳವರಾಗಿ, ಆದೌ=ಮೊದಲು, ಹನುಮದ ವತಾರಲೀಲಾಂ=ಹನುಮಂತದೇವರ ಅವತಾರದ ಲೀಲೆಯನ್ನು, ಸಂಗೃಹ್ಣಾತಿ=ಸಂಗ್ರಹಿಸುತ್ತಾರೆ. ಶ್ರೀಶೇತಿ=ಶ್ರೀಶಪ್ರೀತ್ಯೈ ಇತ್ಯಾದಿಯಿಂದ.

**ಪ್ರಥಮ ಶ್ಲೋಕವ್ಯಾಖ್ಯಾನ** - **ಶ್ರೀ ಶಸ್ಯ=ಲಕ್ಷ್ಮೀಪತಿಯಾದ** ಶ್ರೀಮನ್ನಾರಾಯಣನ, ಪ್ರೀತ್ಯೈ=ಪ್ರೀತಯೇ ಪ್ರೀತ್ಯೈ ಎಂದರೆ ಪ್ರೀತಿಗೋಸ್ಕರ (ಸಂತೋಷಕ್ಕೋಸ್ಕರ) ಙಿತಿಹ್ರಸ್ವಶ್ಚವಾನದೀತ್ವಂ=ಙೇ ಚತುರ್ಥೀ ಏಕವಚನ, ಙಸಿ=ಪಂಚಮೀ ಏಕವಚನ, ಙಸ್=ಷಷ್ಠೀ ಏಕವಚನ, ಙಿ=ಸಪ್ತಮೀ ಏಕವಚನ ಪ್ರತ್ಯಯಗಳಿಗೆ ಸಂಸ್ಕೃತ ವ್ಯಾಕರಣದಲ್ಲಿ ಙಿತ್ ಪ್ರತ್ಯಯಗಳೆಂದು ಹೆಸರು, ಏಕೆಂದರೆ ಈ ಪ್ರತ್ಯಯಗಳಲ್ಲಿರುವ ಙಕಾರಕ್ಕೆ ಇತ್ ಎಂಬ ಸಂಜ್ಞೆಯು ಬಂದು ಅವುಗಳಿಗೆ ಲೋಪವಾಗುತ್ತದೆ. ಏ, ಅಸ್, ಅಸ್, ಇ ಎಂದಿಷ್ಟೇ ಉಳಿಯುತ್ತದೆ. ಈ ನಾಲ್ಕು ಪ್ರತ್ಯಯಗಳು ಬಂದಾಗ ಹ್ರಸ್ವವಾದ ಇಕಾರಾಂತ ಉಕಾರಾಂತ ಸ್ತ್ರೀಲಿಂಗ ಶಬ್ದಗಳಿಗೆ ವಿಕಲ್ಪದಿಂದ 'ನದೀ' ಎಂಬ ಸಂಜ್ಞೆಯು ಬರುತ್ತದೆ. ಙಿತಿಹ್ರಸ್ವಶ್ಚ 1-4-6 ನದೀ ಸಂಜ್ಞೆ ಬಂದಾಗ ಪ್ರೀತಿ+ಏ ಎಂದಿರುವಾಗ, ಆಣ್ ನದ್ಯಾ : 7-3-112 **ಎಂಬ** ಸೂತ್ರದಿಂದ ನದೀ ಸಂಜ್ಞೆಯುಳ್ಳ ಶಬ್ಧಗಳ ಮುಂದೆ ಇರುವ ಙಿತ್ ಪ್ರತ್ಯಯಗಳಿಗೆ ಆಟ್ ಆಗಮವು **ಬಂದು** ಪ್ರೀತಿ+ಆ+ಏ ಎಂದಿರುವಾಗ ಆ+ಏ ಗಳು (ಆಟಶ್ಚ 6-1-90) ವೃದ್ಧಿ ಹೊಂದಿ ಐ ಎಂದಾಗಿ **ಪ್ರೀತಿ+ಐ ಎಂದಿರುವಾಗ** ಇಕೋಯಣಚಿ (6-1-77) ಯಣ್ ಸಂಧಿಯು ಬಂದು ಪ್ರೀತ್ಯೈ ಎಂದು ರೂಪವಾಗುತ್ತದೆ, **ಪಕ್ಷೇ ಪ್ರೀತಯೇ ಎಂದೂ** ರೂಪವಿದೆ.) ಈ ಅಭಿಪ್ರಾಯವನ್ನೇ ಙಿತಿ ಹ್ರಸ್ವಶ್ಚವಾನದೀತ್ವಂ' ಎಂಬ ವಾಕ್ಯದಿಂದ **ವ್ಯಾಖ್ಯಾಕಾರರು ಹೇಳುತ್ತಿದ್ದಾರೆ,** ಙಿತಿ=ಙಿತ್ ಪ್ರತ್ಯಯವು ಪರವಾದಾಗ ಹ್ರಸ್ವಸ್ಯ=ಹ್ರಸ್ವಾಂತವಾದ ಶಬ್ದಕ್ಕೆ **ವಾ=ವಿಕಲ್ಪದಿಂದ, ನದೀತ್ವಂ=ನದೀ** ಎಂಬ ಸಂಜ್ಞೆಯು (ಭವತಿ=ಆಗುತ್ತದೆ) ಹಿಂದೆ ಹೇಳಿದಂತೆ ಆಟ್ ಎಂಬ **ಆಗಮವು ಬರುವುದೇ ನದೀ ಸಂಜ್ಞೆಗೆ ಪ್ರಯೋಜನವು.**

**ಪ್ರಜಾತಃ=ಕೇಸರಿಣಃ ಸಕಾಶಾತ್** ಅಂಜನಾಯಾಂ **ಅವತೀರ್ಣಃ=ಕೇಸರಿ ಎಂಬ ವಾನರನಿಂದ** ಅಂಜನಾದೇವಿಯಲ್ಲಿ ಅವತರಿಸಿ ಜನೇರಕರ್ಮಕತ್ವಾತ್‌ಗತ್ಯರ್ಥಾಕರ್ಮಕೇತ್ಯಾದಿನಾ **ಕರ್ತರಿಕ್ತಃ 'ಜನೀಪ್ರಾದುರ್ಭಾವೇ'** ಪ್ರಾದುರ್ಭಾವಾರ್ಥಕವಾದ 'ಜನ್' ಧಾತುವು ಅಕರ್ಮಕವಾದುದರಿಂದ **ಗತ್ಯರ್ಥಾಕರ್ಮಕಶಿಷಶೀಙಸ್ಥಾಸವಸಜನರುಹಜೀರ್ಯತಿಭ್ಯಶ್ಚ** (3-4-72)

ಈ ಧಾತುಗಳಿಗೆ ಕರ್ತರಿ ಮತ್ತು ಭಾವಕರ್ಮಗಳಲ್ಲಿ ಕ್ತ ಪ್ರತ್ಯಯ ಬರುತ್ತದೆ ಎಂದು ಹೇಳಿದ್ದರಿಂದ ಪ್ರಪೂರ್ವಕಜನ್ ಧಾತುವು ಅಕರ್ಮಕವಾದುದರಿಂದ ಕರ್ತರಿಕ್ತ (ತ) ಪ್ರತ್ಯಯವು ಬಂದಿದೆ.

ಸುಮಹಿತ ಮಹಿಮಾ=ದೇವೈಃ ಸಪೂಜಿತ ಮಹಾತ್ಮ್ಯಃ ಶ್ರೀಹನೂಮಾನ್=ಸಮಹಿತ ಮಹಿಮಾ ಎಂದರೆ ದೇವತೆಗಳಿಂದ ಚೆನ್ನಾಗಿ ಪೂಜಿಸಲ್ಪಟ್ಟ ಮಹಾತ್ಮ್ಯವುಳ್ಳ ಶ್ರೀ ಹನೂಮಾನ್ ಶ್ರೀ ಹನುಮಂತನು ಶ್ರೀಶಪ್ರೀತ್ಯೈ ಪ್ರಜಾತಃ ಸುಮಹಿತ ಮಹಿಮಾ ಶ್ರೀ ಹನೂಮಾನ್' ಎಂಬ ವಾಕ್ಯದಿಂದ ಸೂಚಿತವಾಗುವ ಕಥೆಯನ್ನು ಶ್ರೀ ಗುರುರಾಜರು ಸಂಗ್ರಹಿಸುತ್ತಿದ್ದಾರೆ.

ಅನೇನ=ಈ ವಾಕ್ಯದಿಂದ, ಜನನಾಂತರಂ ಏವ=ಹುಟ್ಟಿದ ಕೂಡಲೇ, ಉದ್ಯದಾದಿತ್ಯಂ=ಉದಯಿಸುತ್ತಿರುವ ಸೂರ್ಯನನ್ನು, ಗ್ರಸಿತುಂ=ನುಂಗುವುದಕ್ಕೆ, ಅಭ್ಯತ್ಪತನ್=ಮೇಲಕ್ಕೆ ಹಾರುತ್ತಿರುವ (ಹನುಮಂತನು) ಆದಿತ್ಯಸಮೀಪಸ್ಥಂ= ಸೂರ್ಯನ ಹತ್ತಿರದಲ್ಲಿರುವ, ತತ್ಕಾಂತ್ಯಾ=ಸೂರ್ಯನ ಕಾಂತಿಯಿಂದ, ರಕ್ತಂ=ಕೆಂಪಾಗಿರುವ ರಾಹುಂ=ರಾಹುವನ್ನು ದೃಷ್ಟ್ವಾ=ನೋಡಿ, ಆದಿತ್ಯಂ=ಸೂರ್ಯನನ್ನು, ತ್ಯಕ್ತ್ವಾ=ಬಿಟ್ಟು, ರಾಹುಮೇವ=ರಾಹುವನ್ನೇ, ಅಭಿಸಸಾರ=ಆಕ್ರಮಿಸಲು ಹೋದನು. ರಾಹುಶ್ಚ=ರಾಹುವಾದರೋ, ಇಂದ್ರಂ=ಇಂದ್ರನನ್ನು, ಶರಣಂ ಪ್ರಾಪ=ಶರಣು ಹೊಂದಿದನು, ಇಂದ್ರಶ್ಚ=ಇಂದ್ರಶ್ಚನಾದರೋ, ಶಿಶವೇ=ಶಿಶುವಾಗಿರುವ ಹನುಮಂತನ ಮೇಲೆ, ವಜ್ರಂಮುಮೋಚ=ವಜ್ರಾಯುಧವನ್ನು ಪ್ರಯೋಗಿಸಿದನು. ತೇನ=ಆ ವಜ್ರಾಯುಧ ಪ್ರಯೋಗದಿಂದ (ಅಸ್ಯ ಈ ಹನುಮಂತನ, ಹನುಃ=ಕಪೋಲ ಪ್ರದೇಶವು) ಭಂಗಂ ಆಪ=ಭಂಗವನ್ನು ಹೊಂದಿತು ಇತ್ಯಾದಿಚರಿತಂ=ಇದೇ ಮೊದಲಾದ ಕತೆಯು, ಸೂಚಿತಂ ಭವತಿ=ಸೂಚಿತವಾಗುತ್ತದೆ.

ಮುಂದಿನ ವ್ಯಾಖ್ಯಾನ ಮಾಡುತ್ತಾರೆ, ರಾಮಸ್ಯ=ಶ್ರೀರಾಮನ, ನಿದೇಶಾತ್=ಯಾಯಿ ಇತ್ಯನುಶಾಸನಾತ್=ಎಂದರೆ ಯಾಹಿ=ಹೋಗು ಎಂಬ ಅಪ್ಪಣೆಯಿಂದ, ಉಲ್ಲಂಘಿತಾಬ್ಧಿಃ=ಉತ್ತೀರ್ಣವಾರಿಧಿಃ ಉಲ್ಲಂಘಿತಾಬ್ಧಿಃ ಎಂದರೆ ಉತ್ತೀರ್ಣವಾರಿಧಿಃ ಸಮುದ್ರವನ್ನು ದಾಟಿದವನಾಗಿ, ಉಲ್ಲಂಘಿತಾಬ್ಧಿಃ ಇತಿ ಸಾಮಾನ್ಯೋಕ್ತ್ಯಾ=ಉಲ್ಲಂಘಿತಾಬ್ಧಿ ಎಂದು ಸಾಮಾನ್ಯವಾಗಿ ಹೇಳಿದ್ದರಿಂದ ದ್ವಿಃ ಉಲ್ಲಂಘನಸ್ಯಾಪಿ ಉಕ್ತತ್ವೇವ=ಎರಡು ಬಾರಿ ಸಮುದ್ರವನ್ನು ದಾಟಿದ್ದನ್ನೂ ಹೇಳಿದ್ದರಿಂದ, ಲಂಕಾಂ ಪ್ರತಿಗಂತುಂ=ಲಂಕೆಯನ್ನು ಕುರಿತು ಹೋಗುವುದಕ್ಕೆ, ಅಬ್ಧಿಂತೀರ್ತ್ವಾ=ಸಮುದ್ರವನ್ನು ದಾಟಿ, ಲಂಕಾಯಾಂ=ಲಂಕೆಯಲ್ಲಿ, ಸರ್ವತ್ರ=ಎಲ್ಲಾ ಕಡೆಯಲ್ಲಿಯೂ, ಸೀತಾಂ=ಸೀತೆಯನ್ನು ಅನ್ವಿಷ್ಯ=ಹುಡುಕಿ, ಅಶೋಕೇ=ಅಶೋಕವನದಲ್ಲಿ, ತಾಂ=ಅವಳನ್ನು, ದೃಷ್ಟ್ವಾ=ನೋಡಿ ರಾಮಾಂಗುಲೀಯಂ=ಶ್ರೀರಾಮನ ಉಂಗುರವನ್ನು ತಸ್ಮೈ=ಅವಳಿಗೆ, ದತ್ವಾ=ಕೊಟ್ಟು ತತಃ=ಆ ಸೀತಾದೇವಿಯಿಂದ, ಚೂಡಾಮಣಿಂ ಆದಾಯ=ಚೂಡಾಮಣಿಯನ್ನು ತೆಗೆದುಕೊಂಡು, ಅಶೋಕವನಂ ಉನ್ಮೂಲ್ಯ=ಅಶೋಕವನವನ್ನು ಮುರಿದು, ರಾವಣಸ್ಯ ತೃತೀಯಭಾಗಬಲಂ ಹತ್ವಾ=ರಾವಣನ ಮೂರನೇ ಒಂದಂಶ ಸೈನ್ಯವನ್ನು ನಾಶಮಾಡಿ, ಲಂಕಾಂದಗ್ಧ್ವಾ= ಲಂಕೆಯನ್ನು ಸುಟ್ಟು, ಪುನಃ ಅಬ್ಧಿಂತೀರ್ಣವಾನ್=ತಿರುಗಿ ಸಮುದ್ರವನ್ನು ದಾಟಿದನು, ಇತ್ಯೇತಾವತ್=ಇಷ್ಟು ವೃತ್ತಾಂತವು, ಉಕ್ತಂಭವತಿ=ಹೇಳಲ್ಪಟ್ಟದ್ದಾಗುತ್ತದೆ.

ಅಥರಾಮಂ ದೃಷ್ಟ್ವಾ ಸಕಲ ವೃತ್ತಾಂತ ವಿಜ್ಞಾಪನಾನಂತರಂ, ಅಥ ಎಂದರೆ ರಾಮದೇವರನ್ನು ನೋಡಿ ಎಲ್ಲಾ ವೃತ್ತಾಂತವನ್ನೂ ವಿಜ್ಞಾಪಿಸಿದ ಅನಂತರ, ಸಹರಿಃ ಎಂದರೆ ರಾಮನಿಂದ ಕೂಡಿದವನಾಗಿ, ಎಂದು ಅರ್ಥ ಅಥವಾ ಹರಿಭಿಃ ಸಹಿತ ಇತಿವಾ ಎಂದರೆ ಕಪಿಗಳಿಂದ ಕೂಡಿದವನಾಗಿ ಎಂದಾದರೂ ಅರ್ಥ (ಹರಿ ಶಬ್ದಕ್ಕೆ ಕಪಿ, ಕೃಷ್ಣ, ಸೂರ್ಯ ಇತ್ಯಾದಿ ಅನೇಕ ಅರ್ಥಗಳಿವೆ.) ಸೇತುನಾ=ಸಮುದ್ರ ಸೇತುಬಂಧೇನ, ಸೇತುನಾ ಎಂದರೆ ಸಮುದ್ರಕ್ಕೆ ಸೇತುವನ್ನು ಕಟ್ಟಿಸಿ, ಲಂಕಾಂ ಪ್ರಾಪ್ತಃ ಲಂಕೆಯನ್ನು ತಲುಪಿದವನಾಗಿ ಪ್ರಾಪ್ತಃ ಎಂಬಲ್ಲಿ ಪ್ರ ಉಪಸರ್ಗ ಪೂರ್ವಕ ಆಪ್ ಧಾತುವಿಗೆ 'ಗತಿ' ಎಂಬ ಅರ್ಥವಿರುವುದರಿಂದ (ಗತ್ಯರ್ಥಾ ಕರ್ಮಕ 3-4-72) ಎಂಬ ಸೂತ್ರದಿಂದ ಕರ್ತರಿಕ್ತ ಪ್ರತ್ಯಯ, ಪಿಷ್ಟದುಷ್ಟಃ=ಪಿಷ್ಟಃ ಮುಷ್ಟಿನಾ ಚೂರ್ಣೀಕೃತಃ ದುಷ್ಟಃ ರಾವಣಃ ಯೇನಸಃ ಪಿಷ್ಟದುಷ್ಟಃ ಎಂದರೆ ಗುದ್ದಿ ಪುಡಿಮಾಡಲ್ಪಟ್ಟ ರಾವಣನನ್ನುಳ್ಳವನು ಯೆನ=ಯಾವನಿಂದ, ಪಿಷ್ಟಃ ಅಂದರೆ ಮುಷ್ಟಿನಾ=ಮುಷ್ಟಿಯಿಂದ, ಚೂರ್ಣೀಕೃತಃ= ಪುಡಿಮಾಡಲ್ಪಟ್ಟ, ದುಷ್ಟಃ=ರಾವಣನು ಇದ್ದಾನೋ, ಅವನು ಪಿಷ್ಟದುಷ್ಟ ಅನ್ನಿಸಿಕೊಳ್ಳುತ್ತಾನೆ. ಭೂಭೃತಂ=ಗಂಧಮಾದನ

ಪರ್ವತಂ ಭೂಭೃತಂ ಎಂದರೆ ಗಂಧಮಾದನಪರ್ವತವನ್ನು, ನಯತಿ=ಪ್ರಾಪಯತಿ, ನಯತಿ ಎಂದರೆ ಒಯ್ಯುತ್ತಾನೆ. ಕಪೀನ್ ಉಜ್ಜೀವಯಿತುಂ ಇತಿ=ಕಪಿಗಳನ್ನು ಬದುಕಿಸಲು ಎಂದು ವಿಗ್ರಹ ಇಟ್ಟುಕೊಂಡಾಗ, ಭೂಭೃನ್ನೀಃ ಎಂದು ರೂಪವಾಗುತ್ತದೆ. ಭೂಭೃನ್ನೀಃ ಎಂಬಲ್ಲಿ ಸತ್ಸೂದ್ವಿಷ (ದ್ರುಹದುಹಯುಜವಿದಭಿದಚ್ಛಿದಜಿನೀರಾಜಾಮುಸರ್ಗೇऽಪಿಕ್ವಿಪ್ 3-2-61) ಇತ್ಯಾದಿನಾ ಕ್ವಿಪ್ ಸತ್ಸುದ್ವಿಷ ಇತ್ಯಾದಿ ಸೂತ್ರದಿಂದ ಕ್ವಿಪ್ ಪ್ರತ್ಯಯ. ಭೂಭೃನ್ನೀಃ+ರಾವಣಾರಿಂ ಎಂದು ಇರುವಾಗ ಸಂಹಿತಾಯಂ ರೋರಿ ಇತಿ ರೆಫಸ್ಯಲೋಪಾತ್ ಢ್ರಲೋಪ ಇತಿದೀರ್ಘಶ್ಚ. ಭೂಭೃನ್ನೀಃ+ರಾವಣಾರಿಂ ಎಂದಿರುವಾಗ ಸಂಹಿತಾವಿವಕ್ಷೆ ಮಾಡಿದಾಗ ವಿಸರ್ಜನೀಯಸ್ಯಸಃ (8-3-34) ಎಂಬ ಸೂತ್ರದಿಂದ ಸಕಾರ ಬಂದು ಸಸಜುಷೋರುಃ 8-2-66 ಎಂಬ ಸೂತ್ರದಿಂದ ಸಕಾರಕ್ಕೆ ರುತ್ವ ಬಂದಾಗ ಭೂಭೃನ್ನೀರ್+ರಾವಣಾರಿಂ ಎಂದಾಯಿತು. ಅನಂತರ ರೋರಿ 8-3-14 ರೇಫಕ್ಕೆ ರೇಫ ಪರವಾದಾಗ ಪೂರ್ವರೇಫಕ್ಕೆ ಲೋಪವಾಗುತ್ತದೆ ಎಂದು ಮೊದಲನೆಯ ರೇಫಕ್ಕೆ ಲೋಪವಾಗಿ ಢ್ರಲೋಪೆ ಪೂರ್ವಸ್ಯದೀರ್ಘೋऽಣಃ 6-3-111 ಢಕಾರ ರೇಫಗಳ ಲೋಪಕ್ಕೆ ನಿಮಿತ್ತವಾದ ಢಕಾರ ರೇಫಗಳು ಪರವಾದಾಗ ಪೂರ್ವದಲ್ಲಿರುವ 'ಅಣ್'ಗೆ ಅ ಇ ಉ ಗಳಿಗೆ ದೀರ್ಘ ಬರುತ್ತದೆ ಎಂಬ ಸೂತ್ರದಿಂದ ದೀರ್ಘ ಬರುತ್ತದೆ. ಭೂಭೃನ್ನೀ ರಾವಣಾರಿಂ ಎಂದಾಯಿತು. ಇಲ್ಲಿ 'ನೀ' ಎಂದು ಮೊದಲೇ ದೀರ್ಘವಿದ್ದರೂ 'ಪರ್ಜನ್ಯವಲ್ಲಕ್ಷಣ ಪ್ರವೃತ್ತಿಃ ಎಂಬ ನ್ಯಾಯದಿಂದ ಮಳೆಯು ನೀರಿರುವ ಸ್ಥಳ ಇಲ್ಲದಿರುವ ಸ್ಥಳ ಎಂಬ ತಾರತಮ್ಯವಿಲ್ಲದೆ ಎಲ್ಲಾ ಕಡೆಯು ಬರುವಂತೆ ಶಾಸ್ತ್ರೋಕ್ತ ಕಾರ್ಯಗಳು ಎಲ್ಲಾ ಕಡೆ ಬರುತ್ತವೆ ಎಂದು ತಿಳಿಯಬೇಕು. ರಾವಣಾರಿಂ= ರಾವಣಂಹತವಂತಂ=ರಾವಣಾರಿಂ ಎಂದರೆ ರಾವಣನನ್ನು ಕೊಂದವನು ಎಂದು ಅರ್ಥ ತತಃ ಅನಂತರ, ಪುರಗಂ ಎಂದರೆ= ಪುರಂ ಆಯೋದ್ಯಾಂಗಚ್ಛತಿ ಇತಿ ಪುರಗಃ ಪುರಂ ಎಂದರೆ ಆಯೋಧ್ಯೆಯನ್ನು ಕುರಿತು ಹೋಗುತ್ತಿರುವವನನ್ನು ಎಂದು ಅರ್ಥ. ಅನ್ಯೇಭ್ಯೋऽಪಿ ದೃಶ್ಯತೇ (ಅನ್ಯತ್ರಾಪಿದೃಶ್ಯತೇ ಇತಿ ವಕ್ತವ್ಯಂ ವಾ 3018) ಇತಿಗಮೇರ್ಡಃ ಅಂತಾತ್ಯಂತಾಧ್ವದೂರ ಪಾರಸರ್ವಾನಂತೇಷು ಡಃ (3-2-48) ಸೂತ್ರದಲ್ಲಿರುವ ಅನ್ಯತ್ರಾಪಿದೃಶ್ಯತೇ ಇತಿವಕ್ತವ್ಯಂ ಎಂಬ ವಾರ್ತಿಕದಿಂದ ಗಮ್ ಧಾತುವಿಗೆ ಡ ಪ್ರತ್ಯಯ. ರಾವಣಂ ಹತ್ವಾ ಸ್ವಪುರಂಗತ್ವಾ ಪಟ್ಟಾಭಿಷಿಕ್ತಃ ಇತ್ಯರ್ಥಃ, 'ರಾವಣಾರಿಂ ಪುರಗಂ' ಎಂಬ ಎರಡು ವಿಶೇಷಣಗಳಿಂದ ರಾವಣನನ್ನು ಕೊಂದು ತನ್ನ ಅಯೋಧ್ಯಾ ಪಟ್ಟಣಕ್ಕೆ ಹೋಗಿ ಪಟ್ಟಾಭಿಷಿಕ್ತನಾದವನು ಎಂದು ಅರ್ಥ (ಅಭಿಪ್ರಾಯ) ಉರುದಯಂ=ಉರ್ವೀದಯಾಯಸ್ಯಸಃ

ತಥೋಕ್ತಃ ತಂ ಉರುದಯಂ ಎಂಬಲ್ಲಿ ಉರ್ವೀದಯಾಯಸ್ಯಸಃ ಯಾವನಿಗೆ ಹೆಚ್ಚಾದ ದಯೆಯಿದೆಯೋ ಅವನು 'ಉರುದಯ' ಅಂತಹವನನ್ನು ಸ್ವಸ್ಮಿನ್ ಅಧಿಕದಯಾಂ ಕುರ್ವಾಣಂ ಇತ್ಯರ್ಥಃ ತನ್ನಲ್ಲಿ ಹೆಚ್ಚಾದ ದಯೆಯನ್ನು ಮಾಡುವವನು ಎಂದು ಅರ್ಥ ಸ್ತ್ರಿಯಾಃ ಪುವಂತ್ (ಭಾಷಿತಪುಂಸ್ಕಾದನೂಜ ಸಮಾನಾಧಿಕರಣೇ ಸ್ತ್ರಿಯಾಮಪೂರಣೀ ಪ್ರಿಯಾದಿಷು 6-3-34) ಇತ್ಯುರುಶಬ್ದೆ ಪುಂವದ್ಭಾವಃ, ಉರ್ವೀದಯಾಯಸ್ಯಸಃ ಎಂಬಲ್ಲಿ ಉರ್ವೀಶಬ್ದವು ವಿಗ್ರಹದಲ್ಲಿ ಸ್ತ್ರೀಲಿಂಗವಾಗಿದ್ದರೂ ಸಮಾಸದಲ್ಲಿ ಅದು ಪುಲ್ಲಿಂಗದಂತೆ ಆಗುತ್ತದೆ. ಗೋಸ್ತ್ರಿಯೋಃ (ಉಪಸರ್ಜನಸ್ಯ 1-2-48) ಇತಿದಯಾಶಬ್ದೇಹ್ರಸ್ವಃ ಗೋಸ್ತ್ರಿಯೋರುಪಸರ್ಜನಸ್ಯ ಎಂಬ ಸೂತ್ರದಿಂದ ದಯಾಶಬ್ದಕ್ಕೆ ಸಮಾಸದಲ್ಲಿ ಹ್ರಸ್ವ ಬಂದಿದೆ. ಸಸೀತಂ ಸೀತಾ ಸಮೇತಂ, ಸಸೀತಂ ಎಂದರೆ ಸೀತಾಸಹಿತ ಎಂದು ಅರ್ಥ ರಾಮಂ=ಶ್ರೀರಾಮನನ್ನು, ಪೂಜಾಯಿತ್ವಾ=ಸರ್ವೈಃಕರಣೈಃ ಸಂಪೂಜ್ಯ=ಎಲ್ಲಾ ಕರಣಗಳಿಂದಲೂ ಚೆನ್ನಾಗಿ ಪೂಜಿಸಿ, ಕಿಂಪೂರಷೆ ಕಿಂಪುರುಷಖಂಡೇ= ಕಿಂಪುರುಷ ಖಂಡದಲ್ಲಿ, ತಂರಾಮಂ=ಆ ರಾಮನನ್ನು, ಸತತಂ= ಯಾವಾಗಲೂ, ಪಶ್ಯನ್=ಅಪರೋಕ್ಷೀ ಕುರ್ವನ್ ಪಶ್ಯನ್ ಎಂದರೆ ಅಪರೋಕ್ಷವಾಗಿ (ಪ್ರತ್ಯಕ್ಷವಾಗಿ) ನೋಡುತ್ತಾ, ಮಹಾನ್ ಪ್ರಾಣಮುಖ್ಯಃ=ಪ್ರಾಣೇಷುಜೀವೇಷು ಯದ್ವಾ ಇಂದ್ರಿಯಾಭಿಮಾನಿಷು ಮಹಾನ್ ಎಂದರೆ ಶ್ರೇಷ್ಠನಾದ, ಪ್ರಾಣ ಎಂದರೆ ಜೀವರಲ್ಲಿ ಅಥವಾ ಪ್ರಾಣ ಎಂದರೆ ಇಂದ್ರಿಯಾಭಿಮಾನಿಗಳಾದ ದೇವತೆಗಳಲ್ಲಿ ಮುಖ್ಯಃ=ಎಂದರೆ ಶ್ರೇಷ್ಠನಾದ (ಮುಖ್ಯಪ್ರಾಣನು ಸಃ ಅಂಥವನು, ಮಾಂ=ನನ್ನನ್ನು, ಅವತಾತ್=ರಕ್ಷತು, ಅವತಾತ್ ಎಂದರೆ ಕಾಪಾಡಲಿ ಎಂದು ಅರ್ಥ ಅವರಕ್ಷಣೇ, (ಅವರಕ್ಷಣ ಗತಿಕಾಂತಿ ಪ್ರೀತಿತೃಪ್ತಿ ಅವಗಮ ಪ್ರವೇಶ ಶ್ರವಣ ಸ್ವಾಮ್ಯರ್ಥಯಾಚನಕ್ರಿಯಾ ಇಚ್ಛಾದೀಪ್ತಿ ಅವಾಪ್ತಿ ಆಲಿಂಗನ ಹಿಂಸಾದಾನಭಾಗವೃದ್ಧಿಷು) ಈ ಧಾತುವಿನ ಆಶಿಷಿಲೋಟ್=ಆಶೀರರ್ಥದಲ್ಲಿ ಲೋಟ್‌ಲಕಾರ ತುಹ್ಯೋಸ್ತಾತಜ್ (ಆಶಿಷ್ಯನ್ಯತರಸ್ಯಾಂ) 7-1-35 ಇತಿ ವಾ ತಾತಜ್ ತುಹ್ಯೋಸ್ತಾತಜ್ ಆಶಿಷ್ಯನ್ಯತರಸ್ಯಾಂ ಎಂಬ ಸೂತ್ರದಿಂದ ವಿಕಲ್ಪದಿಂದ ತಾತಜ್ ಆದೇಶ ಬಂದಿದೆ.॥೧॥

ಈಗ ಮುಖ್ಯಪ್ರಾಣದೇವರ ಎರಡನೆಯ ಅವತಾರವಾದ ಭೀಮಸೇನ ದೇವರ ಲೀಲೆಯನ್ನು ಸಂಗ್ರಹಿಸುತ್ತಾರೆ.

**ಭೀಮೋऽಭೂದ್ಯೋನಭೇದ್ಯಶ್ಚಕಿತರಿಪುಕೃತಾಪತ್ ಪ್ರಣೋದೀ ಸಲೀಲಂ**
**ರಕ್ಷೋಘ್ನಃ ಪ್ರಾಪ್ತಕೃಷ್ಣೋಮುಖಕೃದುತವನೇ ದುಷ್ಟಹಾ ಕೀಚಕಘ್ನಃ ||**
**ಹತ್ವಾದುರ್ಯೋಧನಾದೀನ್ ಸ್ವಪದಮಧಿಗತೋ ಯದ್ದ್ವಿಷಃ ಕ್ರೋಧತಂತ್ರಾಃ**
**ಭೂತ್ವಾಭೂಮೌಕುಶಾಸ್ತ್ರಂ ವ್ಯಧಿಷತ ಮಣಿಮತ್ಪೂರ್ವಕಾಃಪಾತು ಸೋऽಸ್ಮಾನ್ ||೩||**

## ಗೂಢಭಾವಪ್ರಕಾಶ

ದ್ವಿತೀಯಾವತಾರಲೀಲಾಂ ಸಂಗೃಹ್ಣಾತಿ ಭೀಮ ಇತಿ। ಯೋ ಭೀಮಃ ಭೀಮಾನಾಮಾ, ಸನ್ ವಾಯು ಸ್ಪರ್ಶಾತ್ ಕುಂತ್ಯಾಮಭೂತ್। ಯೋ ಭೀಮಃ ನಭೇದ್ಯಃ ಅವಿದಾರ್ಯಃ ಅನೇನ ಜನನೀಕರಾಗ್ರಾತ್. ಶತಶೃಂಗಗಿರೌ, ಪತಿತಃ, ಸನ್, ಶತಶೃಂಗಗಿರಿಂ, ಸ್ವದೇಹ ಸಂಗಾತ್, ಶತಧಾ ಶೀರ್ಣವಾನಿತಿ (ಕಥಾ ಸೂಚಿತಾ ಭವತಿ) ವಜ್ರಾತ್ ಕಠಿನತರ ಶರೀರ ಇತಿಭಾವಃ, ಚಕಿತರಿಪುಕೃತಾಪತ್ ಪ್ರಣೋದೀ, ಬಾಲ್ಯೇ, ಭೀಮಬಲಂ ವೀಕ್ಷ್ಯ ಚಕಿತಾಃ, ಭೀತಾಃ, ಯೇ ರಿಪವಃ, ದುರ್ಯೋಧನಾದಯಃ, ತೈಃ, ಕೃತಾಃ, ಯಾಃ, ಆಪದಃ, ವಿಷಭೋಜನ, ವಿಷಭೃದ್ದಂಶನ, ಗಾಂಗಜಲಪಾತನಾದಿಕಾಃ ತಾಃ ಪ್ರಣುದತಿ, ತಿರಸ್ಕರೋತೀತಿ ಸಃ ತಥೋಕ್ತಃ, ಸಲೀಲಂಲೀಲಯಾ ಸಹಿತಂ ಯಥಾಭವತಿ ತಥಾ ರಕ್ಷೋಘ್ನಃ ರಕ್ಷಃ ಬಕಾಸುರಂಹಂತೀತಿ ಸಃ ತಥೋಕ್ತಃ, ಪ್ರಾಪ್ತಕೃಷ್ಣಃ ಕೃಷ್ಣಂವೇದವ್ಯಾಸಂ ಕೃಷ್ಣಾಂ ದ್ರೌಪದೀಂ, ವಾ, ಪ್ರಾಪ್ತಃ, ಪ್ರಾಪ್ತಕೃಷ್ಣಃ (ಪ್ರಾಪ್ತಪನ್ನೇ ಚ ದ್ವಿತೀಯಯಾ 2-2-4 ಇತಿ ಸಮಾಸಃ) ಮುಖಕೃತ್ ರಾಜಸೂಯಯಜ್ಞಕೃತ್, ದುರ್ಯೋಧನಾದಿತಃ ಅರ್ಧರಾಜ್ಯಂ, ಲಬ್ಧ್ವಾ, ಜರಾಸಂಧಂ, ಹತ್ವಾ, ರಾಜಸೂಯಂ, ಕೃತವಾನ್, ಇತಿಭಾವಃ ಉತ, ಅನಂತರಂ ವನೇ, ವನವಾಸಕಾಲೇ, ದುಷ್ಟಹಾದುಷ್ಟಾನ್, ಮಣಿಮದಾದಿ ದೈತ್ಯಾನ್ ಹಂತೀತಿ, ತಥೋಕ್ತಃ. ಕಾಚಕಘ್ನಃ ವನವಾಸನಂತರ ಮಜ್ಞಾತವಾಸೇ ಷಡುತ್ತರಶತಕೀಚಕಾನ್, ದುಯೋಧನಾದೀಂಶ್ಚ, ಹತ್ವಾ, ಸ್ವಪದಂ, ಸ್ವಲೋಕಂ, ಅಧಿಗತಃ, ಪ್ರಾಪ್ತಃ, ಯದ್‌ದ್ವಿಷಃ, ಯಂ ಭೀಮಂ ದ್ವಿಷಂತೀತಿ, ಯದ್ದ್ವಿಷಃ, ಮಣಿಮತ್ ಪೂರ್ವಕಾಃ, ಮಣಿಮದಾಖ್ಯದೈತ್ಯ ಪೂರ್ವಕಾಃ, ಕ್ರೋಧತಂತ್ರಾಃ, ಕೋಪಪರವಶಾಃ, ಸಂತಃ ಭೂಮೌ, ಭೂತ್ವಾ, ಸಂಕರಾದಿನಾಮತ್ವೇನ ಉತ್ಪದ್ಯ ಕುಶಾಸ್ತ್ರಂ, ದುಃಶಾಸ್ತ್ರಂ ವ್ಯಧಿಷತ ಅಕ್ರ್ಷಃ (ಡುಧಾಂಞಧಾರಣ ಪೋಷಣಯೋಃಲುಜ್) ಆತ್ಮನೇ ಪದೇಷ್ವ ನತಃ ಇತಿಅತ್ ಆದೇಶಃ ಸಭೀಮಃ ಅಸ್ಮಾನ್‌ಪಾತು ರಕ್ಷತು, ಪಾರಕ್ಷಣೇ ಲೋಟ್।

**ಪದಚ್ಛೇದ** – ಭೀಮಃ, ಅಭೂತ್ ಯಃ, ನ ಭೇದ್ಯಃ, ಚಕಿತರಿಪ್ರಕೃತಾಪತ್‌ಪ್ರಣೋದೀ, ಸಲೀಲಂ ರಕ್ಷೋಘ್ನಃ ಪ್ರಾಪ್ತಕೃಷ್ಣಃ ಮುಖಕೃತ್ ಉತ, ವನೇ, ದುಷ್ಟಹಾ, ಕೀಚಕಘ್ನಃ ಹತ್ವಾ ದುರ್ಯೋಧನಾದೀನ್, ಸ್ವಪದಂ ಅಧಿಗತಃ, ಯದ್‌ದ್ವಿಷಃ, ಕ್ರೋಧತಂತ್ರಾಃ, ಭೂತ್ವಾ, ಭೂಮೌ, ಕುಶಾಸ್ತ್ರಂ, ವ್ಯಧಿಷತೆ, ಮಣಿಮತ್ಪೂರ್ವಕಾಃ, ಪಾತು, ಸಃ ಅಸ್ಮಾನ್।

**ಅನ್ವಯ** – ಯಃಭೀಮಃ ಅಭೂತ್(ಯಃ) ನಭೇದ್ಯಃ ಚಕಿತರಿಪುಕೃತಾಪತ್ಪ್ರಣೋದಿ, ಸಲೀಲಂ ರಕ್ಷೋಘ್ನಃ, ಪ್ರಾಪ್ತಕೃಷ್ಣಃ, ಮುಖಕೃತ್ ಉತವನೇದುಷಹಾಕೀಚಕಘ್ನಃ ದುರ್ಯೋಧನಾದೀನ್ ಹತ್ವಾ ಸ್ವಪದಂ ಅಧಿಗತಃ ಯದ್‌ದ್ವಿಷಃ ಮಣಿಮತ್ ಪೂರ್ವಕಾಃ, ಕ್ರೋಧತಂತ್ರಾಃ (ಸಂತಃ) ಭೂಮೌ ಭೂತ್ವಾ ಕುಶಾಸ್ತ್ರಂ ವ್ಯಧಷತ, ಸಃ ಅಸ್ಮಾನ್ ಪಾತು

**ಅವತಾರಿಕಾ** – ಈ ಎರಡನೆಯ ಶ್ಲೋಕದಿಂದ ಭೀಮಾವತಾರ ಕಥೆಯನ್ನು ಸಂಗ್ರಹಿಸುತ್ತಿದ್ದಾರೆ.

**ಅನ್ವಯಾರ್ಥ** – ಯಃ=ಯಾವ ವಾಯುದೇವರು ಭೀಮಃ=ಭೀಮಸೇನನೆಂಬುದಾಗಿ, ಅಭೂತ್=ಅವತರಿಸಿದರೋ, ಯಃ=ಯಾವ ಭೀಮಸೇನ ದೇವರು, ನಭೇಧ್ಯಃ=ಭೇದಿಸಲು (ಸೀಳುವುದು, ಮುರಿಯುವುದು, ಗಾಯವಾಗುವುದು ಮುಂತಾದ ಭೇದನಕ್ಕೆ) ಅಸಾಧ್ಯರೋ ಯಃ=ಯಾವ ಭೀಮಸೇನ ದೇವರು ಚಕಿತ=ಹೆದರಿದ, ರಿಪು=ಶತ್ರುಗಳಾದ

ದುರ್ಯೋಧನಾದಿಗಳಿಂದ, ಕೃತ=ಮಾಡಲ್ಪಟ್ಟ, ಅಪತ್=ವಿಷಪ್ರಾಶನ ಮಾಡಿಸುವುದೇ ಮೊದಲಾದ ಆಪತ್ತುಗಳನ್ನು, ಪ್ರಣೋದಿ ತಿರಸ್ಕರಿಸಿದರೋ (ಯಃ=ಯಾವ ಭೀಮಸೇನ ದೇವರು) ಸಲೀಲಂ=ಅನಾಯಾಸವಾಗಿ ರಕ್ಷೋಘ್ನಃ=ಹಿಡಂಬಾಸುರ ಬಕಾಸುರರನ್ನು ಸಂಹರಿಸಿದರೋ (ಯಃ=ಯಾವ ಭೀಮಸೇನ ದೇವರು) ಪ್ರಾಪ್ತಕೃಷ್ಣಃ=ವೇದವ್ಯಾಸರನ್ನು ಹೊಂದಿದರೋ (ಅಥವಾ ದ್ರೌಪದೀ ದೇವಿಯನ್ನು ಹೊಂದಿದರೋ) ಯಃ=ಯಾವ ಭೀಮಸೇನ ದೇವರು ಮುಖಕೃತ್=ರಾಜಸೂಯಯಾಗವನ್ನು ಮಾಡಿದರೋ, (ಯಃ=ಯಾವ ಭೀಮಸೇನ ದೇವರು) ಉತ=ಅನಂತರ, ವನೇ=ಅರಣ್ಯದಲ್ಲಿ ದುಷ್ಟಹಾ=ಮಣಿಮಂತನೇ ಮೊದಲಾದ ದೈತ್ಯರನ್ನು ಸಂಹರಿಸಿದರೋ (ಯಃ=ಯಾವ ಭೀಮಸೇನ ದೇವರು) ಕೀಚಕಘ್ನಃ=(ಅಜ್ಞಾತವಾಸದಲ್ಲಿ 106 ಒಂದೂ ನೂರ ಆರು) ಕೀಚಕರನ್ನು ಸಂಹರಿಸಿದರೋ, (ಯಃ=ಯಾವ ಭೀಮಸೇನದೇವರು) ದುರ್ಯೋಧನಾದೀನ್= ದುರ್ಯೋಧನನೇ ಮೊದಲಾದವರನ್ನು ಹತ್ವಾ=ಕೊಂದು, ಸ್ವಪದಂ=ತನ್ನ ಲೋಕವನ್ನು ಕುರಿತು, ಅಧಿಗತಃ=ಹೋಗಿ ಸೇರಿದರೋ ಯದ್ ದ್ವಿಷಃ=ಯಾವ ಭೀಮಸೇನ ದೇವರ ಶತ್ರುಗಳಾದ, ಮಣಿಮತ್ ಪೂರ್ವಕಾಃ=ಮಣೀಮಂತನೇ ಮೊದಲಾದವರು, ಕ್ರೋಧ ತಂತ್ರಾಃ (ಸಂತಃ) ಭೀಮಸೇನನ ವಿಷಯದಲ್ಲಿ ಕೋಪ ಪರವಶರಾಗಿ, ಭೂಮೌ=ಭಾರತ ಭೂಮಿಯಲ್ಲಿ, ಭೂತ್ವಾ=ಹುಟ್ಟಿ, ಕುಶಾಸ್ತ್ರಂ=ದುಶ್ಶಾಸ್ತ್ರವನ್ನು ವ್ಯಧಿಷತ=ಮಾಡಿದರೋ, ಸಃ=ಅಂತಹ ಭೀಮಸೇನದೇವರು ಅಸ್ಮಾನ್=ನಮ್ಮನ್ನು ಪಾತು=ರಕ್ಷಿಸಲಿ.

**ತಾತ್ಪರ್ಯ** - ಪಾಂಡು ಮಹಾರಾಜನು ಶಾಪಗ್ರಸ್ತನಾಗಿ ವನದಲ್ಲಿ ಮಾಡುತ್ತಿದ್ದಾಗ ಕುಂತೀದೇವಿಯು ದೂರ್ವಾಸರ ವರಬಲದಿಂದ ದೇವತಾಂಶರಾದ ಮಕ್ಕಳನ್ನು ಪಡೆದಳು. ಅವರಲ್ಲಿ ಯಮಧರ್ಮರಾಜನ ಅಂಶದಿಂದ ಹುಟ್ಟಿದವನು ಧರ್ಮರಾಜನು. ಮುಖ್ಯ ಪ್ರಾಣದೇವರ ಸ್ಪರ್ಶ ಮಾತ್ರದಿಂದ ಕುಂತಿದೇವಿಯಲ್ಲಿ ಹುಟ್ಟಿದವರೇ ಭೀಮಸೇನದೇವರು, ಮುಂದೆ ಇಂದ್ರನ ಅಂಶದಿಂದ ಕುಂತಿಯಲ್ಲಿ ಅರ್ಜುನನು ಹುಟ್ಟಿದನು. ಅಶ್ವಿನೀ ದೇವತೆಗಳ ಅನುಗ್ರಹದಿಂದ ಮಾದ್ರೀ ದೇವಿಯಲ್ಲಿ ನಕುಲ ಸಹದೇವರು ಜನಿಸಿದರು. ಇವರಲ್ಲಿ ಭೀಮಸೇನದೇವರು ಚಿಕ್ಕವರಾಗಿದ್ದಾಗ ಕುಂತೀದೇವಿಯು ಅವರನ್ನು ಎತ್ತಿಕೊಂಡು ಶತಶೃಂಗ ಪರ್ವತದಲ್ಲಿ ದೇವರ ದರ್ಶನಕ್ಕಾಗಿ ಹೋಗುತ್ತಿದ್ದಳು. ಆಗ ಒಂದು ಹುಲಿಯು ಗರ್ಜಿಸಿತು. ಹೆದರಿದ ಕುಂತಿದೇವಿಯ ಕೈಯಿಂದ ಮಗುವು ಬಿದ್ದುಹೋಯಿತು. ಕುಂತಿಯು ಮಗುವಿಗೆ ಏನಾಗುತ್ತದೋ ಎಂದು ಬಹಳವಾಗಿ ಹೆದರಿದಳು. ಆದರೆ ಮಗುವಿಗೆ ಯಾವ ತೊಂದರೆಯೂ ಆಗಲಿಲ್ಲ, ಅಷ್ಟೇ ಅಲ್ಲ, ಆ ಪರ್ವತವು ನೂರು ಹೋಳಾಗಿ ಸೀಳಿ ಶತಶೃಂಗ ಪರ್ವತ ಎನಿಸಿಕೊಂಡಿತು. ಇದರಿಂದ ಭೀಮಸೇನದೇವರು ಅಭೇದ್ಯ ಗಾತ್ರರು ಆಖಣಾಶ್ಮಸಮರು (ಅಭೇದ್ಯವಾದ ಶಿಲೆ) ಮುಖ್ಯ ವಾಯುದೇವರ ಅವತಾರರೆಂದು ಸಿದ್ಧವಾಯಿತು. ಕೆಲವು ಸಮಯದ ಅನಂತರ ಪಾಂಡುರಾಜನು ಮೃತನಾಗಲಾಗಿ ಮಾದ್ರೀ ದೇವಿಯು ಅವನ ಜತೆಗೆ ಸಹಗಮನ ಮಾಡಿದಳು. ಋಷಿಗಳು ಕುಂತಿದೇವಿಯನ್ನು ಅವಳ ಮಕ್ಕಳನ್ನೂ ಹಸ್ತಿನಾವತಿಗೆ ತಂದು ಭೀಷ್ಮ ಧೃತರಾಷ್ಟ್ರಾದಿಗಳ ವಶಕ್ಕೆ ಒಪ್ಪಿಸಿದರು. ಅಲ್ಲಿ ದುರ್ಯೋಧನಾದಿಗಳ ಜತೆಗೆ ಆಟವಾಡುತ್ತಿದ್ದ ಭೀಮಸೇನದೇವರ ಸ್ವಾಭಾವಿಕವಾದ ಬಲಧೈರ್ಯ ಶೌರ್ಯ ಉತ್ಸಾಹಗಳನ್ನು ನೋಡಿ ದುರ್ಯೋಧನಾದಿಗಳು ಹೆದರಿದರು. "ಈ ಭೀಮಸೇನನು ಬದುಕಿ ಉಳಿದರೆ ನಾವು ಬದುಕಿ ಉಳಿಯಲು ಸಾಧ್ಯವಿಲ್ಲ, ಇವನು ಬದುಕಿದ್ದರೆ ನಮಗೆ ರಾಜ್ಯ ಸಿಗಲಾರದು" ಎಂದು ಮುಂತಾಗಿ ಆಲೋಚಿಸಿ ಆ ದುರ್ಯೋಧನಾದಿಗಳು ಬಾಲ್ಯದ ಆಟಪಾಟ ಸಮಯದಲ್ಲಿಯೇ ಭೀಮಸೇನನ ಮೇಲೆ ಮಹತ್ತಾದ ದ್ವೇಷವನ್ನು ಬೆಳೆಸಿದರು. ದುರ್ಯೋಧನನು ಭೀಮಸೇನ ದೇವರನ್ನು ಉಪಾಯದಿಂದ ಕೊಲ್ಲಬೇಕೆಂದು ಆಲೋಚಿಸಿ ವಿಷಮಿಶ್ರಿತವಾದ ಭಕ್ಷ್ಯಭೋಜ್ಯಗಳನ್ನು ಭೋಜನ ಮಾಡಿಸಿದರು. ಗಾಢ ನಿದ್ದೆಯಲ್ಲಿದ್ದ ಭೀಮಸೇನನಿಗೆ ಹಾವುಗಳಿಂದ ಕಚ್ಚಿಸಿದನು. ಶೂಲನೆಡಿಸಿ ಗಂಗೆಯ ಆಳವಾದ ಪ್ರಮಾಣಕೋಟಿಯೆಂಬ ಮಡುವಿನಲ್ಲಿ ಹಗ್ಗದಿಂದ ಬಿಗಿದು ಕಟ್ಟಿ ಭೀಮಸೇನನನ್ನು ತಳ್ಳಿಸಿದನು. ಆದರೂ ಭೀಮಸೇನನಿಗೆ ಯಾವ ಅಪಾಯವೂ ಆಗಲಿಲ್ಲ, ಅಷ್ಟೆ ಅಲ್ಲ ಪಾತಾಳಕ್ಕೆ ಹೋಗಿ ಅಮೃತಪಾನ ಮಾಡಿದ್ದರಿಂದ ಮತ್ತಷ್ಟು ಬಲಾಭಿವೃದ್ಧಿಯುಂಟಾಯಿತು. ದುರ್ಯೋಧನನು ದುಷ್ಟರ ಜತೆಗೆ ಮಂತ್ರಾಲೋಚನೆ ಮಾಡಿ, ತನ್ನ ತಂದೆಯನ್ನು ಒಪ್ಪಿಸಿ ವಾರಣಾವತ ಎಂಬಲ್ಲಿ ಅರಗಿನ ಅರಮನೆಯನ್ನು ಕಟ್ಟಿಸಿ ಅಲ್ಲಿ ಪಾಂಡವರನ್ನು ವಾಸ ಮಾಡಿಸಿದನು. ಭೀಮಸೇನನು ಅರಗಿನ ಮನೆಗೆ ತಾನೇ ಬೆಂಕಿ ಕೊಟ್ಟು ಮೊದಲೇ ಸಿದ್ಧಪಡಿಸಿದ್ದ ಸುರಂಗದ ಮೂಲಕ ತಾಯಿ, ಅಣ್ಣ ತಮ್ಮಂದಿರನ್ನು ಒಬ್ಬನೇ ಹೊತ್ತುಕೊಂಡು ಗಂಗೆಯನ್ನು

ದಾಟಿ ಆಚೆಯ ದಡಕ್ಕೆ ಹೋಗಿ ಅವರನ್ನೆಲ್ಲಾ ಒಂದು ಮರದ ಬುಡದಲ್ಲಿ ಮಲಗಿಸಿದನು. ಆ ಕಾಡಿನಲ್ಲಿದ್ದ ನರಭಕ್ಷಕನಾದ ಹಿಡಂಬ ರಾಕ್ಷಸನು ಯುದ್ಧಕ್ಕೆ ಬರಲಾಗಿ ಭೀಮಸೇನ ದೇವರು ಏಕಾಂಗಿಯಾಗಿ ಅವನನ್ನು ಸಂಹರಿಸಿದರು. ಆ ರಾಕ್ಷಸನ ತಂಗಿಯಾದ ಹಿಡಿಂಬಿಯು ಭೀಮಸೇನ ದೇವರನ್ನು ತಾನು ಮದುವೆಯಾಗಬೇಕೆಂದು ಬೇಡಿದಾಗ ಪಾಂಡವರ ಅಣ್ಣನಿಗೆ ಮದುವೆಯಾಗದೆ ತಮ್ಮನಿಗೆ ಮದುವೆಯಾಗುವುದು ಸರಿಯಲ್ಲ ಎಂಬ ಧರ್ಮಸಂಶಯ ಪರಿಹಾರಕ್ಕಾಗಿ ಅಲ್ಲಿಗೆ ಆಗಮಿಸಿದ ವೇದವ್ಯಾಸರು ಭೀಮಸೇನನು ಹಿಡಿಂಬೆಯನ್ನು ಮದುವೆಯಾಗಬಹುದು, ಇದರಿಂದ ಧರ್ಮಾತಿಕ್ರಮವಾಗುವುದಿಲ್ಲವೆಂದು ಹೇಳಿದರು. ಭೀಮಸೇನದೇವರು ಹಿಡಿಂಬೆಯನ್ನು ಮದುವೆಯಾಗಿ ಅವಳಲ್ಲಿ ಘಟೋತ್ಕಚನೆಂಬ ಮಗನನ್ನು ಪಡೆದರು. ಅಲ್ಲಿಂದ ಪಾಂಡವರು ಏಕಚಕ್ರನಗರಕ್ಕೆ ಹೋಗಿ ಅಲ್ಲಿ ಒಬ್ಬ ಕುಂಬಾರನ ಮನೆಯಲ್ಲಿದ್ದರು. ಆ ಊರಿನ ಹತ್ತಿರದಲ್ಲಿದ್ದ ಮನುಷ್ಯಮಾಂಸಭಕ್ಷಕನಾದ ಬಕಾಸುರನನ್ನು ಭೀಮಸೇನದೇವರು ಕೊಂದರು. ಅಲ್ಲಿಂದ ದ್ರುಪದರಾಜನ ರಾಜ್ಯಕ್ಕೆ ಹೋಗಿ ಅಲ್ಲಿ ದ್ರೌಪದೀ ಸ್ವಯಂವರದಲ್ಲಿ ಭಾಗವಹಿಸಿ ದ್ರೌಪದಿಯನ್ನು ಮದುವೆಯಾದರು. ಆಗ ಅಲ್ಲಿಗೆ ಬಂದಿದ್ದ ಶ್ರೀಕೃಷ್ಣನನ್ನೂ, ವೇದವ್ಯಾಸರನ್ನೂ ಸಂದರ್ಶಿಸಿ ಸಂತೋಷಪಟ್ಟರು. ಅಲ್ಲಿಂದ ಹಸ್ತಿನಾವತಿಗೆ ಹಿಂತಿರುಗಿ ಭೀಷ್ಮದ್ರೋಣಾದಿಗಳ ಸಲಹೆಯಂತೆ ಅರ್ಧರಾಜ್ಯವನ್ನು ಪಡೆದು ಇಂದ್ರಪ್ರಸ್ಥದಲ್ಲಿ ರಾಜ್ಯವಾಳುತ್ತಾ ರಾಜಸೂಯ ಯಾಗವನ್ನು ಧರ್ಮರಾಜನಿಂದ ಮಾಡಿಸಿದರು. ಆ ಸಂದರ್ಭದಲ್ಲಿ ಯಾಗಕ್ಕೆ ಮೊದಲೇ ಸಕಲ ಸಾತ್ತ್ವಿಕರಾಜರ ಶತ್ರುವಾದ ಜರಾಸಂಧನನ್ನು ಮಲ್ಲಯುದ್ಧದಲ್ಲಿ ಸೀಳಿಕೊಂದರು. ಮುಂದೆ ದುರ್ಯೋಧನನು ಕಪಟದ್ಯೂತದಿಂದ ಪಾಂಡವರ ರಾಜ್ಯ ಸಂಪತ್ತು ಎಲ್ಲವನ್ನೂ ಗೆದ್ದು ಪಾಂಡವರನ್ನು ವನವಾಸಕ್ಕೆ ಕಳುಹಿಸಿದಾಗ ಅಣ್ಣನ ಮಾತನ್ನು ಮೀರಲಾರದೆ ಹನ್ನೆರಡು ವರ್ಷ ವನವಾಸ ಮಾಡುತ್ತಾ ಆ ಸಂಧರ್ಭದಲ್ಲಿ ಕಿರ್ಮೀರ, ಜಟಾಸುರ, ಮಣಿಮಂತ, ಕ್ರೋಧವಶರು ಮುಂತಾದ ದೈತ್ಯರನ್ನು ಸಂಹರಿಸಿದರು. ವಿರಾಟನಗರದಲ್ಲಿ ಅಜ್ಞಾತವಾಸ ಮಾಡುತ್ತಿರುವಾಗ ನೂರ ಆರು ಮಂದಿ (106) ಕೀಚಕರನ್ನು ಸಂಹರಿಸಿದನು. ಮುಂದೆ ಮಹಾಭಾರತಯುದ್ಧದಲ್ಲಿ ಕೃಷ್ಣನ ಪ್ರೀತ್ಯರ್ಥವಾಗಿ ಭಾಗವಹಿಸಿ ದುರ್ಯೋಧನಾದಿ ಸಮಸ್ತ ಶತ್ರುಗಳನ್ನು ಸಂಹರಿಸಿ ತನ್ನ ಅಣ್ಣನಾದ ಧರ್ಮರಾಜನಿಗೆ ಪಟ್ಟಾಭಿಷೇಕ ಮಾಡಿಸಿ ತಾನು ಯುವ ರಾಜನಾಗಿದ್ದು ಧರ್ಮದಿಂದ ರಾಜ್ಯವನ್ನಾಳಿ ಕೃಷ್ಣಾನುಗ್ರಹವನ್ನು ಸಂಪಾದಿಸಿ, ಅನಂತರ ತನ್ನ ಲೋಕಕ್ಕೆ ತೆರಳಿದರು. ಪರಮಾತ್ಮನ ಏಕಾಂತಭಕ್ತರಾದ ಅತುಲಬಲ-ಜ್ಞಾನಸಂಪನ್ನರಾದ ಭೀಮಸೇನ ದೇವರಲ್ಲಿ ದ್ವೇಷವನ್ನು ತಾಳಿದ ಮಣಿಮಂತ ಮುಂತಾದ ದೈತ್ಯರು ನೇರವಾಗಿ ಭೀಮಸೇನನನ್ನು ಜಯಿಸಲು ಸಾಧ್ಯವಾಗದೆ ಸಂಕರ ಮುಂತಾದ ರೂಪದಿಂದ ಭೂಮಿಯಲ್ಲಿ ಕಲಿಯುಗದಲ್ಲಿ ಜನಿಸಿ ದುಶ್ಶಾಸ್ತ್ರಗಳನ್ನು ರಚಿಸಿಧರು. ಅಂದು ಭೀಮಸೇನದೇವರಿಂದ ಪರಾಜಿತರಾದ ದೈತ್ಯರು ಭೂಮಿಯಲ್ಲಿ ವ್ಯಾಪಿಸಿ ತತ್ತ್ವಜ್ಞಾನ ಪ್ರಪಂಚವನ್ನು ಅಂಧಕಾರಮಯವಾಗಿ ಮಾಡಿದರು. ಹೀಗೆ ದುರ್ಜನ ಶಿಕ್ಷಕರಾಗಿ ಸಜ್ಜನ ಸಂರಕ್ಷಕರಾಗಿರುವ, ತನ್ನ ಮುಂದಿನ ಅವತಾರಕ್ಕೆ ತಾನೇ ಭೂಮಿಕಾ ರಚನೆಯನ್ನು ಮಾಡಿಕೊಂಡಿರುವ ವಾಯುದೇವರ ಅವತಾರರಾದ ಭೀಮಸೇನದೇವರು ನಮ್ಮನ್ನು ಕಾಪಾಡಲಿ.

**ವಿಗ್ರಹ** - ನ+ಭೇದ್ಯಃ ನಭೇಧ್ಯಃ 'ನಞ್' ಸಮಾನಾರ್ಥಕವಾದ ನಶಬ್ದದ ಜೊತೆಗೆ ಸಮಾಸವಾಗಿದೆಯೆಂದು ತಿಳಿಯಬೇಕು. ಇದು 'ನಞ್' ಅಲ್ಲ ಅದುದರಿಂದಲೇ 'ನ' ಎಂಬಲ್ಲಿಯ ನಕಾರಕ್ಕೆ ಲೋಪವಾಗಿ 'ಅಭೇದ್ಯ' ಎಂದು ಆಗಲಿಲ್ಲ. 'ನಞ್' ಜೊತೆಗೆ ಸಮಾಸವಾದಾಗ ಅಭೇದ್ಯ ಎಂಬ ರೂಪವೂ ಉಂಟು. ಚಕಿತಾಶ್ಚತೇರಿಪವಶ್ಚ ಚಕಿತರಿಪವಃ, ಚಕಿತರಿಪುಭಿಃ ಕೃತಾಃ ಚಕಿತರಿಪುಕೃತಾಃ ಚಕಿತರಿಕೃತಾಶ್ಚ ತಾಃ ಆಪದಶ್ಚ ಚಕಿತರಿಪುಕೃತಾಪದಃ, ತಾಃ ಪ್ರಣುದತಿ ತಾಚ್ಛೀಲ್ಯೇನ ಇತಿ ಚಕಿತರಿಪುಕೃತಾಪತ್‌ಪ್ರಣೋದೀ, ಲೀಲಯಾ ಸಹಿತಂ ಯಸ್ಮಿನ್‌ಕರ್ಮಣಿ ತದ್ಯಥಾ ಭವತಿತಥಾ ಸಲೀಲಂ, ರಕ್ಷಃ ಹಂತಿ ಇತಿ ರಕ್ಷೋಘ್ನಃ, ಪ್ರಾಪ್ತಃ'ಕೃಷ್ಣಂ ಪ್ರಾಪ್ತಕೃಷ್ಣಃ ಪ್ರಾಪ್ತಪನ್ನೇ ಚ ದ್ವಿತೀಯಾ 2-2-4 ಎಂಬ ಸೂತ್ರದಿಂದ ಸಮಾಸ, ಕೃಷ್ಣಂ ಪ್ರಾಪ್ತಃ ಕೃಷ್ಣಪ್ರಾಪ್ತಃ ಎಂದು ರೂಪವಾಗುತ್ತದೆ. ಆಗ ದ್ವಿತೀಯಾ ಶ್ರಿತಾತೀತ ಪತಿತಗತಾತ್ಯಸ್ತ ಪ್ರಾಪ್ತಾಪನ್ನೈಃ 2-1-24 ಎಂಬ ಸೂತ್ರದಿಂದ ಸಮಾಸ. ಅರ್ಥದಲ್ಲಿ ವ್ಯತ್ಯಾಸವಿಲ್ಲ.) ಮಖಂ ಕೃತವಾನ್ ಮಖಕೃತ್ ದುಷ್ಟಾನ್ ಹಂತೀತಿ ದುಷ್ಟಹಾ, ಕೀಚಕಂ ಹಂತೀತಿ ಕೀಚಕಘ್ನಂ ದುರ್ಯೋಧನಃ ಆದಿಃ ಯೇಷಾಂತೇ

ದುರ್ಯೋಧನಾದಯಃ ತಾನ್ ಸ್ವಸ್ಯಪದಂ, ಸ್ವಪದಂ, ತತ್ ಯಸ್ಯದ್ವಿಷಃ ಯದ್ ದ್ವಿಷಃ, ಕ್ರೋಧಃ ತಂತ್ರಂ ಯೇಷಾಂ ತೇ ಕ್ರೋಧತಂತ್ರಾಃ ಕುತ್ಸಿತಂ ಚತತ್ ಶಾಸ್ತ್ರಂ ಚ ಕುಶಾಸ್ತ್ರಂ, ಮಣಿಮಾನ್ ಪೂರ್ವಃ ಯೇಷಾಂತೇ ಮಣಿಮತ್ಪೂರ್ವಕಾಃ.

**ಕ್ರಿಯಾಪದ** - ಅಭೂತ್, ಅಭೂತಾಂ, ಅಭೂವನ್, ಅಭೂಃ, ಅಭೂತಂ ಅಭೂತ, ಅಭೂವಂ, ಅಭೂವ ಅಭೂಮ, 'ಭೂಸತ್ತಾಯಾಂ' ಇತಿಸತ್ತಾರ್ಥಕಾತ್ ಭೂಧಾತೋಃ ಆಕರ್ಮಕಾತ್ ಕರ್ತರಿ ಭೂತೇ ಲುಙ್ ಪ್ರ. ಪು. ಏ ಅಭೂತ್ ಇತಿರೂಪಂ. ವಿ+ಅಧಿಷತ ಅಧಿತ ಅಧಿಷತಾಂ ಅಧಿಷತ, ಅಧಿಥಾಃ ಅಧಿಷಾಥಾಂ ಅಧಿಢ್ವಂ, ಅದಿಷಿ ಅಧಿಷ್ವಹಿ, ಅಧಿಷ್ಮ ಹಿ, 'ವಿ' ಉಪಸರ್ಗಪೂರ್ವಕಾತ್ ಧಾರಣಪೋಷಣಾರ್ಥಕಾತ್ ಡುಧಾಞ್ ಧಾರಣಪೋಷಣಯೋಃ ಇತ್ಯಸ್ಮಾದ್ ಧಾತೋಃ ಆತ್ಮನೇಪದಿನಃ ಸಕರ್ಮಕಾತ್ ಕರ್ತರಿ ಭೂತೇಲುಙ್ ಪ್ರ.ಪು.ಬ ವ್ಯಧಿಷತ ಇತಿರೂಪಂ, ಪಾತು, ಪಾತಾತ್, ಪಾತಾಂ, ಪಾಂತು, ಪಾಹಿ, ಪಾತಾತ್, ಪಾತಂ, ಪಾತ, ಪಾನಿ, ಪಾವ, ಪಾಮ, ರಕ್ಷಣಾರ್ಥಕಾತ್ 'ಪಾರಕ್ಷಣೇ' ಇತ್ಯಸ್ಮಾದ್ ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಪ್ರಾರ್ಥನಾಯಾಂ ಲೋಟ್ ಪ್ರ.ಪು.ಏ ಪಾತು ಇತಿರೂಪಂ.

**ಪ್ರಯೋಗ** - ಯಃ ಭೀಮಃ ಅಭೂತ್ (ಕರ್ತರಿ) ಯೇನ ಭಿಮೇನ ಅಭೂಯತ (ಭಾವೇ) ಮಣಿಮತ್ಪೂರ್ವಕಾಃ ಕುಶಾಸ್ತ್ರಂ ವ್ಯಧಿಷತ (ಕರ್ತರಿ) ಮಣಿಮತ್ಪೂರ್ವಕೈಃ ಕುಶಾಸ್ತ್ರಂ ವ್ಯಧಾಯಿ (ಕರ್ಮಣಿ) ಸಃ ಅಸ್ಮಾನ್ ಪಾತು, (ಕರ್ತರಿ) ತೇನವಯಂ ಪಾಯಾಮಹೈ (ಕರ್ಮಣಿ)

**ಎರಡನೆಯ ಶ್ಲೋಕದ** ಗೂಢಾರ್ಥಪ್ರಕಾಶದ ವ್ಯಾಖ್ಯಾನ. ದ್ವಿತೀಯಾವತಾರಲೀಲಾಂ ಸಂಗೃಹ್ಣಾತಿ=ಎರಡನೆಯ ಅವತಾರದ **ಲೀಲೆಯನ್ನು** ಸಂಗ್ರಹಿಸುತ್ತಾರೆ. ಭೀಮ ಇತಿ=ಭೀಮ ಇತ್ಯಾದಿ ಶ್ಲೋಕದಿಂದ, ಯಃ=ಯಾವನು, ಭೀಮಃ= **ಭೀಮನಾಮಾಸನ್ ಭೀಮನೆಂಬ ಹೆಸರುಳ್ಳವನಾಗಿ, ವಾಯುಸ್ಪರ್ಶಾತ್ ಕುಂತ್ಯಾಂ** ಅಭೂತ್=ವಾಯುವಿನ ಸ್ಪರ್ಶದಿಂದ ಕುಂತಿಯಲ್ಲಿ **ಹುಟ್ಟಿದನೋ, ಯಃ ಭೀಮಃ=ಯಾವ ಭೀಮನು, ನಭೇದ್ಯಃ=ಅವಿದಾರ್ಯಃ**=ಸೀಳಲು ಅಶಕ್ಯನಾಗಿದ್ದನೋ, **'ಭೀಮೋऽಭೂದ್ಯೋನಭೇದ್ಯಃ' ಎಂಬ ವಾಕ್ಯದಿಂದ ಸೂಚಿತವಾದ ಕಥೆಯನ್ನು** ಸಂಗ್ರಹಿಸುತ್ತಾರೆ. ಅನೇನ=ಇದರಿಂದ ಜನನೀ ಕರಾಗ್ರಾತ್**=ತಾಯಿಯ ಕೈತುದಿಯಿಂದ, ಶತಶೃಂಗಗಿರೌ=ಶತಶೃಂಗಗಿರಿಯಲ್ಲಿ ಪತಿತಃಸನ್=ಬಿದ್ದವನಾಗಿ, ಶತಶೃಂಗಗಿರಿಂ= ಶತಶೃಂಗಗಿರಿಯನ್ನು, ಸ್ವದೇಹ ಸಂಗಾತ್**=ತನ್ನ ದೇಹದ ಸ್ಪರ್ಶದಿಂದ, ಶತಧಾ=ನೂರು ಹೋಳಾಗಿ, **ಶೀರ್ಣವಾನ್**ಇತಿ= ಸೀಳಿದನೆಂಬ (**ಕಥಾ** ಸೂಚಿತಾ=ಕಥೆಯು ಸೂಚಿತವಾಗಿದೆ) ವಜ್ರಾತ್ ಕಠಿನ ಶರೀರಃ ಇತಿಭಾವಃ=ವಜ್ರಕ್ಕಿಂತಲೂ ಕಠಿಣವಾದ ಶರೀರರವುಳ್ಳವನೆಂದು ಭಾವವು. ಚಕಿತರಿಪುಕೃತಾಪತ್‌ಪ್ರಣೋದಿ=ಈ ಪದಕ್ಕೆ ಅರ್ಥ ಹೇಳುತ್ತಾರೆ. ಬಾಲ್ಯೇ= ಶೈಶವದಲ್ಲಿ ಭೀಮಬಲಂ ವಿಕ್ಷ್ಯ=ಶ್ರೀ ಭೀಮಸೇನದೇವರ ಬಲವನ್ನು ನೋಡಿ ಚಕಿತಾಃ ಭೀತಾಃ=ಚಕಿತಾಃ ಎಂದರೆ ಭೀತಾಃ, ಎಂದರೆ ಹೆದರಿದ, ಯೇರಿಪವಃ=ದುರ್ಯೋಧನಾದಯಃ=ಯಾವ ಶತ್ರುಗಳಾದ ದುರ್ಯೋಧನ ಮೊದಲಾದ ವರಿದ್ದರೋ, ತೈಃ=ಅವರಿಂದ ಕೃತಾಃ=(ಉಂಟು ಮಾಡಲ್ಪಟ್ಟ, ಯಾಃ=ಆಪದಃ ಯಾವ ಅಪತ್ತುಗಳಿವೆಯೋ ಅಂದರೆ ವಿಷಭೋಜನ, ವಿಷಭೃದ್ದಂಶನಗಂಗಾಜಲಪಾತನಾದಿಕಾಃ=ವಿಷಮಿಶ್ರಿತವಾದ ಲಡ್ಡು ಮುಂತಾದವುಗಳನ್ನು ತಿನ್ನಿಸುವುದು, ಹಾವುಗಳಿಂದ ಕಚ್ಚಿಸುವುದು, ಗಂಗಾನದಿಯ ನೀರಿನಲ್ಲಿ ತಳ್ಳಿಸುವುದು ಮೊದಲಾದ, ಆಪತ್ತುಗಳು, ತಾಃ=ಅವುಗಳನ್ನು, ಪ್ರಣುದತಿ=ತಿರಸ್ಕರೋತಿ ಪ್ರಣುದತಿ ಎಂದರೆ ತಿರಸ್ಕರೋತಿ ತಿರಸ್ಕರಿಸುತ್ತಾನೋ, ಇತಿ ಸಃ ತಥೋಕ್ತಃ=ಈ ವ್ಯುತ್ಪತ್ತಿಯಿಂದ ಶ್ರೀ ಭೀಮಸೇನದೇವರು ಹಾಗೆ ಹೇಳಲ್ಪಟ್ಟ ಅಂದರೆ 'ಚಕಿತರಿಪುಕೃತಾಪತ್ ಪ್ರಣೋದಿ' ಎಂದು ಹೇಳಲ್ಪಟ್ಟಿದ್ದಾರೆ. ಸಲೀಲಂ ಎಂದರೆ ಲೀಲಯಾಂಸಹಿತಂ ಯಥಾಭವತಿ ತಥಾ ಎಂದರೆ ಅನಾಯಾಸದಿಂದ ಕೂಡಿದ್ದಾಗಿ ಹೇಗೆ ಆಗುತ್ತದೆಯೋ ಹಾಗೆ (ಆಟದಿಂದಲೇ) ರಕ್ಷೋಘ್ನಃ, ರಕ್ಷಃ ಬಕಾಸುರಂ=ರಕ್ಷಃ ಎಂದು ಬಕಾಸುರ ರಾಕ್ಷಸನನ್ನು, ಹಂತಿ=ಇತಿ **ಕೊಲ್ಲುತ್ತಾನೆ ಎಂದು ಸಃ=ಆ ಭೀಮಸೇನನು ತಥೋಕ್ತಃ=ಹಾಗೆ ಅಂದರೆ** ರಕ್ಷೋಘ್ನಃ ಎಂದು ಹೇಳಲ್ಪಟ್ಟಿದ್ದಾನೆ. ಪ್ರಾಪ್ತಕೃಷ್ಣಃ **ಕೃಷ್ಣಂ ಎಂದರೆ, ವೇದವ್ಯಾಸಂ=ವೇದವ್ಯಾಸರನ್ನು ಕೃಷ್ಣಾಂ=ದ್ರೌಪದೀಂವಾ ಎಂದರೆ** ದ್ರೌಪದಿಯನ್ನು ಎಂದಾದರೂ ಅರ್ಥ, ಪ್ರಾಪ್ತಃ ಹೊಂದಿದವನು, **'ಪ್ರಾಪ್ತಕೃಷ್ಣಃ'** ಎಂದು **ಹೇಳಲ್ಪಡುತ್ತಾನೆ**. 'ಪ್ರಾಪ್ತಕೃಷ್ಣಃ' ಎಂಬಲ್ಲಿ ಪ್ರಾಪ್ತಾವನ್ನೇ ಚ

ದ್ವಿತೀಯಯಾ (ಪಾ ಸೂ. ೩-೩-೪) ಪ್ರಾಪ್ತ ಮತ್ತು ಅಪನ್ನ ಎಂಬ ಶಬ್ದಗಳು ದ್ವಿತೀಯಾಂತದ ಜೊತೆಗೆ ಸಮಾಸ ಹೊಂದುತ್ತವೆ. ಅದು ತತ್ಪುರಷ ಸಮಾಸವಾಗುತ್ತದೆ. ಇತಿ ಎಂಬ ಸೂತ್ರದಿಂದ, ಸಮಾಸಃ=ಸಮಾಸವು, ಮುಖಕೃತ್=ರಾಜಸೂಯ, ಯಜ್ಞಕೃತ್ = ರಾಜಸೂಯವೆಂಬ ಯಜ್ಞವನ್ನು ಮಾಡಿದವನಾದ, (ಅಂದರೆ) ದುರ್ಯೋಧನಾದಿತಃ=ದುರ್ಯೋಧನಾದಿಗಳಿಂದ, ಅರ್ಧರಾಜ್ಯಂಲಬ್ಧ್ವಾ=ಅರ್ಧರಾಜ್ಯವನ್ನು ಪಡೆದು, ಜರಸಂಧಂ ಹತ್ವಾ= ಜರಸಂಧನನ್ನು ಕೊಂದು, ರಾಜಸೂಯಂ ಕೃತವಾನ್ ಇತಿಭಾವಃ=ರಾಯಸೂಯವನ್ನು ಮಾಡಿದವನು ಎಂದು ಭಾವವು, ಉತ=ಅನಂತರಂ=ಅನಂತರ, ವನೇ=ವನವಾಸಕಾಲೇ ವನವಾಸಕಾಲದಲ್ಲಿ, ದುಷ್ಟಾಹಾ ದುಷ್ಟಾನ್ ಮಣಿಮದಾದಿ ದೈತ್ಯಾನ್ ಹಂತಿ ಇತಿ=ದುಷ್ಟರಾದ ಮಣಿಮಂತನೇ ಮೊದಲಾದ ದೈತ್ಯರನ್ನು ಕೊಲ್ಲುತ್ತಾನೆ ಎಂದು ಸಃ ತಥೋಕ್ತಃ = ಭೀಮಸೇನನು, ದುಷ್ಟಹಾ ಎಂದು ಹೇಳಲ್ಪಟ್ಟಿದ್ದಾನೆ. ಕೀಚಕಘ್ನಃ ವನವಾಸನಂತರಂ=ವನವಾಸದ ಅನಂತರ, ಅಜ್ಞಾತವಾಸೇ ಅಜ್ಞಾತವಾಸದಲ್ಲಿ, ಷಡುತ್ತರಶತಕೀಚಕಾನ್=ನೂರ ಆರು ಮಂದಿ ಕೀಚಕರನ್ನು, (ಅನಂತರ) ದುರ್ಯೋಧನಾದೀಂಶ್ಚ =ದುರ್ಯೋಧನನೇ ಮೊದಲಾದವರನ್ನೂ, ಹತ್ವಾ=ಕೊಂದು, ಸ್ವಪದಂ=ಸ್ವಲೋಕಂ=ತನ್ನ ಲೋಕವನ್ನು, ಅಧಿಗತಃ=ಪ್ರಾಪ್ತಃ ಹೊಂದಿದ (ಶ್ರೀ ಭೀಮಸೇನನು) ಯದ್‌ದ್ವಿಷಃ' ಯಂ ಭೀಮಂ ದ್ವಿಷಂತಿ ಇತಿ ದ್ವಿಷಯಃ=ಯಾವ ಭೀಮಸೇನನನ್ನು ದ್ವೇಷಿಸುತ್ತಾರೆ ಎಂಬ ಕಾರಣದಿಂದ 'ಯದ್ವಿಷಃ' ಎಂದು ಹೇಳಲ್ಪಟ್ಟ, ಮಣಿಮತ್ ಪೂರ್ವಕಾಃ=ಮಣಿಮದಾಖ್ಯದೈತ್ಯಪೂರ್ವಕಾಃ =ಮಣಿಮಂತನೆಂಬ ದೈತ್ಯನೇ ಮೊದಲಾದವನಾಗಿ ಉಳ್ಳವರು, ಕ್ರೋಧತಂತ್ರಾಃಕೋಪಪರವಶಾಃ ಸಂತಃ=ಕೋಪಕ್ಕೆ ಒಳಗಾಗಿ ಭೂಮೌ ಭೂತ್ವಾ=ಭೂಮಿಯಲ್ಲಿ ಹುಟ್ಟಿ ಅಂದರೆ ಸಂಕರಾದಿನಾಮತ್ವೇನ ಉತ್ಪದ್ಯ=ಸಂಕರ ಮುಂತಾದ ಹೆಸರಿನಿಂದ ಹುಟ್ಟಿ, ಕುಶಾಸ್ತ್ರಂ ದುಶ್ಶಾಸ್ತ್ರಂ ದುಶ್ಶಾಸ್ತ್ರವನ್ನು, ವ್ಯಧಿಷತ=ಅಕಾರ್ಷುಃ ಮಾಡಿದರೋ, ವ್ಯಧಿಷತ ಎಂಬಲ್ಲಿ ಡುಧಾಞ ಧಾರಣಪೋಷಣಯೋಃ ಎಂಬುದಾಗಿ ಹೇಳಿದಂತೆ ಧಾರಣಪೋಷಣಾರ್ಥಕವಾದ ಧಾಧಾತು=ಅದರ ಲುಙ್ ಲುಙಲಕಾರವು ಅದರಲ್ಲಿ 'ಆತ್ಮನೇಪದೇಷ್ವನತಃ' 7-1-5 ಅನಕಾರಾತ್ ಪರಸ್ಯ ಆತ್ಮನೇ ಪದೇಷುಝುಸ್ಯ ಅತ್‌ಇತ್ಯಾದೇಶಃ ಸ್ಯಾತ್, ಅಕಾರ ಭಿನ್ನವಾದ ಅಕ್ಷರದ ಮುಂದೆ ಇರುವ ಆತ್ಮನೆ ಪದದ ಝುಕ್ಕೆ ಅತ್ ಆದೇಶ ಬರುತ್ತದೆ. ಐಧಿಷ್+ಝು=ಐಧಿಷ್+ಅತ ಐಧಿಷತ ಎಂಬ ಸೂತ್ರದಿಂದ ಪ್ರಥಮ ಪುರುಷ ಬಹುವಚನದ ಝು ಪ್ರತ್ಯಯಕ್ಕೆ ಅತ್ ಆದೇಶ. ಸಃ ಭೀಮಃ=ಅಂತಹ ಶ್ರೀ ಭೀಮಸೇನದೇವರು. ಅಸ್ಮಾನ್=ನಮ್ಮನ್ನು, ಪಾತು= ರಕ್ಷತು, ಕಾಪಾಡಲಿ, ಇಲ್ಲಿ ಪಾ ರಕ್ಷಣೆ ಲೋಟ್=ರಕ್ಷಣಾರ್ಥಕವಾದ ಪಾ ಧಾತುವಿನ ಲೋಟ್ ಲಕಾರವು ॥೨॥

---

ಇಲ್ಲಿಂದ ಮುಂದೆ ಶ್ರೀ ಮುಖ್ಯಪ್ರಾಣದೇವರು ಮೂರನೇ ಅವತಾರದ ಲೀಲೆಯನ್ನು ಸಂಗ್ರಹಿಸಿ ವರ್ಣಿಸುತ್ತಾರೆ.

**ಅಜ್ಞಾನೋತ್ಸಾದನಾರ್ಥಂ ಸುರವರವಚಸಾ ಸೂಚಿತೋ ರೂಪ್ಯಭರ್ತ್ರಾ**
**ಜಾತೋ ಮಧ್ಯಾಲಯಾರ್ಯಾದ್ಗುರು ಮತಿತಪಸೋ ವಾಸುದೇವಾಭಿಧಾನಃ॥**
**ಗೋದಾತ್ರೇಮೋಕ್ಷದಾತಾ ರಜತಪತಿಪದಾಸೇವಕೋಭೂತಭರ್ತ್ರಾ**
**ಮಾನ್ಯಃ ಪ್ರಾಣಃಕುಲಿತ್ಥೈರಪಿ ನಿಜಸಹಜಾತರ್ಪಿತಃ ಪ್ರೀಯತಾಂ ಮೇ ॥೬॥**

## ಗೂಢಾಭಾವಪ್ರಕಾಶ

ತೃತೀಯಾವತಾರಲೀಲಾಂ ಸವಿಸ್ತರಂ ವಿವಕ್ಷನ್, ಆದೌತಾವತ್ ಅವತಾರ ಪ್ರಕಾರಂ ವದನ್ ಬಾಲ ಲೀಲಾಶ್ಚ ಬ್ರೂತೇ॥ ಅಜ್ಞಾನೇತಿ॥ ರೂಪ್ಯಭರ್ತ್ರಾ, ರೂಪ್ಯಸ್ಯ ಭರ್ತಾ ಇತಿ ಯಾಜಕಾದಿತ್ವೇನ ಸಮಸೋಪತ್ತಿಃ। ಏಕಮುತ್ತರತ್ರಾಪಿ। ರೂಪ್ಯಾಖ್ಯ ಗ್ರಾಮಧಿಷ್ಠಾತ್ರಾವಿಷ್ಣುನಾ ಸೂಚಿತಃ ಜ್ಞಾಪಿತಃ। ಯದಾ ಸಂಕರಕೃತ ದುಶ್ಶಾಸ್ತ್ರೇಣ ಭಿನ್ನ (ಚ್ಛಿನ್ನ) ತತ್ತ್ವ ಜ್ಞಾನಾಃ, ಸಜ್ಜನಾಃ, ರೂಪ್ಯಭರ್ತೃವಿಷ್ಣೋರುತ್ಸವಂ, ದ್ರಷ್ಟುಂಮಿಲಿತಾಃ। ತದಾ ರೂಪ್ಯಾಭರ್ತ್ರಾ ತತ್ತ್ವಜ್ಞಾನೋಪದೇಶಕರ್ತಾರಂ ಅಪೇಕ್ಷಮಾಣಾನ್, ದೀನಾನ್, ದೃಷ್ಟ್ವಾ, ಕಂಚನ, ಅಕುಶಲಂ, ಪುರುಷಂ, ಆವಿಶ್ಯ, ಸ್ವಧ್ವಜಸ್ಯ, ಅಗ್ರಂ, ಉತ್ಪತ್ಯ, ಬಾಹುಂ, ಉದ್ಧೃತ್ಯ, ಜನಾನ್, ಆಭಾಷ್ಯ, ಭವತಾಂ, ಉಪದೇಷ್ಟಾ, ವಿಶ್ವಜ್ಞಃ, ಕಶ್ಚನ, ಪುಮಾನ್, ಶೀಘ್ರಂ ಉತ್ಪತ್ಸ್ಯತೇ, ಇತಿ, ವಾಚಾ ಜ್ಞಾಪಿತಃ, ಇತಿ ಭಾವಃ। ರೂಪ್ಯಪುರಸ್ಯ, ಶಿವವಲ್ಲೀ, (ಶಿವಳ್ಳೀ) ಉಡುಪಿ ಇತ್ಯಭ್ರಷ್ಟಾನಾಮ। ಸುರವರ

ವಚಸಾ, ಸುರವರೋ, ಹರಿಃ, ತದ್ವಚನೇನ। ತತ್ತ್ವಜ್ಞಾನಹೀನಾನ್, ಸಜ್ಜನಾನ್, ಅವಲೋಕ್ಯ, ದಯಯಾ, ಬ್ರಹ್ಮಾದಿಭಿಃ, ಪ್ರಾರ್ಥಿತಸ್ಯ, ಹರೇ, ಹೇ ವಾಯೋ। ತ್ವಂ, ರೂಪಾಂತರೇಣ, ಅವತೀರ್ಯ, ಮಮ, ಸದ್ಗುಣಾನ್, ಪ್ರಕಾಶಯ, ಇತ್ಯಾದಿ ವತಚಸ ಇತ್ಯರ್ಥಃ। ಕಿಂಚ, ಸುರವರೋ, ದೇವೇಂದ್ರಃ, ತದ್ವಚಸಾ 'ಸ್ವಾಮಿನ್, ಭೂಮಾವತೀರ್ಯ, ಸರ್ವಾನುದ್ಧರ, ಇತಿ ಯಾಚ್ಞಾರೂಪವಚಸೇತ್ಯರ್ಥಃ। ಅಜ್ಞಾನೋತ್ಸಾದನಾರ್ಥಂ, ಅಜ್ಞಾನಸ್ಯ, ಜ್ಞಾನ ವಿರುದ್ಧಸ್ಯ, (ಸಂಶಯಸ್ಯ) ಮಿಥ್ಯಾಜ್ಞಾನಸ್ಯಚ, ಉತ್ಸಾದನಾರ್ಥಂ ನಾಶಾರ್ಥಂ, ಗುರುಮತಿತಪಸಃ, ಗುರುಣೀ, ಉತ್ಕೃಷ್ಟೇ, ಮತಿತಪಸೀ ಯಸ್ಯಸಃ ತಸ್ಮಾತ್। ಅನೇಕಕುತರ್ಕೈರಪಿ ಅಚಂಚಲಜ್ಞಾನಃ, ತಥಾಸತ್ಪುತ್ರಕಾಮನಯಾ ತೀವ್ರತಪಾಃ ಇತ್ಯರ್ಥಃ ಮಧ್ಯಾಲಯಾರ್ಯಾತ್ ಮಧ್ಯಗೇಹ ಭಟ್ಟಾಖ್ಯದ್ವಿಜಾತ್ । (ಜನಿಕರ್ತುಃ ಪ್ರಕೃತಿರಿತಿ ಪಂಚಮೀ) ವಾಸುದೇವಾಭಿ ದಾನಃ। ವಾಸುದೇವನಾಮಾ, ಸನ್। ಜಾತಃ ಅವತೀರ್ಣಃ। ಕರ್ತರಿಕ್ತಃ। ಗೋದಾತ್ರೇ। ಸ್ವಸ್ಯ ಶಿಶುತ್ವದಶಾಯಾಂ ಪಯಃ ಪಾನಾಯ, ಗಾಂ ದತ್ತವತೇ, ಪೂರ್ವಾಲಯವಿಪ್ರಾಯ। ದಾತೃಶಬ್ದಸ್ಯತೃಜಂತತ್ವೇ ಶೇಷಷಷ್ಠಿತ್ವೇನಗೋದಾತ್ರೇತಿ ಷಷ್ಠಿತತ್ಪುರುಷಃ। ತೃನ್ನಂತತ್ವೇನವಾ ಗಾಂ ದಾತೇತಿ ಗಮ್ಯಾದಿತ್ವೇನ ದ್ವಿತೀಯಸಮಾಸೋವಾಬೋಧ್ಯಃ। ಏವಮುತ್ತರತ್ರಾಪಿ। ಮೋಕ್ಷದಾತಾ। ತಂ ದೇಹಂ ತ್ಯಕ್ತ್ವಾ ಸ್ವಸುತಪುತ್ರತ್ವೇನ ಜಾತಾಯ ತಸ್ಮೈ, ತತ್ವಜ್ಞಾನೋಪದೇಶೇನ, ಮೋಕ್ಷದಾತಾ, ಇತ್ಯರ್ಥಃ। ರಜಪತಿಪಾದಕಸೇವಕಃ ರಜತಪತೇಃ ರೂಪ್ಯಪೀಠಭರ್ತುಃಪದಯೋಃ ಆ ಸೇವಕಃ। ಯದಾ, ಮಧ್ಯಗೇಹಭಟ್ಟಃ, ಶಿಶುಭೂತಂ, ಆತ್ಮಾನಂ, ಆದಾಯ, ಪಾಜಕ ಕ್ಷೇತ್ರಾತ್, ರೂಪ್ಯಪುರಂ, ಆಗತ್ಯ, ಏನಂ, ಉಪಾಯನತ್ವೇನ, ಭಗವತೇ, ಆರ್ಪಯತ್, ತದಾ, ಅಯಂ, ಮನಸಾ, ತತ್ಪದಂ, (ಆ) ಸೇವಿತಾವಾನ್ ಇತಿಭಾವಃ। ಭೂತಭರ್ತ್ರಾ, ಭೂತನಾಂ, ಗ್ರಹಣಾಂ, ಭರ್ತ್ರಾ, ಸ್ವಾಮಿನಾ, ಮಹಾಗ್ರಹೇಣ ಬ್ರಹ್ಮರಾಕ್ಷಸೇನ, ಇತಿಯಾವತ್। ಮಾನ್ಯಃ ಪೂಜ್ಯಃ ರೂಪ್ಯಪತಿಂ, ಸಂಸೇವ್ಯ, ವಾಸುದೇವನಾಮಾನಂ, ಶಿಶುಮಾದಾಯ, ನಿಶಿಥೇ, ಪರಿವಾರೇಣ ಸಹ, ಮಧ್ಯಗೇಹ ಭಟ್ಟಸ್ಯ, ಸ್ವಗೃಹಂಪ್ರತಿ, ಗಮನ ಸಮಯೇ, ಕಶ್ಚನ, ಗ್ರಹಃ, ಮಾರ್ಗಮಧ್ಯೇ, ಸಹಗಂತಾರಂ, ಕಂಚನ, ಸಂಪಿಡ್ಯ, ಅನ್ಯಂ, ಆ ವಿಶ್ಯ 'ಭೋ ಜನಾಃ ಅಯಂ, ಶಿಶುಃ ಸಮರ್ಥಃ ಯದ್ರಕ್ಷಿತಾಃ, ಭವಂತಃ, ಮಯಾ, ನಹತಾಃ, ಇತ್ಯಾದಿ, ಬಹುಧಾ, ಶಿಶುಂ, ಸ್ತುತವಾನ್, ಇತ್ಯರ್ಥಃ। ಕುಲಿತ್ಥ್ಯಃ ನಿಜಸಹಜಾತರ್ಪಿತಃ, ನಿಜಸಹಜಯಾ, ಭಗಿನ್ಯಾ, ತರ್ಪಿತಃ, ಭೋಜಿತಃ।, ಯದಾ, ಮಾತಾ, ಕದಾಚಿತ್, ಪುತ್ರಂ,ಸ್ತನ್ಯೇನ, ಸಂತರ್ಪ್ಯ, ಕನ್ಯಾಹಸ್ತೇ, ದತ್ವಾ, ಸ್ವಯಂ, ಗೃಹಾಂತರಂ, ಯಯೌ। ತದಾ, ಅತೀವ, ಕ್ರಂದಂತಂ ಬಾಲಂ, ದೃಷ್ಟ್ವಾ, ಕನ್ಯಾ,ಪಕ್ವಂ, ಕುಲತ್ಥಂ, ಬಹುಭೋಜಯಾಮಾಸ। ತಥಾಪಿ, ನ ತಸ್ಯ, ಕಶ್ಚನ, ರೋಗಃ ಅಭವತ್ ಇತಿಭಾವಃ। ಸಃ, ಮೇ, ಪ್ರೀಯಾತಾಂ ಪ್ರಿಣಾತು। ಪ್ರೀಜ. ಪ್ರೀಣನೇ (ಪ್ರಿತೌ) ಕರ್ತರಿಲಟ್ ಆತ್ಮನೇ ಪದಿ ॥೩॥

**ಪದಚ್ಛೇದ** - ಅಜ್ಞಾನೋತ್ಸದನಾರ್ಥಂ, ಸುರವರಚಸಾ, ಸೂಚಿತಃ, ರೂಪ್ಯಭರ್ತಾ, ಜಾತಃ, ಮಧ್ಯಾಲಯಾರ್ಯಾತ್, ಗುರುಮತಿ ತಪಸಃ, ವಾಸುದೇವಾಭಿದಾನಃ । ಗೋದಾತ್ರೇ, ಮೋಕ್ಷದಾತಾ, ರಜತಪತಿ ಪದಾಸೇವಕಃ, ಭೂತಭರ್ತ್ರಾ, ಮಾನ್ಯಃ, ಪ್ರಾಣಃ, ಕುಲಿತ್ಥೈಃ, ಅಪಿ, ನಿಜಹಸಜಾತರ್ಪಿತಃ, ಪ್ರೀಯತಾಂ, ಮೇ,।

**ಅನ್ವಯ** - ರೂಪ್ಯಭರ್ತ್ರಾ, ಸೂಚಿತಃ, ಸುರವರವಚಸಾ, (ಸೂಚಿತಃ) ಅಜ್ಞಾನೋತ್ಸಾದನಾರ್ಥಂ ಗುರುಮತಿ ತಪಸಃ, ಮಧ್ಯಾಲಯಾರ್ಯಾತ್, ವಾಸುದೇವಾಭಿಧಾನಃ (ಸನ್) ಜಾತಃ, ಗೋದಾತ್ರೇ ಮೋಕ್ಷದಾತಾ ರಜತಪತಿಪದಾಸೇವಕಃ, ಭೂತಭರ್ತಾಮಾನ್ಯಃ, ಅಪಿ ಕುಲಿತ್ಥೈಃ ನಿಜಸಹಜಾತರ್ಪಿತಃ, ಸಃ ಪ್ರಾಣಃಮೇಪ್ರೀಯತಾಂ।

**ಅನ್ವಯಾರ್ಥ** - ರೂಪ್ಯಭರ್ತ್ರಾ=ಶಿವಬೆಳ್ಳಿ (ಶಿವಳ್ಳಿ) ಎಂಬ ಗ್ರಾಮದ ಸ್ವಾಮಿಯಾದ ಅನಂತಾಸನ ಎಂಬ ಹೆಸರುಳ್ಳ ನಾರಾಯಣನಿಂದ, ಸೂಚಿತಃ=(ಸರ್ವಜ್ಞನೊಬ್ಬನು ಅವತರಿಸುವನೆಂದು) ಜ್ಞಾಪಿಸಲ್ಪಟ್ಟ, ಸುರವರ=ಪರಮಾತ್ಮನ, ವಚಸಾ=ಮಾತಿನಿಂದ (ಸೂಚಿತಃ=ಅಜ್ಞಾಪಿಸಲ್ಪಟ್ಟ) (ಅಥವಾ) ಸುರವರ=ದೇವೇಂದ್ರನ ವಚಸಾ=ಪ್ರಾರ್ಥನರೂಪವಾದ ಮಾತಿನಿಂದ, ಸೂಚಿತಃ=ವಿಜ್ಞಾಪಿಸಲ್ಪಟ್ಟ, ಅಜ್ಞಾನೋತ್ಸದನಾರ್ಥಂ=ತಪ್ಪು ತಿಳಿವಳಿಕೆ, ಜ್ಞಾನಕ್ಕೆ ವಿರುದ್ಧವಾದುದರಿಂದ ಭ್ರಮ ಮತ್ತು ಸಂಶಯಗಳು ಇವುಗಳ ನಾಶಕ್ಕಾಗಿ, ಗುರು=ಉತ್ಕೃಷ್ಟವಾದ, ಮತಿ=ಜ್ಞಾನವು ಮತ್ತು ತಪಸಃ=ವ್ರತಗಳುಳ್ಳ, ಮಧ್ಯಾಲಯಾರ್ಯಾತ್=ಮಧ್ಯಗೆಹಭಟ್ಟರೆಂಬ (ನಾರಾಯಣಭಟ್ಟರೆಂಬ) ಬ್ರಾಹ್ಮಣರ ದೆಸೆಯಿಂದ ವಾಸುಧೇವಾಭಿಧಾನಃ (ಸನ್)=ವಾಸುದೇವ ಎಂಬ ಹೆಸರುಳ್ಳವನಾಗಿ ಜಾತಃ=ಹುಟ್ಟಿದ (ಅವತರಿಸಿದ) ಗೋದಾತ್ರೇ=(ತನಗೆ ಬಾಲ್ಯದಲ್ಲಿ ಹಾಲು

ಕುಡಿಯುವುದಕ್ಕಾಗಿ) ಗೋ=ಕರೆಯುವ ಹಸುವನ್ನು,, ದಾತ್ರೇ=ದಾನ ಮಾಡಿದ, ಪೂರ್ವಾಲಯ=(ಮೂಡಿಲ್ಲಾಯ) ಬ್ರಾಹ್ಮಣನಿಗೆ=ಮೋಕ್ಷದಾತಾ ಆ ದೇಹವನ್ನು ಬಿಟ್ಟ, ಆ ಬ್ರಾಹ್ಮಣನು ತನ್ನ ಮಗನ ಮಗನಾಗಿ ಹುಟ್ಟಿದಾಗ ಮೋಕ್ಷವನ್ನೇ ಕೊಟ್ಟಿರುವ, ರಜತಪತಿ ರೂಪ್ಯ ಪೀಠಪುರಸ್ವಾಮಿಯಾದ ಅನಂತಾಸನ ದೇವರ, ಪದ=ಪಾದಗಳ ಆ ಸೇವಕಃ=ವಿಶೇಷವಾದ ಸೇವೆಯನ್ನು ಮಾಡಿರುವ, ಭೂತಭರ್ತ್ರಾ=(ಉಡುಪಿಯಿಂದ ಪಾಜಕ ಕ್ಷೇತ್ರಕ್ಕೆ ಬರುವ ದಾರಿಯಲ್ಲಿರುವ ಅನೇಕ ಭೂತಗಳ ಒಡೆಯನಾದ ಮಹಾಭೂತದಿಂದ), ಮಾನ್ಯಃ=ಗೌರವಕ್ಕೆ ಅರ್ಹರಾದ, ಅಪಿ=ಮತ್ತು ಕುಲಿತ್ಥೈ=(ಬೇಯಿಸಿದ) ಹುರುಳಿಗಳಿಂದ (ಹುರುಳಿರಾಶಿಯಿಂದ) ನಿಜ=ತನ್ನ, ಸಹಜಾ=ಅಕ್ಕನಿಂದ, ತರ್ಪಿತಃ=ತೃಪ್ತಿಗೊಳಿಸಲ್ಪಟ್ಟ ಸಃ ಪ್ರಾಣಃ=ಆಮುಖ್ಯ ವಾಯುದೇವರು ಮೇ=ನನಗೆ (ನನ್ನ ವಿಷಯದಲ್ಲಿ) ಪ್ರೀಯತಾಂ=ಪ್ರೀತಿಯನ್ನೂ ಹೊಂದಲಿ.

**ತಾತ್ಪರ್ಯ** - ವಾಯುದೇವರ ಮೂರನೆಯ ಅವತಾರವು ಮಧ್ವಾವತಾರ. ಆ ಅವತಾರದ ಕಥೆಯನ್ನು ಲೀಲೆಗಳನ್ನೂ ವಿಸ್ತಾರವಾಗಿ ಈ ಗ್ರಂಥದಲ್ಲಿ ವರ್ಣಿಸಲು ಹೊರಟು ಮೊದಲು ಗ್ರಂಥಕಾರರು ಶ್ರೀ ಮಧ್ವಾಚಾರ್ಯರ ಅವತಾರದ ಹಿನ್ನೆಲೆ ಅವತಾರದ ರೀತಿ ಮತ್ತು ಶ್ರೀ ಮಧ್ವಾಚಾರ್ಯರು ತನ್ನ ಬಾಲ್ಯದಲ್ಲಿ ತೋರಿಸಿದ ಕೆಲವು ಲೀಲೆಗಳನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ.

ಲೋಕದಲ್ಲಿ ಕಲಿಯುಗದಲ್ಲಿ ವಿಜ್ಞಾನ ಸೂರ್ಯನು ಅಸ್ತಂಗತನಾಗಿ, ದುರ್ಭಾಷ್ಯಗಳೆಂಬ ಕಗ್ಗತ್ತಲೆಯಲ್ಲಿ ಸಜ್ಜನರು ಕುರುಡರಂತೆ ತೊಳಲಾಡುತ್ತಾ ಇದ್ದಾಗ, ಸನ್ಮಾರ್ಗಭ್ರಷ್ಟರಾಗಿ ಕಷ್ಟಪಡುತ್ತಾ ಇದ್ದಾಗ, ಅಂತಹ ಸಜ್ಜನರನ್ನು ಕಂಡು ದಯಾಪೂರ್ಣರಾದ ಬ್ರಹ್ಮಾದಿಗಳು ದೇವರನ್ನು ಪ್ರಾರ್ಥಿಸಿದರು. ಪರಮಾತ್ಮನು ಕಲಿಯುಗದಲ್ಲಿ ಅವತರಿಸಲು ಇಷ್ಟಪಡದೆ - ತನ್ನ ಪ್ರೀತಿಯ ಪುತ್ರನೂ ಏಕಾಂತ ಭಕ್ತನೂ ಆದ ಮುಖ್ಯಪ್ರಾಣನನ್ನು ಕರೆದು 'ಎಲೈ ವಾಯುವೇ! ನೀನು ಬೇರೊಂದು ರೂಪದಿಂದ ಭೂಲೋಕದಲ್ಲಿ ಅವತರಿಸಿ ನನ್ನ ಗುಣಗಳ ಜ್ಞಾನವನ್ನು ಸಜ್ಜನರಿಗೆ ಉಂಟುಮಾಡು ಅವರನ್ನು ಉದ್ಧರಿಸು' ಎಂದು ಅಪ್ಪಣೆ ಮಾಡಿದನು. ಇಂದ್ರಾದಿ ದೇವತೆಗಳೂ ಕೂಡ - ಸ್ವಾಮಿನ್! ಭೂಮಿಯಲ್ಲಿ ಅವತರಿಸಿ ಸಜ್ಜನರನ್ನು ಉದ್ಧರಿಸಿರೆಂದು ಪ್ರಾರ್ಥಿಸಿದರು. ಪರಮಾತ್ಮನ ಅಪ್ಪಣೆಯನ್ನು ಅಮೂಲ್ಯವಾದ ಶಿರೋರತ್ನದಂತೆ ಶಿರಸಾ ಮಾನ್ಯವನ್ನಾಗಿ ಮಾಡಿ, ದೇವತೆಗಳ ಪ್ರಾರ್ಥನೆಯನ್ನು ರತ್ನಹಾರದಂತೆ ಹೃದಯದಲ್ಲಿ ಅವಧರಿಸಿ ಶ್ರೀ ಮುಖ್ಯ ಪ್ರಾಣದೇವರು ಭೂಮಿಯಲ್ಲಿ ಅವತರಿಸಲು ಇಚ್ಛಿಸಿದರು. ಭೂಲೋಕದಲ್ಲಿ ಭರತಖಂಡದಲ್ಲಿ ಗೋದಾವರಿಯ ದಕ್ಷಿಣ ತೀರದಲ್ಲಿ ಸಹ್ಯಪರ್ವತದ ಪಶ್ಚಿಮ ಪ್ರದೇಶದ ಪರಶುರಾಮ ಕ್ಷೇತ್ರದಲ್ಲಿ ಶಿವಳ್ಳಿ (ಶಿವಬೆಳ್ಳಿ) ಎಂಬ ಗ್ರಾಮವಿದೆ. ಅಲ್ಲಿ ರಾಮಭೋಜನೆಂಬ ಕ್ಷತ್ರಿಯರಾಜನ ಅನುಗ್ರಹಕ್ಕಾಗಿ ಲಿಂಗಕಾರದಿಂದ ಪ್ರಾದುರ್ಭೂತನಾದ ಶ್ರೀ ಮನ್ನಾರಾಯಣನ ಅನಂತೇಶ್ವರವೆಂದೂ, ಅನಂತಾಸನವೆಂದೂ ಪ್ರಸಿದ್ಧವಾದ ದೇವಾಲಯವಿದೆ. ಒಂದು ಬಾರಿ ಆ ದೇವರ ಉತ್ಸವಕ್ಕಾಗಿ ಬಹಳ ಜನ ಭಕ್ತರು ಸೇರಿದ್ದರು. ಅವರಲ್ಲಿ ಅನೇಕರು ಬಹುಕಾಲದಿಂದ ತಮಗೆ ಸರಿಯಾದ ತತ್ವಜ್ಞಾನೋಪದೇಶ ಮಾಡುವ ಮಹಾಪುರುಷನು ಎಂದು ಬರುವನೋ ಎಂದು ವ್ಯಾಕುಲಿತರಾಗಿದ್ದರು. ತತ್ವಜ್ಞಾನವಿಲ್ಲದೆ ಪರಿತಪಿಸುತ್ತಿದ್ದ ಆ ಸಜ್ಜನರ ಉದ್ಧಾರಕ್ಕಾಗಿ ಮಹಾಪುರಷನೊಬ್ಬನು ಅವತರಿಸುವನು ಎಂದು ಸೂಚಿಸುವುದಕ್ಕಾಗಿ ಅನಂತೇಶ್ವರ ದೇವರು ಒಂದು ಅದ್ಭುತವಾದ ಪವಾಡವನ್ನು ತೋರಿಸಿದರು. ಅಲ್ಲಿಯೇ ಇದ್ದ ಸರಿಯಾಗಿ ನಡೆಯಲೂ, ಮಾತನಾಡಲೂ ಬಾರದ ಮಂದಬುದ್ಧಿಯ ಮನುಷ್ಯನೊಬ್ಬನು ಉತ್ಸವಕ್ಕಾಗಿ ಸೇರಿದ ಜನರು ನೋಡುತ್ತಿದ್ದಂತೆಯೇ ದೇವಾಲಯದ ಎದುರು ಇದ್ದ ಶಿಲಾಮಯವಾದ ಧ್ವಜಸ್ತಂಭವನ್ನು ತೆಂಗಿನಮರವನ್ನು ಹತ್ತುವಂತೆ ಸರಸರನೆ ಹತ್ತಿದನು. ಅಲ್ಲಿ ತುದಿಯಲ್ಲಿ ಅವನು ಕುಣಿಯುತ್ತಾ, ನಾನಾ ಅಭಿನಯಗಳನ್ನು ಮಾಡುತ್ತಾ ತನ್ನೆರಡೂ ಕೈಗಳನ್ನು ಮೇಲೆತ್ತಿ ಗಟ್ಟಿಯಾಗಿ ಕೂಗಿ ಜನರಿಗೆಲ್ಲಾ ಕೇಳುವಂತೆ ಹೇಳಿದನು. 'ಸಜ್ಜನರೇ! ನಿಮಗೆ ತತ್ವಜ್ಞಾನೋಪದೇಶ ಮಾಡುವ ಸರ್ವಜ್ಞನಾದ ಮಹಾಪುರುಷನೊಬ್ಬನು ಬಹಳ ಬೇಗನೆ ಇಲ್ಲಿಯೇ ಹತ್ತಿರದಲ್ಲಿ ಅವತರಿಸುವನು' ಇಷ್ಟನ್ನು ಹೇಳಿ ಅವನು ಕೆಳಗಿಳಿದು ಬಂದು ಮೊದಲಿನಂತೆಯೇ ಏನೂ ತಿಳಿಯದವನಾಗಿದ್ದನು. ಈ ರೀತಿ ಅನಂತಾಸನ ದೇವರು ಜನರಿಗೆ ವಾಯುದೇವರ ಅವತಾರವನ್ನು ಸೂಚಿಸಿದನು. ರಜತಪೀಠಪುರದಿಂದ ಸ್ವಲ್ಪ ದೂರದಲ್ಲಿ ಪಾಜಕಕ್ಷೇತ್ರವೆಂಬಲ್ಲಿ ವಾಸಿಸುತ್ತಿದ್ದ ಮಧ್ಯಗೇಹಭಟ್ಟರೆಂಬುವರು ಅನಂತೇಶ್ವರ ದೇವರನ್ನು ಪಯೋವ್ರತ

ಮುಂತಾದ ಕಠಿನ ವ್ರತಗಳಿಂದ ಸೇವಿಸಿ, ತನ್ನನ್ನೂ, ಜಗತ್ತನ್ನೂ ಉದ್ಧಾರ ಮಾಡುವ ಸರ್ವಜ್ಞನಾದ ಮಗನನ್ನು ಕರುಣಿಸಬೇಕೆಂದು ಬೇಡಿದ್ದರು. ಕುತರ್ಕಗಳಿಂದ ಎಲ್ಲರಿಗೂ ಜ್ಞಾನಲೋಪವಾಗಿದ್ದರೂ ಮಧ್ಯಗೇಹಭಟ್ಟರು ಪರಮಾತ್ಮನನ್ನು ಅನಂತಗುಣ ಪರಿಪೂರ್ಣನೆಂದೂ ಕರುಣಾಳುವೆಂದೂ ದೃಢವಾಗಿ ನಂಬಿದ್ದರು. ಹಾಗಿದ್ದರೂ ತಮ್ಮನ್ನೂ ಉದ್ಧಾರ ಮಾಡುವ ಪುತ್ರರತ್ನವನ್ನು ಅಪೇಕ್ಷಿಸಿದ ಮಹಾತಪಸ್ವಿಗಳಾದ ಮಧ್ಯಗೇಹಭಟ್ಟ ದಂಪತಿಗಳಲ್ಲಿ ವಾಯುದೇವರು ಅವತರಿಸಿದರು. ಮಧ್ಯಗೇಹಭಟ್ಟರು ಪುತ್ರನಿಗೆ ಜಾತಕರ್ಮನಾಮಕರಣಾದಿ ಸಂಸ್ಕಾರಗಳನ್ನು ಮಾಡಿ 'ವಾಸುದೇವ' ಎಂಬ ಹೆಸರಿಟ್ಟರು. ವಾಸುದೇವನು ಮಗುವಾಗಿದ್ದಾಗ, ಮಗುವಿಗೆ ಹಾಲಿಗಾಗಿ ಪೂರ್ವಾಲಯನೆಂಬ ಬ್ರಾಹ್ಮಣನು ಹಾಲು ಕೊಡುತ್ತಿರುವ ಒಂದು ಗೋವನ್ನು ಮಧ್ಯಗೇಹಭಟ್ಟರಿಗೆ ದಾನ ಮಾಡಿದನು. ಯೋಗ್ಯ ದೇಶಕಾಲ ಪಾತ್ರಗಳಲ್ಲಿ ಮಾಡಿದ ದಾನಕ್ಕೆ ಕೂಡಲೇ ಉತ್ತಮ ಫಲವು ಸಿಗುತ್ತದೆಯೆಂಬ ಶಾಸ್ತ್ರ ಪ್ರಮಾಣದಂತೆ ಆ ಪೂರ್ವಾಲಯಬ್ರಾಹ್ಮಣನು ಆ ದೇಹವನ್ನು ಬಿಟ್ಟು ತನ್ನ ಮಗನ ಮಗನಾಗಿ ಹುಟ್ಟಿ ಮುಂದೆ ಶ್ರೀ ಮಧ್ವಾಚಾರ್ಯರಿಂದ ಮೋಕ್ಷಕ್ಕೆ ಬೇಕಾದ ಅಧ್ಯಾತ್ಮ ವಿದ್ಯೆಯ ಉಪದೇಶ ಪಡೆದು ಕೃತಕೃತ್ಯನಾದನು. ಮಗುವಿಗೆ ಕೆಲವು ತಿಂಗಳುಗಳಾದ ಮೇಲೆ ಮಧ್ಯಗೇಹಭಟ್ಟರು ತನ್ನ ಕುಲಸ್ವಾಮಿಗೆ ಮಗುವನ್ನು ಒಪ್ಪಿಸಬೇಕೆಂದು ಪಾಜಕಕ್ಷೇತ್ರದಿಂದ ಪರಿವಾರ ಸಮೇತರಾಗಿ ರಜತಪೀಠ ಪುರಕ್ಕೆ (ಉಡುಪಿಗೆ) ಬಂದು ಶ್ರೀ ಮದನಂತಾಸನ ದೇವರಿಗೆ ಮಗುವನ್ನು ಒಪ್ಪಿಸಿದರು. ಆಗ ಶಿಶುವಾದ ಮುಖ್ಯಪ್ರಾಣನು ಮನಸ್ಸಿನಿಂದ ಅನಂತಾಸನನ ಪಾದವನ್ನು ಸೇವಿಸಿದನು. ಉಡುಪಿಯಿಂದ ಪಾಜಕಕ್ಷೇತ್ರಕ್ಕೆ ಹಿಂದಿರುಗಿ ಹೊರಡುವಾಗ ರಾತ್ರಿಯಾಯಿತು. ಸುಮಾರು ಮಧ್ಯರಾತ್ರಿಯ ಸಮಯದಲ್ಲಿ ಅವರು ಹಿಂದಿರುಗಿ ಬರುತ್ತಿರುವಾಗ ದಾರಿಯಲ್ಲಿ ಒಂದೆಡೆ ಅವರಲ್ಲಿ ಒಬ್ಬನು ವಿಕಾರವಾಗಿ ಅರಚಿ ರಕ್ತವಾಂತಿಯನ್ನು ಮಾಡಿದನು. ಎಲ್ಲರಿಗೂ ಪರಮಾಶ್ಚರ್ಯವಾಯಿತು. ಅಲ್ಲಿಯೇ ವಾಸವಾಗಿದ್ದ ಮಹಾಭೂತದ ಚೇಷ್ಟೆಯದು ಎಂದು ತಿಳಿಯಿತು. ಆದರೆ ಅವರಲ್ಲಿ ಒಬ್ಬನು ಆ ಮಹಾಭೂತದ ಆವೇಶವನ್ನು ಹೊಂದಿ ಹೀಗೆ ಹೇಳಿದನು. 'ಎಲೈ ಜನರೇ! ಈ ಮಗುವು ಅತ್ಯಂತ ಸಮರ್ಥವಾದುದು. ಆದರ ರಕ್ಷಣೆ ಇರುವುದರಿಂದಲೇ ನೀವೆಲ್ಲರೂ ನನ್ನಿಂದ ಹಿಡಿತರಾಗಲಿಲ್ಲ ಇಲ್ಲದಿದ್ದರೆ ನಿಮ್ಮೆಲ್ಲರನ್ನೂ ಕೊಲ್ಲುವ ಶಕ್ತಿಯುಳ್ಳ ನಾನು ನಿಮ್ಮನ್ನು ಸುಮ್ಮನೆ ಬಿಡುತ್ತಿರಲಿಲ್ಲ' ಹೀಗೆ ಆ ಮಹಾಭೂತವು ಶಿಶುರೂಪಿಯಾದ ಮುಖ್ಯ ಪ್ರಾಣದೇವರನ್ನು ಅನೇಕ ರೀತಿಯಿಂದ ಸ್ತೋತ್ರ ಮಾಡಿತು.

---

ಒಂದಾನೊಂದು ದಿನ ತಾಯಿಯು ಅಲ್ಲೇ ಸ್ವಲ್ಪ ದೂರದ ಮನೆಗೆ ಕೆಲಸಕ್ಕಾಗಿ ಹೋಗಬೇಕಾದುದರಿಂದ ಮಗುವಾದ ವಾಸುದೇವನನ್ನು ತನ್ನ ಹಿರಿಯ ಮಗಳ ರಕ್ಷಣೆಗೆ ಒಪ್ಪಿಸಿ ಬೇರೆ ಮನೆಗೆ ಹೋದರು. ತಾಯಿಯು ಹೊರಟುಹೋದ ಸ್ವಲ್ಪ ಹೊತ್ತಿನಲ್ಲಿಯೇ ಮಗುವು ಅಳಲಾರಂಭಿಸಿತು. ಎಷ್ಟು ಆಟವಾಡಿಸಿದರೂ ಸಮಾಧಾನಪಡಿಸಿದರೂ ಕೇಳಲಿಲ್ಲ. ಆ ಹುಡುಗಿಯು ಮಗುವಿನ ಅಳುವನ್ನು ನಿಲ್ಲಿಸಲಾರದೆ ಹಸುಗಳ ಕೊಟ್ಟಿಗೆಗೆ ಮಗುವನ್ನು ಕರೆದುಕೊಂಡು ಹೋಗಿ ಅಲ್ಲಿ ಎತ್ತಿಗಾಗಿ ಬೇಯಿಸಿ ಇಟ್ಟಿದ್ದ ಹುರುಳಿಯನ್ನು ಸ್ವಲ್ಪ ತಿನ್ನಿಸಿದಾಗ ಮಗುವು ಸುಮ್ಮನಾಯಿತು. ಹಾಗೆಯೇ ತಿನ್ನಿಸುತ್ತಾ ಇದ್ದಾಗ ಮಗುವು ಎತ್ತುಗಳಿಗೆ ಬೇಯಿಸಿ ಇಟ್ಟಿದ್ದ ಸುಮಾರು ಎರಡು ಸೇರು ಹುರುಳಿಯನ್ನು ತಿಂದು ಸುಮ್ಮನೆ ಆಟವಾಡುತ್ತಾ ಸಂತೋಷವಾಗಿತ್ತು. ತಾಯಿಯು ತನ್ನ ಕೆಲಸವನ್ನು ಮುಗಿಸಿ ವೇಗವಾಗಿ ಮನೆಗೆ ಬಂದರು. ಮಗುವು ಹಾಲಿಗಾಗಿ ಎಷ್ಟು ಅಳುತ್ತಿದೆಯೋ, ಏನು ಮಾಡುತ್ತಿದೆಯೋ ಎಂದು ಗಾಬರಿಗೊಂಡ ಅವರು ಮನೆಗೆ ಬಂದು ನೋಡುವಾಗ ಮಗುವು ಹೊಟ್ಟೆ ತುಂಬಿ ಆಟವಾಡುತ್ತಿತ್ತು. ಅವರು ಮಗಳಿಂದ ಎಲ್ಲಾ ಸಮಾಚಾರವನ್ನು ಕೇಳಿ ತುಂಬಾ ಗಾಬರಿಯಾದರು. ತಂಪಾದ ಎದೆಹಾಲನ್ನು ಕೊಟ್ಟರೂ ಮಗುವಿಗೆ ಎಲ್ಲಿ ಉಷ್ಣ ರೋಗ ಬರುತ್ತದೆಯೋ ಎಂದು ಹೆದರುತ್ತಿದ್ದ ತಾಯಿಯು ಮಗುವು ಹುರುಳಿರಾಶಿಯನ್ನು ತಿಂದಿರುವುದನ್ನು ಕೇಳಿ ಎಷ್ಟೊಂದು ಗಾಬರಿಯಾದಳೆಂದು ಹೇಳಲು ಸಾಧ್ಯವೇ ಇಲ್ಲ. ಅವರು ಮಗಳನ್ನು ಗದರಿಸಿದರು. ತಾನು ಪರರ ಮನೆಗೆ ಹೋಗಿ ಮಗುವನ್ನು ಉಪೇಕ್ಷಿಸಿದ್ದಕ್ಕಾಗಿ ಪಶ್ಚಾತ್ತಾಪಪಟ್ಟರು. ಆದರೆ ಮಗುವು ಯಾವ ತೊಂದರೆಯೂ ಇಲ್ಲದೆ ಸುಖವಾಗಿತ್ತು. ಹೀಗೆ ಬಾಲ್ಯದಲ್ಲಿ ಅದ್ಭುತವಾದ ಬಾಲಲೀಲೆಗಳನ್ನು ತೋರಿದ ಮುಖ್ಯಪ್ರಾಣನು ನನ್ನ ವಿಷಯದಲ್ಲಿ ಪ್ರೀತಿಯನ್ನು ಹೊಂದಲಿ.

**ವಿಗ್ರಹ** - ನ ಜ್ಞಾನಂ ಅಜ್ಞಾನಂ (ನಞತತ್ಪುರುಷ) ಅಜ್ಞಾನಸ್ಯ ಉತ್ಪಾದನಂ ಅಜ್ಞಾನೋತ್ಪಾದನಂ, ಅಜ್ಞಾನೋತ್ಪಾದನಾಯ ಇತಿ ಅಜ್ಞಾನೋತ್ಪಾದನಾರ್ಥಂ, ಸುರೇಷುವರಃ ಸುರವರಃ ಸುರವರಸ್ಯವಚಃ ಸುರವರವಚಃ ತೇನಸುರವರವಚಸಾ. ರೂಪ್ಯಸ್ಯಭರ್ತಾ ರೂಪ್ಯಭರ್ತಾ ತೇನ ರೂಪ್ಯಭರ್ತ್ರಾ, ಮಧ್ಯಾಲಯಃ ಇತಿ ಆರ್ಯಃ ಮಧ್ಯಾಲಯಾರ್ಯಃ ತಸ್ಮಾತ್ ಮಧ್ಯಾಲಯಾರ್ಯಾತ್, ಮತಿಶ್ಚತಪಶ್ಚಮತಿತಪಸೀ, ಗುರುಣೀ ಮತಿತಪಸೀ ಯಸ್ಯಸಃ ಗುರುಮತಿತಪಾಃ ತಸ್ಮಾತ್ ಗುರುಮತಿತಪಸಃ, ವಾಸುದೇವಃ ಇತಿ ಅಭಿಧಾನಂಯಸ್ಯಸಃ ವಾಸುದೇವಾಭಿಧಾನಃ, ದದಾತೀತಿ ದಾತಾ (ತೃಚ್‌ಪ್ರತ್ಯಯ) ಗೋಃ ದಾತಾ ಗೋದಾತಾ, ಅಥವಾ ದದಾತಿತಾಚ್ಚೀಲ್ಯೇನೇತಿ ದಾತಾ (ತೃನ್) ಗಾಂದಾತಾ ಗೋದಾತಾ, (ಗಮಿಗಾಮ್ಯಾದೀನಾ ಮುಪಸಂಖ್ಯಾನಮಿತಿ ದ್ವಿತೀಯಾತತ್ಪುರುಷಃ,) ಮೋಕ್ಷಸ್ಯದಾತಾ, ಅಥವಾ ಮೋಕ್ಷಂದಾತಾ ಮೋಕ್ಷದಾತಾ, ರಜತಸ್ಯ ಪತಿಃ ರಜತಪತಿಃ ರಜತರತೇಃ ಪದೇ ರಜತ ಪತಿಪದೇ, ಆಸಮಂತಾತ್ ಸೇವತೇ ಇತಿ ಆ ಸೇವಕಃ, ರಜತಪತಿಪದಯೋಃ ಆ ಸೇವಕಃ ರಜತಪತಿಪದಾಸೇವಕಃ, ಭೂತಾನಾಂ ಭರ್ತಾ, ಭೂತಭರ್ತಾ ತೇನ, ಮಾನಯಿತುಂ ಯೋಗ್ಯಃ ಮಾನ್ಯಃ ಸಹಜಾಯತೇ ಇತಿ ಸಹಜಾ, ನಿಜಾಚಸಾ ಸಹಜಾ ಚ ನಿಜಸಹಜಾ, ನಿಜಸಹಜಯಾ ತರ್ಪಿತಃ ನಿಜಸಹಜಾತರ್ಪಿತಃ

**ಕ್ರಿಯಾಪದ** - ಪ್ರಿಯಾತಾಂ ಪ್ರೀಯೇತಾಂ, ಪ್ರೀಯಂತಾಂ, ಪ್ರೀಯಸ್ವ ಪ್ರೀಯೇಥಾಂ ಪ್ರೀಯಧ್ವಂ ಪ್ರೀಯೈ ಪ್ರೀಯಾವಹೈ ಪ್ರೀಯಾಮಹೈ, ಪ್ರೀಙ್ ಪ್ರೀತೌ (ಪ್ರೀಣನೇ) ಇತಿ ಪ್ರೀತ್ಯರ್ಥಕಾತ್ ಪ್ರೀಧಾತೋಃ ದೈವಾದಿಕಾತ್ ಅಕರ್ಮಕಾತ್ ಆತ್ಮನೇಪದಿನಃ ಕರ್ತರಿ ಆಜ್ಞಾಯಾಂ ಲೋಟ್ ಮಧ್ಯಮಪುರುಷ ಏಕವಚನಂ

**ಪ್ರಯೋಗ** - **ಮಾನಃ ಪ್ರಾಣಃಮೇ ಪ್ರೀಯತಾಂ (ಕರ್ತರಿ)**
**ಮಾನ್ಯೇನ ಪ್ರಾಣೇನ ಮೇ ಪ್ರೀಯತಾಂ (ಭಾವೇ)**
**ಗೂಢಭಾವ ಪ್ರಕಾಶಿಕಾ ವ್ಯಾಖ್ಯಾನದ ಅರ್ಥ.**

ತೃತೀಯವತಾರಲೀಲಾಂ ಸವಿಸ್ತರಂ ವಿವಕ್ಷನ್ ಆದೌ ತಾವತ್ ಅವತಾರ ಪ್ರಕಾರಂವದನ್ ಬಾಲಲೀಲಾಶ್ಚ ಬ್ರೂತೆ=ಶ್ರೀ ವಾಯುದೇವರ ಮೂರನೆಯ ಅವತಾರದ ಲೀಲೆಯನ್ನು ವಿಸ್ತಾರದಿಂದ ಹೇಳಲು ಬಯಸುತ್ತಾ ಮೊದಲು ಶ್ರೀ ಮುಖ್ಯಪ್ರಾಣದೇವರು ಅವತಾರ ಮಾಡಿದ ಪ್ರಕಾರವನ್ನು ಮತ್ತು ಬಾಲಲೀಲೆಗಳನ್ನು ಹೇಳುತ್ತಾರೆ. ಅಜ್ಞಾನೇತಿ= ಅಜ್ಞಾನೋತ್ಪಾದನಾರ್ಥಂ ಇತ್ಯಾದಿಯಾಗಿ, ರೂಪ್ಯಭರ್ತ್ರಾ, ರೂಪಸ್ಯಭರ್ತಾ ಇತಿಯಾಜಕಾದಿತ್ವೇನ ಸಮಾಸೋಪಪತ್ತಿಃ= ರೂಪ್ಯಭರ್ತ್ರಾ ಎಂಬಲ್ಲಿ ರೂಪಸ್ಯ ಭರ್ತಾ ರೂಪ್ಯ ಭರ್ತಾ ಎಂದು ಷಷ್ಠೀಸಮಾಸ ಮಾಡಬೇಕು. ಇಲ್ಲಿ ತೃಜಕಾಭ್ಯಾಂಕರ್ತರಿ (2-2-15) ಕರ್ತ್ರರ್ಥಕವಾದ ತೃಚ್ ಮತ್ತು ಅಕ ಪ್ರತ್ಯಯಾಂತ ಶಬ್ದಗಳು ಷಷ್ಠ್ಯಂತದೊಡನೆ ಸಮಾಸ ಹೊಂದುವುದಿಲ್ಲ ಎಂಬ ನಿಷೇಧವಿರುವುದರಿಂದ ಸಮಾಸವು ಹೇಗೆ ಬರುತ್ತದೆ ಎಂಬ ಶಂಕೆಗೆ ಉತ್ತರವನ್ನು ಹೇಳಿದ್ದಾರೆ. ರೂಪಸ್ಯ ಭರ್ತಾ ಎಂಬಲ್ಲಿಯೂ ಕರ್ತ್ರರ್ಥಕವಾದ ತೃಚ್ ಪ್ರತ್ಯಯಾಂತ ಶಬ್ದವಿದೆ. ಆದರೆ ಈ ನಿಷೇಧಕ್ಕೆ ನಿಷೇಧ ರೂಪವಾಗಿ ಯಾಜಕಾದಿಭಿಶ್ಚ (2-2-9) ಎಂದು ಇನ್ನೊಂದು ಸೂತ್ರವಿದೆ. ಇದನ್ನು ಪ್ರತಿಪ್ರಸವ ವಿಧಿಯೆಂದು ಹೇಳುತ್ತಾರೆ. ನಿಷೇಧಕ್ಕೆ ನಿಷೇಧವು ಪ್ರತಿಪ್ರಸವವು. ಯಾಜಕಾದಿಗಣದಲ್ಲಿ ಸೇರಿದ ಶಬ್ದಗಳು ಷಷ್ಠ್ಯಂತ ಶಬ್ದಗಳ ಜೊತೆಗೆ ಸಮಾಸವನ್ನು ಹೊಂದುತ್ತವೆ ಎಂದು ಇದರ ಅರ್ಥ. ಪ್ರಕೃತಭರ್ತೃ ಶಬ್ದವನ್ನು ಯಾಜಕಾದಿಗಣದಲ್ಲಿ ಸೇರಿದೆಯೆಂದು ತಿಳಿದು ಷಷ್ಠೀತತ್ಪುರುಷವನ್ನು ಮಾಡಬೇಕು ಎಂದು ತಾತ್ಪರ್ಯವು. ಏವಮುತ್ತರತ್ರಾಪಿ=ಮುಂದೆ ಎಲ್ಲಿಯಾದರೂ ತೃಜಂತ, ಅಥವಾ ಅಕಪ್ರತ್ಯಯಾಂತ ಶಬ್ದಕ್ಕೆ ಷಷ್ಠ್ಯಂತ ಶಬ್ಧದ ಜೊತೆಗೆ ಸಮಾಸವಾಗಿದ್ದರೆ ಹೀಗೆಯೇ ಉಪಪತ್ತಿಯನ್ನು ತಿಳಿದುಕೊಳ್ಳಬೇಕು. 'ಭೂತ ಭರ್ತ್ರಾ' ಎಂಬಲ್ಲಿಯೂ ಹೀಗೆಯೇ ರೂಪ್ಯಾಖ್ಯಗ್ರಾಮಾಧಿಷ್ಠಾತ್ರಾವಿಷ್ಣುನಾ=ರೂಪ್ಯ ಎಂದರೆ (ಶಿವರೂಪ್ಯ) ಶಿವಳ್ಳಿ ಎಂಬ ಗ್ರಾಮದ ಅಧಿದೇವತೆಯಾದ ಅನಂತಾಸನನಾಮಕನಾದ ವಿಷ್ಣುವಿನಿಂದ ಎಂದು ರೂಪ್ಯಭರ್ತ್ರಾ ಎಂಬ ಪದಕ್ಕೆ ಅರ್ಥ, ಸೂಚಿತಃ ಜ್ಞಾಪಿತಃ=ಸೂಚಿತಃ ಎಂಬ ಪದಕ್ಕೆ ಜ್ಞಾಪಿತಃ=ಜನರಿಗೆ ಇಂತಹವನು ಅವತರಿಸುವನು ಎಂಬುದಾಗಿ ಮೊದಲೇ ತಿಳಿಸಲ್ಪಟ್ಟವನು (ಮುಖ್ಯ ಪ್ರಾಣನು) ಎಂದು ಅರ್ಥ.

ಯದಾ ಸಂಕರಕೃತ ದುಶ್ಶಾಸ್ತ್ರೇಣ ಛಿನ್ನತತ್ತ್ವಜ್ಞಾನಾಃ ಸಜ್ಜನಾಃ ರೂಪ್ಯಭರ್ತ ವಿಷ್ಣೋರುತ್ಸವಂ ದ್ರಷ್ಟುಂ

ಮಿಲಿತಾಃ, ತದಾರೂಪ್ಯಭರ್ತ್ರಾ, ತತ್ತ್ವಜ್ಞಾನೋಪದೇಶಕರ್ತಾರಂ, ಅಪೇಕ್ಷಮಾಣಾನ್ ದೀನಾನದೃಷ್ಟ್ವಾ, ಕಂಚನ ಆಕುಶಲಂ ಪುರುಷಂ ಆವಿಶ್ಯ, ಸ್ವಧ್ವಜಸ್ಯ ಅಗ್ರಂ ಉತ್ಪತ್ಯ ಬಾಹುಂ ಉದ್ವೃತ್ಯ ಜನಾನ್ ಆಭಾಷ್ಯ 'ಭವತಾಂ ಉಪದೇಷ್ಟಾ ವಿಶ್ವಜ್ಞಃ ಕಶ್ಚನ ಪುಮಾನ್ ಶೀಘ್ರಂ ಉತ್ಪತ್ಸ್ಯತೇ ಇತಿ ವಾಚಾ ಜ್ಞಾಪಿತಃ ಇತಿಭಾವಃ=ಯಾವಾಗ ಸಂಕರನು ಮಾಡಿರುವ ದುಶ್ಶಾಸ್ತ್ರದಿಂದ ನಾಶಹೊಂದಿದ ತತ್ತ್ವಜ್ಞಾನವುಳ್ಳ ಸಜ್ಜನರು ಶಿವಬೆಳಿ (ಶಿವಳ್ಳಿ) ಗ್ರಾಮಕ್ಕೆ ಅಧಿಪತಿಯಾದ ಅನಂತೇಶ್ವರನಾಮಕನಾದ ವಿಷ್ಣುವಿನ ಉತ್ಸವವನ್ನು ನೋಡಲು ಸೇರಿದ್ದರೋ ಆಗ ಶಿವಳ್ಳಿ ಗ್ರಾಮದ ಸ್ವಾಮಿಯಾದ ನಾರಾಯಣನೇ ತತ್ತ್ವಜ್ಞಾನೋಪದೇಶವನ್ನು ಮಾಡುವವನನ್ನು, ಅಪೇಕ್ಷಿಸುವ ರಕ್ಷಕರಿಲ್ಲದ ತನ್ನವರನ್ನು ನೋಡಿ, ಯಾವನೋ ಒಬ್ಬ ಒಬ್ಬ ಬುದ್ಧಿವಂತನಲ್ಲದ ಮನುಷ್ಯನನ್ನು ಪ್ರವೇಶಿಸಿ ತನ್ನ ಧ್ವಜಸ್ತಂಭದ ತುದಿಗೆ ಹಾರಿ (ಸರಸರನೆ ಹತ್ತಿ ನಿಂತು) ತೋಳನ್ನು ಮೇಲೆಕ್ಕೆತ್ತಿ ಜನರನ್ನು ಸಂಭೋದಿಸಿ ನಿಮಗೆ ಉಪದೇಶ ಮಾಡುವ ಸರ್ವಜ್ಞನಾದ ಯಾವನೋ ಮಹಾಪುರುಷನು ಬೇಗನೇ ಹುಟ್ಟಲಿರುವನು ಎಂಬ ಮಾತಿನಿಂದ ವಾಯುದೇವರು ಅವತಾರ ಮಾಡುವರೆಂದು **ಸೂಚಿಸಲ್ಪಟ್ಟಿದ್ದಾರೆ ಎಂದು** ಭಾವವು. ರೂಪ್ಯಪುರಸ್ಯ ಶಿವವಲ್ಲಿ, ಉಡುಪಿ ಇತ್ಯಭ್ರಷ್ಟನಾಮ ರೂಪ್ಯಪುರಕ್ಕೆ (ರಜತಪೀಠಪುರಕ್ಕೆ **ಶಿವಳ್ಳಿ, ಉಡುಪಿ ಎಂದು ವಿಕೃತವಾದ** ದೇಶಭಾಷೆಯ ಅಪಭ್ರಂಶದ ಹೆಸರು. ಸುರವರವಚಸಾ=ಸುರವರ=ಸುರವರ **ಅಂದರೆ ಹರಿಯು, ತದ್ವಚನೇನ=ಆ** ಹರಿಯ **ಮಾತಿನಿಂದ, ತತ್ತ್ವಜ್ಞಾನಹೀನಾನ್=** **ತತ್ತ್ವಜ್ಞಾನರಹಿತರಾದ, ಸಜ್ಜನಾನ್ ಅವಲೋಕ್ಯ=ಸಜ್ಜನರನ್ನು** ನೋಡಿ ದಯಯಾ=ದಯೆಯಿಂದ, ಬ್ರಹ್ಮಾದಿಭಿಃ=ಬ್ರಹ್ಮನೇ ಮೊದಲಾದವರಿಂದ **ಪ್ರಾರ್ಥಿತಸ್ಯ=** ಪ್ರಾರ್ಥಿಸಲ್ಪಟ್ಟ ಹರೇಃ=ಶ್ರೀ ಹರಿಯ, 'ಹೇವಾಯೋ=ಎಲೈ ವಾಯುವೇ, ತ್ವಂ=ನೀನು ರೂಪಾಂತರೇಣ=ಬೇರೊಂದು ರೂಪದಿಂದ, ಅವತೀರ್ಯ=ಅವತರಿಸಿ, ಮಮ=ನನ್ನ ಸದ್ಗುಣಾನ್=ನಿರ್ದೋಷವಾದ ಗುಣಗಳನ್ನು, ಪ್ರಕಾಶಯ=ಪ್ರಕಟಗೊಳಿಸು, ಇತ್ಯಾದಿ ವಚಸಾ ಇತ್ಯರ್ಥಃ=ಇತ್ಯಾದಿ ಮಾತಿನಿಂದ ಎಂದು ಅರ್ಥ. ಕಿಂಚ=ಮತ್ತು (ಸುರವರ ವಚಸಾ ಎಂಬ ಪದಕ್ಕೆ ಮತ್ತೊಂದು ಅರ್ಥ) ಸುರವರಃ=ಸುರವರ ಎಂದರೆ ದೇವೇಂದ್ರಃ=ದೇವೇಂದ್ರನು, ತದ್ವಚಸಾ ಅಂದರೆ ಸ್ವಾಮಿನ್ ಭೂಮೌ ಅವತೀರ್ಯ ಸರ್ವಾನ್ ಉದ್ಧರ ಇತಿಯಾಚ್ಞಾರೂಪ ವಚಸಾ ಇತ್ಯರ್ಥಃ=ಸ್ವಾಮಿಯೇ ಭೂಮಿಯಲ್ಲಿ ಅವತರಿಸಿ, ಎಲ್ಲರನ್ನು (ಯೋಗ್ಯರನ್ನು) ಉದ್ಧರಿಸು ಎಂಬ ಪ್ರಾರ್ಥನಾ ರೂಪವಾದ ಮಾತಿನಿಂದ ಎಂದು ಅರ್ಥ. ಅಜ್ಞಾನೋತ್ಪಾದನಾರ್ಥಂ ಎಂದರೆ, ಅಜ್ಞಾನಸ್ಯ ಅಂದರೆ ಜ್ಞಾನ ವಿರುದ್ಧಸ್ಯ=ಜ್ಞಾನ ವಿರುದ್ಧವಾದ, ~~ಮಿಥ್ಯಾಜ್ಞಾನಸ್ಯಚ=ಮಿಥ್ಯಾಜ್ಞಾನದ, ಉತ್ಪಾದನಾರ್ಥಂ ಎಂದರೆ ನಾಶಾರ್ಥಂ=ನಾಶಕ್ಕೋಸ್ಕರ ಗುರುಮತಿತಪಸಃ ಎಂಬಲ್ಲಿ~~ ಗುರುಣೀ **ಉತ್ಕೃಷ್ಟೇ ಮತಿತಪಸೀಯಸ್ಯಸಃ ತಸ್ಮಾತ್** ಎಂದು ವಿಗ್ರಹ ಉತ್ಕೃಷ್ಟವಾದ ಮತಿತಪಸ್ಸುಗಳು ಯಾವನಿಗೆ ಇವೆಯೋ **ಅವನು ಎಂದು ಅರ್ಥ. ಅನೇಕ ಕುತರ್ಕೈರಪ್ಯಚಂಚಲ** ಜ್ಞಾನಃ ಸತ್‌ಪುತ್ರಕಾಮನಯಾ ತೀವ್ರತಪಾಃ ಇತ್ಯರ್ಥಃ='ಗುರು**ಮತಿತಪಾಃ' ಎಂಬ ಮಧ್ಯಗೇಹ ಭಟ್ಟರಿಗೆ ಕೊಟ್ಟ** ವಿಶೇಷಣಕ್ಕೆ 'ಅನೇಕ ಕುತರ್ಕಗಳಿಂದಲೂ ಚಾಂಚಲ್ಯ ಹೊಂದದಿರುವ **ಜ್ಞಾನವುಳ್ಳವರು, ಮತ್ತು ಒಳ್ಳೆಯ ಪುತ್ರನ ಅಪೇಕ್ಷೆಯಿಂದ** ಕಠಿನವಾದ ತಪಸ್ಸು ಉಳ್ಳವರು ಎಂದು ಅರ್ಥ. ಮಧ್ಯಾಲ**ಯಾರ್ಯಾತ್=ಮಧ್ಯಗೇಹ ಭಟ್ಟಾಖ್ಯದ್ವಿಜಾತ್ ಎಂದು** ವ್ಯಾಖ್ಯಾನವು, ಮಧ್ಯಗೇಹ ಭಟ್ಟರೆಂಬ ಬ್ರಾಹ್ಮಣನ ದೆಸೆಯಿಂದ ಎಂದು **ಅರ್ಥ, (ಜಾತಃ=ಹುಟ್ಟಿದ) ಮಧ್ಯಾಲಯಾರ್ಯಾತ್** ಜಾತಃ ಎಂಬಲ್ಲಿ ಜನಿಕರ್ತುಃ ಪ್ರಕೃತಿಃ (1-4-30) ಜಾಯಮಾನಸ್ಯ **ಹೇತುರ ಪಾದಾನಂ ಸ್ಯಾತ್ ಹುಟ್ಟತಕ್ಕ** ವಸ್ತುವಿಗೆ ಕಾರಣವಾದ ವಸ್ತುವು ಅಪಾದಾನ ಸಂಜ್ಞೆಯನ್ನು ಹೊಂದುತ್ತದೆ, ಎಂಬ **ಸೂತ್ರದಿಂದ ಅಪಾದಾನ ಸಂಜ್ಞೆಯು** ಬಂದು ಅಪಾದನೇ ಪಂಚಮೀ (2-3-28) ಎಂಬ ಸೂತ್ರದಿಂದ ಪಂಚಮೀ **ವಿಭಕ್ತಿಯು ಬಂದಿದೆ.**

**ವಾಸುದೇವಾಭಿದಾನಃ** ಎಂಬ ಪದಕ್ಕೆ ವಾಸುದೇವ**ನಾಮಾ ಸನ್ ಎಂದು ವ್ಯಾಖ್ಯಾನ**, ವಾಸುದೇವ ಎಂಬ ಹೆಸರುಳ್ಳವನಾಗಿ ಎಂದು ಅರ್ಥ, ಜಾತಃ=ಅವತೀರ್ಣಃ=ಅವತಾರ **ಮಾಡಿದ, ಅವತೀರ್ಣಃ** ಎಂಬಲ್ಲಿ ಕರ್ತರಿಕ್ತಃ, ಅವತಾರ ಕರ್ತೃ ಎಂಬ ಅರ್ಥದಲ್ಲಿ ಕ್ತಪ್ರತ್ಯಯ, ಕರ್ಮಣಿಕ್ತ ಪ್ರತ್ಯಯ**ವಲ್ಲ, ಗೋದಾತ್ರೇ** ಎಂಬ ಪದಕ್ಕೆ, ಸ್ವಸ್ಯಶಿಶುತ್ವದಶಾಯಾಂ ಪಯಃಪಾನಾಯ ಗಾಂ ದತ್ತವತೇ ಪೂರ್ವಾಲಯ ವಿಪ್ರಾಯ **ಎಂದು ಅರ್ಥ,** ಗೋದಾತ್ರೇ ಎಂದರೆ ತಾನು ಮಗುವಾಗಿರುವಾಗ ಹಾಲು ಕುಡಿಯಲು ಹಸುವನ್ನು ಕೊಟ್ಟ **ಪೂರ್ವಾಲಯ** (ಮೂಡಿಲ್ಲಾಯ) ಬ್ರಾಹ್ಮಣನಿಗೆ

ಎಂದು ಅರ್ಥ. ಗೋಃ ದಾತಾ ಗೋದಾತಾ ಎಂದು ವಿಗ್ರಹ. ದಾತೃ ಶಬ್ದಸ್ಯತೃಜಂತತ್ವೇಶೇಷ ಷಷ್ಠೀತ್ವೇನ ಗೋದಾತೇತಿ ಷಷ್ಠೀ ತತ್ಪುರಷಃ ದಾತಾ ಎಂಬಲ್ಲಿರುವ ದಾತೃ ಶಬ್ದವುಣ್ವುಲ್ತೃಚೌ (3-1-133) ಕತ್ರರ್ಥದಲ್ಲಿ ಧಾತುವಿಗೆ ಣ್ವುಲ್ ಮತ್ತು ತೃಚ್ ಪ್ರತ್ಯಯಗಳು ಬರುತ್ತವೆ. ಎಂಬ ಸೂತ್ರದಿಂದ ಬಂದಿರುವ ತೃಚ್ ಪ್ರತ್ಯಯವೆಂದು ಇಟ್ಟುಕೊಂಡರೆ ಗೋವು ಎಂಬ ಕರ್ಮವನ್ನು ಸಂಬಂಧವೆಂದು ಮಾತ್ರವಿವಕ್ಷೆ ಮಾಡಿದಾಗ ಷಷ್ಠೀ ಶೇಷೇ (2-3-50) ಕಾರಕ ಪ್ರಾತಿಪದಿಕಾರ್ಥ ವ್ಯತಿರಿಕ್ತಃ ಸ್ವಸ್ವಾಮಿಭಾವಾದಿ ಸಂಬಂಧಃ ಶೇಷಃ ತತ್ರಷಷ್ಠೀಸ್ಯಾತ್ ಕಾರಕ ಪ್ರಾತಿಪಾದಿಕ ವ್ಯತಿರಿಕ್ತವಾದ ಸ್ವಸ್ವಾಮಿಭಾವಾದಿ ಸಂಬಂಧವು ಶೇಷವು, ಅಲ್ಲಿ ಷಷ್ಠೀ ಬರುತ್ತದೆ ಎಂಬ ಸೂತ್ರದಿಂದ ಷಷ್ಠೀ ಬಂದು ಷಷ್ಠೀ (2-2-8) ಎಂಬ ಸೂತ್ರದಿಂದ ಷಷ್ಠ್ಯಂತಕ್ಕೆ ಸುಬಂತದ ಜೊತೆಗೆ ಸಮಾಸವು ಬಂದಾಗ ಗೋದಾತಾ ಎಂದು ರೂಪ. ತೃನ್ನಂತತ್ವೇವಾಗಾಂದಾ ತೇತಿ ಗಮ್ಯಾದಿತ್ವೇನ ದ್ವಿತೀಯಾ ಸಮಾಸೋವಾ ಬೋದ್ಧವ್ಯಃ ದಾತಾ ಎಂಬಲ್ಲಿ ತೃನ್ 3-2-135 ತಚ್ಛೀಲ=ಆ ಸ್ವಭಾವವುಳ್ಳವನು, ತದ್ಧರ್ಮ=ಆಧರ್ಮವುಳ್ಳವನು. ತತ್ಸಾಧುಕಾರಿ=ಅದನ್ನು ಚೆನ್ನಾಗಿ ಮಾಡುವವನು ಎಂಬ ಅರ್ಥದಲ್ಲಿ ತೃನ್ ಪ್ರತ್ಯಯವು ಬಂದಿದೆ ಎಂದಿಟ್ಟುಕೊಂಡರೆ, ತೃನ್ನಂತವಾದ ದಾತೃಶಬ್ದದ ಕರ್ಮವಾದ ಗೋಶಬ್ದಕ್ಕೆ ನಲೋಕಾವ್ಯಯನಿಷ್ಠಾ ಖಲರ್ಥತೃನಾಂ (2-3-69) ಲಾದೇಶ, ಉ, ಉಕ, ಅವ್ಯಯ ನಿಷ್ಠಾ, ಖಲರ್ಥ, ತೃನ್, ಇವುಗಳ ಪ್ರಯೋಗವಿದ್ದಾಗ ಕರ್ತೃಕರ್ಮಣೋಃ ಕೃತಿ (2-3-65) ಎಂಬ ಸೂತ್ರದಿಂದ ಪ್ರಾಪ್ತವಾದ ಷಷ್ಠೀ ಬರುವುದಿಲ್ಲ, ಎಂಬ ನಿಷೇಧವಿರುವುದರಿಂದ ಷಷ್ಠೀ ಬರುವುದಿಲ್ಲ, ಗಾಂದಾತಾ ಎಂದೇ ಇರುತ್ತದೆ. ಆಗ 'ಗಮ್ಯಾದೀನಾ ಮುಪಸಂಖ್ಯಾನಂ (ವಾ।। 247) ಎಂಬ ವಾರ್ತಿಕದಿಂದ ದ್ವಿತೀಯಾಂತಗೋ ಪದಕ್ಕೆ ದಾತೃಪದ ಜೊತೆಗೆ ಸಮಾಸ ಬಂದು 'ಗೋದಾತಾ' ಎಂದು ರೂಪವಾಗುತ್ತದೆ. ಅದರ ಚತುರ್ಥಿ ವಿಭಕ್ತಿ 'ಗೋದಾತ್ರೇ' ಎಂದು 'ಏವಮುತ್ತರತ್ರಾಪಿ' ಹೀಗೆಯೇ ಮುಂದೆ ಬಂದ ಶಬ್ದ ರೂಪಗಳಲ್ಲಿಯೂ ಎರಡು ರೀತಿಯಿಂದ ಸಮಾಸವನ್ನು ಮಾಡಿಕೊಳ್ಳಬೇಕು. **ಮೋಕ್ಷದಾತಾ** ಎಂದರೆ ಮೋಕ್ಷವನ್ನು ಕೊಟ್ಟವನು. (ವಾಸುದೇವನು ಮಧ್ವಾಚಾರ್ಯರು ವಾಸುದೇವಾಭಿನ್ನನಾದ ಭಾರತೀರಮಣ ಮುಖ್ಯಪ್ರಾಣನು) ತಂ ದೇಹಂ ತ್ಯಕ್ತ್ವಾಸ್ವಸುತ ಪುತ್ರತ್ವೇನ ಜಾತಾಯತಸ್ಮೈ ತತ್ವಜ್ಞಾನೋಪದೇಶೇನ **ಮೋಕ್ಷಾದಾತಾ ಇತ್ಯರ್ಥಃ** = (ಗೋದಾನ ಮಾಡಿದ ಪೂರ್ವಾಲಯನು) ಆ ದೇಹವನ್ನು ಬಿಟ್ಟು ತನ್ನ ಮಗನ ಮಗನಾಗಿ ಹುಟ್ಟಿದಾಗ ಅವನಿಗೆ ತತ್ತ್ವಜ್ಞಾನೋಪದೇಶ ಮಾಡಿ, ಅದರಿಂದ ಮೋಕ್ಷವನ್ನು ಕೊಟ್ಟವನು ಎಂದು ಅರ್ಥ.

**ರಜತಪತಿ ಪದಾಸೇವಕ ।** ಎಂಬ ಪದಕ್ಕೆ ವ್ಯಾಖ್ಯಾನ ಮಾಡುತ್ತಾರೆ. ರಜತಪತೇ ಅಂದರೆ ರೂಪ್ಯ ಪೀಠ ಭರ್ತುಃ=ರೂಪ್ಯಪೀಠದ ಸ್ವಾಮಿಯ **ಪದಯೋಃ ಪಾದಗಳ, ಆ ಸೇವಕಃ**=ಎಲ್ಲಾ ರೀತಿಯಿಂದಲೂ ಸೇವಕನಾದ, ಯದಾ ಮಧ್ಯಗೇಹ ಭಟ್ಟಃ ಶಿಶುಭೂತಂ **ಆತ್ಮಾನಂ ಆದಾಯ ಪಾಜಕಕ್ಷೇತ್ರಾತ್** ರೂಪ್ಯಪುರಂ ಅಗತ್ಯ ಖನಂಉಪಾಯನತ್ವೇನ ಭಗವತೇ ಅರ್ಪಯತ್ ತದಾ ಅಯಂ **ಮನಸಾ ತತ್ಪದಂಸೇವಿತವಾನ್ ಇತಿ ಭಾವಃ।** ಯಾವಾಗ ಮಧ್ಯಗೇಹಭಟ್ಟರು ಮಗನಾಗಿರುವ ತನ್ನನ್ನು (ಮುಖ್ಯ ಪ್ರಾಣನನ್ನು) **ಎತ್ತಿಕೊಂಡು ಪಾಜಕ ಕ್ಷೇತ್ರದಿಂದ ಉಡುಪಿಗೆ** ಬಂದು ಈ ಬಾಲ ಮುಖ್ಯಪ್ರಾಣನನ್ನು ಕಾಣಿಕೆಯಾಗಿ ಭಗವಂತನಿಗೆ **ಅರ್ಪಿಸಿದರೋ ಆಗ ಈ** ಶಿಶುರೂಪಿಯಾದ ಮುಖ್ಯಪ್ರಾಣನು ಮನಸ್ಸಿನಿಂದ ರಜತಪೀಠ ಪುರಸ್ವಾಮಿಯಾದ ಅನಂತಾಸನನ **ಪಾದವನ್ನು ಸೇವಿಸಿದವನು** ಎಂದು ಅಭಿಪ್ರಾಯ. 'ಭೂತಭರ್ತ್ರಾ' ಎಂಬ ಪದಕ್ಕೆ ವ್ಯಾಖ್ಯಾನ ಭೂತಾನಾಂ **ಗ್ರಹಣಾಂ ಭರ್ತ್ರಾಸ್ವಾಮಿನಾ** ಮಹಾ ಗ್ರಹೇಣ ಬ್ರಹ್ಮರಾಕ್ಷಸೇನ ಇತಿಯಾವತ್, ಭೂತ ಎಂದರೆ ಗ್ರಹಗಳ, ಭರ್ತ್ರಾ ಎಂದು **ಸ್ವಾಮಿಯಾದ** ಮಹಾಗ್ರಹದಿಂದ, ಅಂದರೆ ಬ್ರಹ್ಮರಾಕ್ಷಸನಿಂದ ಎಂದು ತಾತ್ಪರ್ಯ, 'ಮಾನ್ಯ' ಅಂದರೆ ಪೂಜ್ಯಃ ಪೂಜ್ಯನಾದ, **ರೂಪ್ಯಪತಿಂ** ಸಂಸೇವ್ಯ ವಾಸುದೇವನಾಮಾನಂ ಶಿಶು ಮಾದಾಯ ನಿಶೀಥೇಪರಿವಾರೇಣ ಸಹ ಮಧ್ಯಗೇಹಭಟ್ಟಸ್ಯ .ಸ್ವಗೃಹಂ **ಪ್ರತಿಗಮನ** ಸಮಯೇ ಕಶ್ಚನಗ್ರಹಃ ಮಾರ್ಗ ಮಧ್ಯೇ ಸಹ ಗಂತಾರಂ ಕಂಚನ ಸಂಪೀಡ್ಯ ಅನ್ಯಮಾವಿಶ್ಯ **ಭೋ ಜನಾಃ,** ಅಯಂಶಿಶುಃ ಸಮರ್ಥಃ, ಯದ್ರಕ್ಷಿತಾಃ ಭವಂತೋ ನಮಯಾ ಹತಾಃ ಇತ್ಯಾದಿ ಶಿಶುಂ ಬಹುಧಾಸ್ತುತವಾನಿತ್ಯರ್ಥಃ.

ರಜತಪೀಠ ಪುರಾಧಿಪತಿಯಾದ ಅನಂತಾಸನ ದೇವರನ್ನು ಸೇವಿಸಿ ವಾಸುದೇವನೆಂಬ ಹೆಸರಿನ ಬಾಲರೂಪಿಯಾದ

ಮುಖ್ಯಪ್ರಾಣನನ್ನು ಎತ್ತಿಕೊಂಡು ಮಧ್ಯರಾತ್ರಿಯಲ್ಲಿ ಪರಿವಾರದೊಂದಿಗೆ ಮಧ್ಯಗೇಹಭಟ್ಟರು ತನ್ನ ಮನೆಗೆ ಹೋಗುತ್ತಿರುವಾಗ ಯಾವುದೋ ಒಂದು ಗ್ರಹವು (ಭೂತವು) ಮಾರ್ಗ ಮಧ್ಯದಲ್ಲಿ ಜೊತೆಗೆ ಹೋಗುತ್ತಿರುವ ಒಬ್ಬನನ್ನು ಚೆನ್ನಾಗಿ ಹೊಡಿಸಿ (ರಕ್ತವಾಂತಿ ಮಾಡಿಸಿ) ಮತ್ತೊಬ್ಬನಲ್ಲಿ ಅವೇಶ ಹೊಂದಿ, 'ಎಲೈ ಜನರೇ! ಈ ಶಿಶುವು ಸಮರ್ಥನು, ಇವನಿಂದ ರಕ್ಷಿತರಾದ ಕಾರಣದಿಂದಲೇ ನೀವು ನನ್ನಿಂದ ಕೊಲ್ಲಲ್ಪಟ್ಟಿಲ್ಲ 'ಇತ್ಯಾದಿ ರೀತಿಯಿಂದ ಅನೇಕ ಪ್ರಕಾರವಾಗಿ ಬಾಲರೂಪಿಯಾದ ಈ ಮುಖ್ಯಪ್ರಾಣನನ್ನು ಸ್ತೋತ್ರ ಮಾಡಿತು ಎಂದು ಅಭಿಪ್ರಾಯ. 'ಕುಲಿತ್ಥೈ ಅಪಿ ನಿಜಸಹಜಾತರ್ಪಿತಃ' ಎಂದ ಮೂಲ. ನಿಜಸಹಜಯಾ ಭಗಿನ್ಯಾ=ನಿಜಸಹೆಜಯಾ ಎಂದರೆ ಭಗಿನ್ಯಾ ಸಹೋದರಿಯಿಂದ ಎಂದು ಅರ್ಥ' ತರ್ಪಿತಃ ಭೋಜಿತಃ, ತರ್ಪಿತಃ ಎಂದರೆ ಊಟ ಮಾಡಿಸಲ್ಪಟ್ಟವನು ಎಂದು ಅರ್ಥ.

ಯಾದಾ ಮಾತಾ ಕದಾಚಿತ್ ಪುತ್ರಂ ಸ್ತನ್ಯೇನ ಸಂತರ್ಪ್ಯ ಕನ್ಯಾಹಸ್ತೇದತ್ವಾ ಸ್ವಯಂ ಗೃಹಾಂತರಂ ಯಯೌ= ಯಾವಾಗ ತಾಯಿಯು ಒಂದಾನೊಂದು ದಿನ ಮಗನನ್ನು ಎದೆಹಾಲಿನಿಂದ ತೃಪ್ತಿಪಡಿಸಿ ಹುಡುಗಿಯ (ತನ್ನ ಮಗಳ) ಕೈಯಲ್ಲಿ ಕೊಟ್ಟು ತಾನು ಬೇರೊಂದು ಮನೆಗೆ ಹೋದಳೋ ತದಾ ಅತೀವ ಕ್ರಂದಂತಂ ಬಾಲಂದೃಷ್ಟ್ವಾ ಕನ್ಯಾಪಕ್ವಂ ಕುಲಿತ್ಥಂ ಬಹು ಭೋಜಯಾಮಾಸ=ಆಗ ಬಹಳವಾಗಿ ಅಳುತ್ತಿರುವ ಮಗುವನ್ನು ನೋಡಿ ಆ ಹುಡುಗಿಯು ಬೇಯಿಸಿದ ಹುರುಳಿಯನ್ನು ಬಹಳವಾಗಿ ತಿನ್ನಿಸಿದಳು. ತಥಾಪಿ ನತಸ್ಯ ಕಶ್ಚನರೋಗೋಽಭವದಿತಿ ಭಾವಃ=ಅಷ್ಟೊಂದು ಹುರುಳಿಯನ್ನು ತಿಂದರೂ ಆ ಮಗುವಿಗೆ ಯಾವ ರೋಗವೂ ಉಂಟಾಗಲಿಲ್ಲವೆಂದೂ "ಕುಲಿತ್ಥೈರಪಿ ನಿಜ ಸಹಜಾತರ್ಪಿತಃ ಎಂಬುದರ ಭಾವವು. ಸಃಮೇಪ್ರೀಯತಾಂ ಪ್ರೀಣಾತು=ಅಂತಹ ಮುಖ್ಯಪ್ರಾಣನು ನನ್ನ ವಿಷಯದಲ್ಲಿ ಪ್ರೀತನಾಗಲಿ. ಪ್ರೀಯತಾಂ ಅಂದರೆ ಪ್ರೀಣಾತು=ಪ್ರೀತನಾಗಲಿ ಎಂದು ಭಾವವು. ಪ್ರೀಙ್ ಪ್ರೀಣನೇ (ಪ್ರೀತೌ) ಕರ್ತರಿ ಲೋಡಾತ್ಮನೇಪದಿ=ಪ್ರೀಙ್ ಪ್ರೀಣನೇ (ಪ್ರೀತೌ) ಎಂಬ ಧಾತುವು. ಆ ಧಾತುವಿಗೆ ಕರ್ತ್ರರ್ಥದಲ್ಲಿ ಲೋಟ್ ಲಕಾರದಲ್ಲಿ ಪ್ರೀಯತಾಂ ಎಂದು ರೂಪವಾಗುತ್ತದೆ. ಈ ಧಾತುವು ಆತ್ಮನೇಪದಿಯೆಂದು ತಿಳಿಯಬೇಕು.

**ಇಲ್ಲಿಗೆ ಮೂರನೆ ಪದ್ಯದ ವ್ಯಾಖ್ಯಾನವು ಸಮಾಪ್ತವಾಯಿತು.**

~~ವಾಸುದೇವನ (ಶ್ರೀ ಮಧ್ವಾಚಾರ್ಯರ) ಬಾಲ್ಯದ ಅದ್ಭುತವಾದ ಲೀಲೆಯನ್ನು ನಾಲ್ಕನೆ ಶ್ಲೋಕದಿಂದ~~ **ವರ್ಣಿಸುತ್ತಾರೆ.**

**ಆನಂದಂ ಮಂದಹಾಸಾಮೃತರಸಕಲಯಾ ಸಂದಧಾನಃ ಪ್ರಜಾನಾ**
**ಮಾಸ್ಯೇಂದೋಃ ಶೋಭಮಾನ್ಯೈರಪಿ ಕಲವಚನೈರ್ಬಾಲಲೀಲಾ ವಿಲಾಸೈಃ**
**ಗೋಪುಚ್ಛಾಲಂಬನಾದ್ಯೈರ್ವೃಷಪತಿ ವಿಹಿತಾಪತ್ ಪ್ರಣೋದೀ ಪ್ರಣುದ್ಯಾ**
**ದಜ್ಞಾನಾದ್ಯಾಪದಂ ಮೇ ಸ್ವಯಮಿಹ ಭಗವಾನ್ ವಾಸುದೇವೋಽ ಸುದೇವಃ ||೪||**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನಾ** - ಆನಂದ ಮಿತಿ। ಅಸ್ಯೇಂದೋ ಮುಖಚಂದ್ರಸ್ಯ, ಮಂದಹಾಸಾಮೃತ ರಸಕಲಯಾ। ಮಂದಸ್ಮಿತಾಸ್ಯಾ ಮೃತರಸ ಕಲಯಾ। ಪ್ರಜಾನಾಂ ಸಾಧೂನಾಂ, ಆನಂದಂ ಸಂದಧಾನಃ ಕುರ್ವಾಣಃ, ಕುಲಿತ್ಥ ಭಕ್ಷಣೇನ ಸ್ವಸ್ಯ ಅಪಾಯಶಂಕಯಾ ಉದ್ವಿಗ್ನಾನಾಂ ಪಿತ್ರಾದೀನಾಂ ಮುಖೇಂದು ದರ್ಶನೇನ ಸಂತೋಷಂಕುರ್ವಾಣಃ। ಇತಿಭಾವಃ ಶೋಭಮಾನೈಃ = ಶೋಭಾಯುಕ್ತೈ ಕಲವಚನೈಃ ಅವ್ಯಕ್ತಮಧುರಾಕ್ಷರೋಪೇತ ಭಾಷಣೈಃ ಗೋಪುಚ್ಛಾಲಂಬನಾದ್ಯೈಃ ಗೋಃ ವೃಷಭಸ್ಯ ಪುಚ್ಛಂ (ಲಾಂಗೂಲಂ) ತದಾಲಂಬನಂ ಆದ್ಯಂ ಯೇಷಾಂತೈಃ ಬಾಲಲೀಲಾ ವಿಲಾಸೈಃ ಜಾನುಚಂಕ್ರಮಣ ಗಮನಾದಿ ಬಾಲಕ್ರೀಡಾ ವಿನೋದೈರಪಿ, ಅನಂದಂ ಸಂದಧಾನಃ ಏಕಾಹಃ (ಏಕಸ್ಮಿನ್ ಅಹನಿ) ಪ್ರಾತರುತ್ಥಾಯ ಸ್ವಕೀಯ ವೃಷಭಸ್ಯ ಲಾಂಗೂಲಂಗೃಹಿತ್ವಾ, ವನಂ ಗತ್ವಾ ತತ್ರ ತತ್ರ ಪ್ರವಿಚಾರ್ಯ ಸಾಯಂಗೃಹಮಾಗತವಾನಿತಿ ಭಾವಃ ವೃಷಪತಿಹಿತಾಪತ್ ಪ್ರಣೋದೀ, ವೃಷಪತಿನಾ ವೃಷವಿಕ್ರೇತ್ರಾವಿಹಿತಾಂ ಕೃತಾಂ ಅಭೋಜನಾದಿರೂಪಾಂ ಆಪದಂ ಪ್ರಣುದತೀತಿಸಃ ತಥೋಕ್ತಃ। ತಾಚ್ಛೀಲಿಕೋಣಿನಿಃ ಕಶ್ಚನ ಮಧ್ಯಗೇಹಾಯ ವೃಷಭಂ ವಿಕ್ರೀಯ ಮೌಲ್ಯಾದಾನಾಯ, ಅನ್ನಭೋಜನಂ ಪ್ರತಿರುರೋಧ। ಸಃ ಕಾನಿಚಿದ್ ಬೀಜಾನಿ ಮೌಲ್ಯಸ್ಥಾನೇ ದತ್ವಾ, ಮೋಚಿತವಾನ್ ಇತಿಭಾವಃ।

ಭಗವಾನ್ ಪೂಜ್ಯಃ ಸ್ವಯಂ, ಮುಖ್ಯತಯಾ ಅಸುದೇವಃ ಪ್ರಾಣದೇವಃ ವಾಸುದೇವ ನಾಮಾ ಮೇ ಇಹ ಅಜ್ಞಾನಾದ್ಯಾಪದಂ। ಅಜ್ಞಾನ ದುಃಖಾದಿವಿಪದಂ। ಪ್ರಣುದ್ಯಾತ್ ಅಪನುದ್ಯಾತ್, ನುದಪ್ರೇರಣೇ, ಆಶೀರ್ಲಿಙ್ ॥೪॥

**ಪದಚ್ಛೇದ** - ಆನಂದಂ, ಮಂದಹಾಸಮೃತರಸಕಲಯಾ, ಸಂದಧಾನಃ, ಪ್ರಜಾನಾಂ, ಅಸ್ಯೇಂದೋಃ, ಶೋಭಮಾನ್ಯೈಃ, ಅಪಿ, ಕಲವನ್ಯೈಃ, ಬಾಲಲೀಲಾವಿಲಾಸ್ಯೈಃ, ಗೋಪುಚ್ಛಾಲಂಬನಾದ್ಯೈಃ, ವೃಷಪತಿ ವಿಹಿತಾಪತ್ ಪ್ರಣೋದಿ, ಪ್ರಣುದ್ಯಾತ್, ಅಜ್ಞಾನಾದ್ಯಾಪದಂ, ಮೇ, ಸ್ವಯಂ, ಇಹ, ಭಗವಾನ್, ವಾಸುದೇವಃ, ಅಸುದೇವಃ,

**ಅನ್ವಯ** - ಅಸ್ಯೇಂದೋಃ, ಮಂದಹಾಸಮೃತರಸಕಲಯಾ, ಪ್ರಜಾನಾಂ ಆನಂದಂ ಸಂದಧಾನಃ ಶೋಭಮಾನ್ಯೈಃ ಕಲವಚನ್ಯೈಃ, ಗೋಪುಚ್ಛಾಲಂಬನಾದ್ಯೈಃ, ಬಾಲಲೀಲಾವಿಲಾಸ್ಯೈಃ, ಅಪಿ, (ಆನಂದಂ ಸಂದಧಾನಃ) ವೃಷಪತಿ ವಿಹಿತೀಪತ್ ಪ್ರಣೋದಿ, ಭಗವಾನ್, ಸ್ವಯಂ ಅಸುದೇವಃ, ವಾಸುದೇವಃ, ಮೇ ಇಹ, ಅಜ್ಞ್ಯಾನಾದ್ಯಾಪದಂ ಪ್ರಣುದ್ಯಾತ್

**ಅನ್ವಯಾರ್ಥ** - ಅಸ್ಯೋಂದೋಃ=ಮುಖವೆಂಬ ಚಂದ್ರನ, ಮಂದಹಾಸಾಮೃತರಸಕಲಯಾ=ಮಂದಹಾಸ=ಕಿರುನಗೆಯೆಂಬ ಅಮೃತರಸ=ಅಮೃತದ್ರವದ, ಕಲಯಾ=ಲೇಶದಿಂದ ಪ್ರಾಜಾನಾಂ=ಜನರಿಗೆ, ಆನಂದಂ=ಸಂತೋಷವನ್ನು, ಸಂದಧಾನಃ=ಉಂಟು ಮಾಡುತ್ತಿರುವ ಶೋಭಮಾನ್ಯೈಃ=ಶೋಭಿಸುತ್ತಿರುವ, ಕಲವಚನ್ಯೈಃ=ತೊದಲು ಮಾತುಗಳಿಂದ, ಗೋಪುಚ್ಛಾಲಂಬನಾದ್ಯೈಃ=ಎತ್ತಿನ ಬಾಲವನ್ನು ಹಿಡಿದು ಕಾಡುಮೈದಾನಗಳಲ್ಲಿ ತಿರುಗುವುದೇ ಮೊದಲಾದ, ಬಾಲಲೀಲಾ ವಿಲಾಸ್ಯೆ ಅಪಿ=ಅಂಬೆಗಾಲಿಕ್ಕುವುದು. ಏಳುತ್ತ ಬೀಳುತ್ತ ನಡೆಯುವುದು ಮೊದಲಾದ ಮಕ್ಕಳ ಆಟದ ವಿನೋದಗಳಿಂದಲೂ, ಆನಂದಂ=ಸಂತೋಷವನ್ನು, ಸಂದಧಾನಃ=ಉಂಟು ಮಾಡುತ್ತಿರುವ ವೃಷಪತಿ ವಿಹಿತಾಪತ್ ಪ್ರಣೋದಿ, ವೃಷಪತಿ=ತಮಗೆ ಎತ್ತನ್ನು ಮಾರಿರುವ ರೈತನಿಂದ ವಿಹಿತ=ಮಾಡಲ್ಪಟ್ಟ, ಅಪತ್=ಭೋಜನಕ್ಕೆ ಅಡ್ಡಿ ಪಡಿಸುವುದು ಎಂಬ ತೊಂದರೆಯನ್ನು ಪ್ರಣೋದಿ=ಪರಿಹರಿಸಿದ, ಭಗವಾನ್=ಷಡ್ಗುಣೈಶ್ವರ್ಯ ಸಂಪನ್ನನಾದ, ಸ್ವಯಂ=ಸ್ವತಃ ಅಸುದೇವಃ=ಮುಖ್ಯಪ್ರಾಣದೇವರ ಅವತಾರನಾದ, ವಾಸುದೇವಃ=ವಾಸುದೇವನು, ಮೇ=ನನ್ನ, ಇಹ=ಈ ಸಂಸಾರದಲ್ಲಿ ಉಂಟಾಗುವ, ಅಜ್ಞಾನಾದ್ಯಾಪದಂ=ಅಜ್ಞಾನದುಃಖಾದಿ ವಿಪತ್ತುಗಳನ್ನು, ಪ್ರಣುದ್ಯಾತ್=ಪರಿಹರಿಸಲಿ.

---

**ತಾತ್ಪರ್ಯ** - ಮುಖ್ಯ ಪ್ರಾಣಾವತಾರನಾದ ಬಾಲ ವಾಸುದೇವನು ಅಷ್ಟೊಂದು ಹುರುಳಿಯನ್ನು ತಿಂದರೂ ಅವನಿಗೆ ಯಾವ ತೊಂದರೆಯೂ ಆಗಲಿಲ್ಲ, ಮಗುವಿಗೆ ಅಪಾಯವಾಗಬಹುದೆಂದು ತಂದೆ ತಾಯಿಗಳೂ ಇತರ ಜನರೂ ಚಿಂತಾಗ್ರಸ್ತರಾಗಿದ್ದರು. ಚಂದ್ರನು ತನ್ನ ಒಂದೊಂದೇ ಅಮೃತ ಕಲೆಗಳನ್ನು ಹೆಚ್ಚಿಸಿಕೊಳ್ಳುತ್ತಾ ಜನರಿಗೆ ಆನಂದವನ್ನುಂಟು ಮಾಡುವಂತೆ ವಾಸುದೇವನೂ ಯಾವ ದುಃಖ ತೊಂದರೆಗಳಿಲ್ಲದೆ ತನ್ನ ಮಂದಹಾಸವೆಂಬ ಅಮೃತಕಲೆಯಿಂದ ತನ್ನನ್ನು ನೋಡಲು ಬಂದ ಜನರೆಲ್ಲರನ್ನೂ ಸಂತೋಷಪಡಿಸುತ್ತಿದ್ದನು. ಅನಂತರ ವಾಸುದೇವನು ತನ್ನ ಮೃದು ಮಧುರ ಮನೋಹರವಾದ ತೊದಲು ನುಡಿಗಳಿಂದ ಎಲ್ಲರಿಗೂ ಇನ್ನೊಂದು ರೀತಿಯಿಂದ ಆನಂದವನ್ನುಂಟು ಮಾಡುತ್ತಿದ್ದನು. ಕ್ರಮೇಣ ಅಂಬೆಗಾಲಿನಿಂದ ನಡೆಯುವುದು, ಏಳುತ್ತಾ ಬೀಳುತ್ತಾ ಮುಗ್ಗರಿಸುತ್ತಾ ನಡೆಯುವುದು ಮೊದಲಾದ ಬಾಲಲೀಲೆಗಳಿಂದಲೂ ಅವನು ಎಲ್ಲರನ್ನೂ ಸಂತೋಷಪಡಿಸಲಾರಂಭಿಸಿದನು. ವಾಸುದೇವನಿಗೆ ಒಂದು ವರ್ಷ ವಯಸ್ಸಾಗುವಾಗ ಅವನು ಇನ್ನೊಂದು ಅದ್ಭುತವಾದ ಲೀಲೆಯನ್ನು ತೋರಿದನು. ಒಂದು ದಿನ ಬೆಳಿಗ್ಗೆ ಅವರ ಮನೆಯ ಎತ್ತು ಕಾಡುಗಳಿಗೆ ಮೇಯಲು ಹೊರಟಾಗ ಬಾಲ ವಾಸುದೇವನು ಎತ್ತಿನ ಬಾಲವನ್ನು ಹಿಡಿದುಕೊಂಡು ಹೊರಟನು. ಆಗ ವಾಸುದೇವನನ್ನು ಯಾರೂ ನೋಡಲಿಲ್ಲ, ಅಲ್ಲಿಂದ ಹಗಲು ಪೂರ್ತಿಯಾಗಿ ಎತ್ತಿನ ಬಾಲವನ್ನು ಹಿಡಿದುಕೊಂಡು ತಿರುಗಾಡುತ್ತಾ ಸಾಯಂಕಾಲ ಮನೆಗೆ ಬಂದನು. ಅಷ್ಟು ಹೊತ್ತಿಗಾಗಲೇ ಎಲ್ಲರೂ ಮಗುವನ್ನು ಹುಡುಕಿ ಅದು ಸಿಗದೆ ಇದ್ದಾಗ, ಬಹಳ ಗಾಬರಿಯಾಗಿದ್ದರು. ಮಗುವು ತಮ್ಮ ಕೈತಪ್ಪಿ ಹೋಯಿತೆಂದು ದುಃಖಿಸಿದ್ದರು. ಸಾಯಂಕಾಲ ಎತ್ತಿನ ಬಾಲಕ್ಕೆ ಜೋತು ಬಿದ್ದು ಬರುತ್ತಿರುವ ಮಗುವನ್ನು ನೋಡಿದಾಗ ಅವರ ಆನಂದಕ್ಕೆ ಪಾರವೇ ಇರಲಿಲ್ಲ. ಇಂತಹ ಅದ್ಭುತವಾದ ಬಾಲಲೀಲೆಗಳನ್ನು ತೋರಿಸುತ್ತಿದ್ದ ವಾಸುದೇವನು ಮತ್ತಷ್ಟು ದೊಡ್ಡವನಾದನು. ವಾಸುದೇವನ ತಂದೆ ನಡ್ಯಂತಿಲ್ಲಾಯ ನಾರಾಯಣ ಭಟ್ಟರಿಗೆ ಒಬ್ಬ

ರೈತನು ಒಂದು ಎತ್ತನ್ನು ಮಾರಿದ್ದನು. ಆದರೆ ಅವರಿಗೆ ಆ ಎತ್ತಿನ ಹಣವನ್ನು ಕೊಡಲು ಸಾಧ್ಯವಾಗಿರಲಿಲ್ಲ, ಒಂದೆರಡು ವಾಯಿದೆಗಳನ್ನು ಹೇಳಿದ ಮೇಲೂ, ಆ ಸಮಯಕ್ಕೆ ಸರಿಯಾಗಿ ಮಧ್ಯಗೇಹ ಭಟ್ಟರು ಹಣ ಕೊಡದಿದ್ದಾಗ, ಒಂದು ದಿನ ಆ ರೈತನು ಮಧ್ಯಾಹ್ನ ವಾಸುದೇವನ ಮನೆಯ ಎದುರು ಕುಳಿತು ತನ್ನ ಹಣವನ್ನು ಕೊಡದಿದ್ದರೆ ಊಟ ಮಾಡಲು ಮನೆಯೊಳಕ್ಕೆ ಹೋಗಲು ಬಿಡುವುದಿಲ್ಲವೆಂದು ಹೇಳಿ, ಅಡ್ಡಿಪಡಿಸುತ್ತಿದ್ದನು. ಬಾಲ ವಾಸುದೇವನು ತಂದೆಯಿಂದ ವಿಷಯವನ್ನೆಲ್ಲಾ ತಿಳಿದು, ತಾನು ಆಟವಾಡುತ್ತಿದ್ದ ಹುಣಸೇಬೀಜಗಳನ್ನು ರೈತನ ಹರಡಿದ ಬಟ್ಟೆಗೆ ಹಾಕಿದನು. ರೈತನು ಮಗುವಿನ ಆ ಆಶ್ಚರ್ಯಕರವಾದ ಲೀಲೆಯಿಂದ ಮುಗ್ಧನಾಗಿ ಆ ಬೀಜಗಳನ್ನು ಕಟ್ಟಿಕೊಂಡು ತತ್ಕಾಲಕ್ಕೆ ಅಲ್ಲಿಂದ ಹೊರಟುಹೋದನು. ಮನೆಗೆ ಹೋಗಿ ನೋಡುವಾಗ ಆ ಬೀಜಗಳು ಬಂಗಾರದ ನಾಣ್ಯಗಳಾಗಿದ್ದವು. ಅವನ ಸಂತೋಷಕ್ಕೆ ಪಾರವೇ ಇಲ್ಲ. ಕಾಲಾಂತರದಲ್ಲಿ ಮಧ್ಯಗೇಹ ನಾರಾಯಣಭಟ್ಟರು ರೈತನ ಹಣವನ್ನು ಕೊಡಲು ಹೋದಾಗ ಅವನು ನಿಮ್ಮ ಮಗನು ಅಂದೇ ಹಣವನ್ನು ಕೊಟ್ಟಿದ್ದಾನೆಂದು ಹೇಳಿದನು. ಆ ರೈತನ ಮನೆಯಲ್ಲಿ ಮುಂದೆ ಸೇರು ಪಾತ್ರೆಗಳಲ್ಲಿ ಬಂಗಾರದ ನಾಣ್ಯವನ್ನು ಅಳೆಯುವಷ್ಟು ಸಂಪತ್ತು ಉಂಟಾಯಿತು. ಹೀಗೆ ತಂದೆಗೆ ಬಂದ ಆಪತ್ತನ್ನು ಪರಿಹರಿಸಿದ ಸಮಗ್ರ ಐಶ್ವರ್ಯ ಜ್ಞಾನವಿಜ್ಞಾನಸಂಪನ್ನರಾದ ಶ್ರೀ ಮುಖ್ಯ ಪ್ರಾಣದೇವರ ಅವತಾರನಾದ ವಾಸುದೇವನು ನಮಗೆ ಬರತಕ್ಕ ಅಜ್ಞಾನ ದುಃಖಾದಿಗಳನ್ನು ಪರಿಹರಿಸಲಿ ಎಂದು ಪ್ರಾರ್ಥಿಸಿದ್ದಾರೆ.

**ವಿಗ್ರಹ** - ಮಂದಶ್ಚಾಸೌ ಹಾಸಶ್ಚಮಂದಹಾಸಃ, ಅಮೃತಸ್ಯರಸಃ (ಅಮೃತಂ ಇತಿರಸಃ ಇತಿವಾ) ಅಮೃತರಸಃ, ಮಂದಹಾಸ ಏವ ಅಮೃತರಸಃ, ಮಂದಹಾಸಮೃತರಸಃ ಮಂದಹಾಸಮೃತರಸಸ್ಯಕಲಾ ಮಂದಹಾಸಾಮೃತರ ಸಕಲಾ, ತಯಾ, ಅಸ್ಯಮೇವ ಇಂದುಃ ಆಸ್ಯೇಂದು ತಸ್ಯ, ಕಲಾನಿ, ಚತಾನಿ ವಾಚನಾನಿಚ ಕಲವಚನಾನಿ ತೈಃ, ಬಾಲನಾಂ ಲಿಲಾಃ ಬಾಲಲೀಲಾಃ **ಬಾಲಲಿಲಾನಾಂ ವಿಲಾಸಾಃ** ಬಾಲಲೀಲಾವಿಲಾಸಾಃ ತೈಃ, **ಗೋಃ**ಪುಚ್ಛಂ ಗೋಪುಚ್ಛಂ, ಗೋಪುಚಸ್ಯ ಆಲಂಬನಂ ಗೋಪುಚ್ಛಾಲಂಬನಂ, **ಆದೌಭವಂ** ಆದ್ಯಂ. **ಗೋಪುಚ್ಛಾಲಂಬನಂ** ಆದ್ಯಂ **ಯೇಷಾಂತೇ** ಗೋಪುಚ್ಛಾಲಂಬನಾದ್ಯಾಸ್ತೈಃ ವೃಷಸ್ಯಪತಿಃ ವೃಷಪತಿಃ **ವೃಷಪತಿನಾ ವಿಹಿತಾ ವೃಷಪತಿವಿಹಿತಾ ವೃಷಪತಿವಿಹಿತಾಚಸಾಅಪತ್**ಚ **ವೃಷಪತಿವಿಹಿತಾಪತ್** ವೃಷಪತಿವಿಹಿತಾಪದ **ಪ್ರಣುದತೀತಿ ವೃಷಪತಿವಿಹಿತಾಪತ್ ಪ್ರಣೋದೀ**, ಅಜ್ಞಾನಂ ಆದಿಃ ಯಸ್ಯಾಸಾಃ ಅಜ್ಞಾನಾದಿಃ **ಅಜ್ಞಾನಾದಿಶ್ಚಾಸೌ ಆಪತ್** ಚ **ಅಜ್ಞಾನಾದ್ಯಾಪತ್** ತಾಂ, ಭಗಂ **ಅಸ್ಯಅಸ್ತೀತಿ** ಭಗವಾನ್, ಅಸೂನಾಂದೇವಃ ಅಸುದೇವಃ

**ಕ್ರಿಯಾಪದ** - ನುದ್ಯಾತ್, ನುದ್ಯಾಸ್ತಾಂ, ನುದ್ಯಾಸುಃ, ನುದ್ಯಾಃನುದ್ಯಾಸ್ತಂ, ನುದ್ಯಾಸ್ತ, ನುದ್ಯಾಸಂ, ನುದ್ಯಾಸ್ವ, ನುದ್ಯಾಸ್ಮ ಣುದಪ್ರೇರಣೇ, ಇತಿ ಪ್ರೇರಣಾರ್ಥಕಾತ್ ನುದ್‌ಧಾತೋಃ ಸಮರ್ಕಕಾತ್ ಪರಸ್ಮೈಪದಿನಃ ಕರ್ತರಿ ಆಶೀರ್ಲಿಙ್ ಪ್ರಥಮಪುರುಷ ಏಕವಚನೇ ನುದ್ಯಾತ್ ಇತಿರೂಪಂ.

**ಪ್ರಯೋಗ** - ಅಸುದೇವಃ ವಾಸುದೇವಃ ಅಜ್ಞಾನಾದ್ಯಾಪದಂ ನುದ್ಯಾತ್ (ಕರ್ತರಿ) ಅಸುದೇವೇನ ವಾಸುದೇವೇನ ಅಜ್ಞಾನಾದ್ಯಾಪತ್ ನುತ್ಸಿಷ್ಟ (ಕರ್ಮಣಿ)

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಆನಂದಂ ಇತಿ=ಆನಂದಂ ಎಂದು ಶ್ಲೋಕ ಪ್ರಾರಂಭವಾಗಿದೆ. ಆಸ್ಯೇಂದೋಃ ಮುಖಚಂದ್ರಸ್ಯ, ಆಸ್ಯೇಂದೋ ಎಂದರೆ ಮುಖ್ಯಂದ್ರಸ್ಯ ಎಂದು ಅರ್ಥ. ವಾಸುದೇವನ ಮುಖವೇ ಚಂದ್ರ ಅವನ ಮುಖವು ಚಂದ್ರನಂತಿದೆ ಎಂದು ತಾತ್ಪರ್ಯ, ಮಂದಹಾಸಾಮೃತರಸಕಲಯಾ ಎಂಬುದಕ್ಕೆ ಮಂದಸ್ಮಿತಾಖ್ಯಾಮೃತ ರಸಕಲಯಾ ಎಂದು ಸಂಸ್ಕೃತದಲ್ಲಿ ಅರ್ಥ. ಮಂದಹಾಸವೆಂಬ ಅಮೃತರಸದ ಕಲೆಯಿಂದ, ಅದರ ಲೇಶದಿಂದ ಎಂದು ಅರ್ಥ, ಪ್ರಜಾನಾಂ ಸಾಧುನಾಂ ಪ್ರಜಾನಾಂ ಎಂದರೆ ಸಾಧೂನಾಂ=ಸಜ್ಜನರಿಗೆ ಎಂದು ಅರ್ಥ, ಆನಂದಂ=ಸಂತೋಷವನ್ನು ಸಂದಧಾನಃ ಅಂದರೆ ಕುರ್ವಾಣಃ=ಉಂಟುಮಾಡುತ್ತಿರುವ, ಕುಲಿತ್ಥ ಭಕ್ಷಣೇನ=ಹುರುಳಿಯನ್ನು ತಿಂದಿರುವುದರಿಂದ, ಸ್ವಸ್ಯ=ತನಗೆ, ಅಪಾಯಶಂಕಯಾ=ಅಪಾಯವಾಗಬಹುದು ಎಂಬ ಸಂದೇಹದಿಂದ, ಉದ್ವಿಗ್ನಾನಾಂ=ಕಳವಳಗೊಂಡ, ಪಿತ್ರಾದೀನಾಂ = ತಂದೆ ಮೊದಲಾದವರಿಗೆ ಮುಖೇಂದು ದರ್ಶನೇನ=ತನ್ನ ಮುಖಚಂದ್ರನ ದರ್ಶನದಿಂದ, ಸಂತೋಷಂ

ಕುರ್ವಾಣಃ= ಸಂತೋಷವನ್ನುಂಟುಮಾಡುವ, ಇತಿಭಾವಃ=ಎಂದು ಅಭಿಪ್ರಾಯ. ವಾಸುದೇವನು ಹುರುಳಿ ತಿಂದದ್ದರಿಂದ, ಅವನಿಗೆ ಅಪಾಯವಾಗಬಹುದೆಂದು ಹೆದರಿದ್ದ ತಂದೆ-ತಾಯಿ ಮುಂತಾದವರಿಗೆ ತನ್ನ ಮಂದಹಾಸಭರಿತವಾದ ಸುಂದರ ಮುಖಚಂದ್ರವನ್ನು ತೋರಿಸಿ ವಾಸುದೇವನು ಆನಂದವನ್ನುಂಟುಮಾಡುತ್ತಿದ್ದನು ಎಂದು ಅಭಿಪ್ರಾಯ. ಶೋಭಮಾನೈಃ= ಶೋಭಯುಕ್ತೈಃ, ಶೋಭಿಸುತ್ತಿರುವ, ಕಲವಚನೈಃ=ಅವ್ಯಕ್ತ ಮಧುರವಾದ ಅಕ್ಷರಗಳಿಂದ ಕೂಡಿದ ಮಾತುಗಳಿಂದ, ಬಾಲ್ಯದಲ್ಲಿ ವಾಸುದೇವನು ಮಾತಾಡುವ ತೊದಲಾದ ಅಸ್ಪಷ್ಟ ಮಾತುಗಳು ಕೇಳುವುದಕ್ಕೆ ಚೆನ್ನಾಗಿರುತ್ತಿದ್ದವು ಎಂದು ಭಾವ. ಗೋಪುಚ್ಛಾಲಂಬನಾದ್ಯೈಃ=ಗೋಃ ವೃಷಭಸ್ಯಗೋಃ ಎಂದರೆ ವೃಷಭಸ್ಯ=ಎತ್ತಿನ ಪುಚ್ಛಂಬಾಲವು), ತತ್ = ಅದರ ಆಲಂಭನಂ=ಆಧರಿಸಿ ಜೋಲಾಡುವುದು, ಆದ್ಯಂ=ಮೊದಲನೆಯದು, ಯೇಷಾಂತೈಃ=ಯಾವುವುಗಳಿಗೆ ಇದೆಯೋ ಅಂತಹ ಬಾಲಲೀಲಾವಿಲಾಸೈಃ ಬಾಲಕರ ಅನಾಯಾಸವಾದ ಆಟಗಳಿಂದ, ಅಂದರೆ ಜಾನುಚಂಕ್ರಮಣಗಮನಾದಿ= ಅಂಬೆಗಾಲಿಟ್ಟು ನಡೆಯುವುದು ಮೊದಲಾದ, ಬಾಲಕ್ರಿಡಾವಿನೋದೈರಪಿ=ಬಾಲಕರ ಆಟದ ವಿನೋದಗಳಿಂದಲೂ ಆನಂದಂ=ಸಂತೋಷವನ್ನು, ಸಂದಧಾನಃ=ಉಂಟುಮಾಡುವ ಈ ಸಂದರ್ಭದ ಅಭಿಪ್ರಾಯವನ್ನೆಲ್ಲಾ ಹೇಳುತ್ತಾರೆ. (ಏಕಾಬ್ದಃ) ಬಾಲಃ=ಒಂದು ವರ್ಷದ ಹುಡುಗನಾದ ವಾಸುದೇವನು, ಸ್ವಕೀಯ ವೃಷಭಸ್ಯ=ತಮ್ಮ ಎತ್ತಿನ, ಲಾಂಗೂಲಂ=ಬಾಲವನ್ನು, ಗೃಹಿತ್ವಾ=ಹಿಡಿದುಕೊಂಡು, ವನಂಗತ್ವಾ=ಕಾಡಿಗೆ ಹೋಗಿ, ತತ್ರ ತತ್ರ ಪ್ರವಿಚಾರ್ಯ=ಅಲ್ಲಲ್ಲಿ ಸುತ್ತಾಡಿ, ಸಾಯಂಗೃಹಮಾಗತವಾನಿತಿ ಭಾವಃ=ಸಾಯಂಕಾಲ ಮನೆಗೆ ಬಂದನು ಎಂದು ಅಭಿಪ್ರಾಯವು. ಗೋಪುಚ್ಛಾಲಂಬನಾದ್ಯೈಃ ಎಂಬ ಪದದಿಂದ ಈ ಕಥೆಯು ಸೂಚಿತವಾಗುತ್ತಿದೆ. "ಒಂದು ದಿನ ಒಂದು ವರ್ಷ ವಯಸ್ಸಿನ ಬಾಲಕ ವಾಸುದೇವನು ಬೆಳಿಗ್ಗೆ ತಮ್ಮ ಮನೆಯ ಎತ್ತಿನ ಬಾಲವನ್ನು ಹಿಡಿದುಕೊಂಡು ಕಾಡಿಗೆ ಹೋಗಿ, ಅಲ್ಲಲ್ಲಿ ಓಡಾಡಿ ಸಾಯಂಕಾಲ ಮನೆಗೆ ಬಂದನು" ವೃಷಪತಿ ವಿಹಿತಾಪತ್ ಪ್ರಣೋದಿ=ಎತ್ತನ್ನು ತಮಗೆ ಮಾರಿದ ರೈತನಿಂದ ಉಂಟಾದ ಅಪತ್ತನ್ನು ಪರಿಹರಿಸಿದ, ಎಂದರೆ, ವೃಷಪತಿನಾ=ವೃಷವಿಕ್ರೇತ್ರಾ=ಎತ್ತನ್ನು ಮಾರಿದವನಿಂದ, ವಿಹಿತಾಂ=ಕೃತಾಂ=ಎಂದರೆ ಉಂಟುಮಾಡಲ್ಪಟ್ಟ, ಅಭೋಜನಾದಿರೂಪಾಂ =ಊಟವಿಲ್ಲದೆ ಇರುವಿಕೆಯೇ ಸ್ವರೂಪವಾಗಿ ಉಳ್ಳ, ಆಪದಂ=ಅಪತ್ತನ್ನು ಪ್ರಣುದತೀತಿ=ಪರಿಹರಿಸುತ್ತಾನೆ ಎಂದು ಸಃ =ಅಂತಹವನು, ತಥೋಕ್ತಃ=ಹಾಗೆ ಹೇಳಲ್ಪಟ್ಟವನು 'ವೃಷಪತಿ ವಿಹಿತಾಪತ್ ಪ್ರಣೋದೀ,' ಇಲ್ಲಿ ತಾಚ್ಛೀಲಿಕಃ=ತಾಚ್ಛೀಲ್ಯಾರ್ಥದಲ್ಲಿ ಬರುವ ಣಿನಿ ಪ್ರತ್ಯಯವು. ಈಗ ವೃಷಪತಿ ವಿಹಿತಾಪತ್ ಪ್ರಣೋದೀ ಎಂಬ ವಿಶೇಷಣದಿಂದ ಸೂಚಿತವಾದ ಕಥೆಯನ್ನು ಹೇಳುತ್ತಾರೆ. ಕಶ್ಚನ=ಯಾವನೋ ಒಬ್ಬ ರೈತನು, ಮಧ್ಯಗೇಹಾಯ=ಮಧ್ಯಗೇಹ ಭಟ್ಟರಿಗೆ, ವೃಷಭಂ=ಎತ್ತನ್ನು, ವಿಕ್ರಿಯ=ಮಾರಿ, ಮೌಲ್ಯಾದಾನಾಯ=ಎತ್ತಿನ ಬೆಲೆಯನ್ನು (ಅನೇಕ ಬಾರಿ ಕೊಡುತ್ತೇನೆಂದು ಹೇಳಿದರೂ ಕೊಡದೆ ಇದ್ದಾಗ) ತೆಗೆದುಕೊಳ್ಳುವುದಕ್ಕಾಗಿ ಅನ್ನಭೋಜನಂ=ಮಧ್ಯಾಹ್ನದ ಊಟವನ್ನೇ, ಪ್ರತಿರುರೋಧ=ತಡೆದನು. ಸಃ (ವಾಸುದೇವಃ) ಕಾನಿಚಿದ್ ಬೀಜಾನಿ=ಆ ವಾಸುದೇವನು ಯಾವುದೋ ಕೆಲವು ಬೀಜಗಳನ್ನು (ಹುಣಸೇಬೀಜಗಳನ್ನು) ಮೌಲ್ಯಸ್ಥಾನೇ=ಬೆಲೆಯ. ಜಾಗದಲ್ಲಿ (ಬೆಲೆಗೆ ಬದಲಾಗಿ) ದತ್ವಾ ಕೊಟ್ಟು ಮೋಚಿತವಾನ್=(ತಂದೆಯನ್ನು) ಬಿಡಿಸಿದನು. ಮಧ್ಯಗೇಹಭಟ್ಟರು ಒಬ್ಬ ರೈತನಿಂದ ಒಂದು ಎತ್ತನ್ನು ಬೆಲೆಗೆ ಕೊಂಡುಕೊಂಡಿದ್ದರು. ಆದರೆ ಆ ಎತ್ತಿನ ಬೆಲೆಯನ್ನು ಅವರಿಗೆ ಕೊಡಲು ಆಗಲಿಲ್ಲ, ಆನೇಕ ಬಾರಿ ವಾಯದೆಗಳನ್ನು (ಗಡುಗಳನ್ನು) ಇಟ್ಟುಕೊಡುತ್ತೇನೆಂದರೂ ಕೊಡಲು ಆಗಲಿಲ್ಲ, ಆಗ ಧನಿಕ ರೈತನು ಒಂದು ದಿನ ಮಧ್ಯಾಹ್ನ ಬಂದು ಈದಿನ ಈಗಲೇ ನನ್ನ ಹಣವನ್ನು ಕೊಡದಿದ್ದರೆ ಊಟ ಮಾಡಲು ಮನೆಯೊಳಗೆ ಹೋಗಲು ಬಿಡುವುದಿಲ್ಲ ಎಂದು ತಡೆದನು. ಆಗ ಅಲ್ಲಿಯೇ ಆಟವಾಡುತ್ತಿದ್ದ ವಾಸುದೇವನು ತನ್ನ ಕೈಯಲ್ಲಿದ್ದ ಹುಣಸೇ ಬೀಜಗಳನ್ನು ಆ ರೈತನಿಗೆ ಕೊಟ್ಟನು. ಧನಿಕ ರೈತನು ಆ ಬೀಜಗಳನ್ನು ತನ್ನ ಬಟ್ಟೆಯಲ್ಲಿ ಕಟ್ಟಿಕೊಂಡು ಮನೆಗೆ ಹೋದನು. ಅಲ್ಲಿ ನೋಡುವಾಗ ಆ ಹುಣಸೇಬೀಜಗಳೆಲ್ಲವೂ ಬಂಗಾರವಾಗಿದ್ದವು. ಹೀಗೆ ವಾಸುದೇವನು ತಂದೆಯ ಋಣವನ್ನು ತಿರಿಸಿದನು. "ಭಗವಾನ್=ಪೂಜ್ಯಃ ಭಗವಾನ್ ಎಂದರೆ ಪೂಜ್ಯನಾದ ಸ್ವಯಂ=ಮುಖ್ಯತಯಾ, ಸ್ವಯಂ ಎಂದರೆ ಮುಖ್ಯವಾಗಿ, ಅಸುದೇವಃ=ಪ್ರಾಣದೇವಃ ಪ್ರಾಣದೇವರಾದ (ಶ್ರೀ ಮುಖ್ಯ ಪ್ರಾಣದೇವರಾದ,) ವಾಸುದೇವ (ವಾಸುದೇವನಾಮಾ) = ವಾಸುದೇವನೆಂಬ ಹೆಸರುಳ್ಳವನು. ಮೇ = ನನ್ನ ಇಹ = ಈ ಸಂಸಾರದಲ್ಲಿ ಉಂಟಾಗುವ ಅಜ್ಞಾನಾದ್ಯಾಪದಂ = ಅಜ್ಞಾನ ದುಃಖಾದಿ ವಿಪದಂ = ಅಜ್ಞಾನ ದುಃಖ ಮೊದಲಾದ ವಿಪತ್ತನ್ನೂ,

ಪ್ರಣುದ್ಯಾತ್=ಅಪನುದ್ಯಾತ್=ದೂರೀಕರಿಸಲಿ; ಪ್ರಣುದ್ಯಾತ್ ಎಂಬಲ್ಲಿ ಣುದಪ್ರೇರಣೇ, ಎಂಬ ಧಾತುವು. ಣ ಕಾರವು ನಕಾರವಾಗಿ ನುದ್ ಎಂದಿರುತ್ತದೆ. ಈ ಧಾತುವಿನ ಅಶೀರ್ಲಿಙ್‌ನಲ್ಲಿ ಪ್ರಥಮಪುರುಷ ಏಕವಚನದಲ್ಲಿ ಪ್ರಣುದ್ಯಾತ್ ಎಂದು ರೂಪ ।।೪।।

ಬಾಲಕನಾದ ವಾಸುದೇವನ ಪ್ರತಿಭಾದಿ ಅದ್ಭುತ ಮಹಿಮೆಯನ್ನು ವರ್ಣಿಸುತ್ತಾರೆ.

**ಏಕಾಕೀ ಯೋಜನಾಭ್ಯಾಂ ವ್ಯವಹಿತ ಮಗಮದ್ಯಸ್ತ್ರಿವರ್ಷೋऽಮರೌಕೋ**
**ಯೋಲಾಲ್ಯೋ ಲೋಕಮಾತ್ರಾ ಸ್ವಲಿಪಿ ಪರಿಚಯೇ ತಾತವಿಸೇರತಾಕೃತ್ ।।**
**ಪ್ರಾಜ್ಞಮನ್ಯಂ ಶಿವಾಖ್ಯಂ ಪರಿಷದಿ ಜಿತವಾನ್ ಸಾಖಿನಾಮರ್ಥಮೂಚೇ**
**ದುರ್ಗಂ ಪಿತ್ರೋಪನಿತಃಸುರವರಮಹಿತೋಮಹ್ಯತಾಂ ಮೇ ವಚೋಭಿಃ ।।೫।।**

## ಗೂಢಭಾವಪ್ರಕಾಶಿಕಾ ವ್ಯಾಖ್ಯಾನ

**ಏಕಾಕೀತಿ**,। **ತ್ರಿವರ್ಷಃ** ವಯಸ್ಕಃ, ಯಃ ವಾಸುದೇವನಾಮಾ ಏಕಾಕೀ ಅಸಹಾಯಃ, ಸನ್ ಯೋಜನಾಭ್ಯಾಂ, **ಯೋಜನ ದ್ವಯೇನ**, ವ್ಯವಹಿತಂ, ಅಮರೌಕಃ, ಅಮರಸ್ಯ, ದೇವಸ್ಯ, ವಿಷ್ಣೋಃ, ಓಕಃ, ಆಲಯಂ, "**ಧಿಷ್ಣ್ಯಮೋಕೋನಿವಸನಂ ಇತ್ಯಮರಃ**" ಸ್ವವಾಸಭೂಮೇಃ ಪಾಜಕಕ್ಷೇತ್ರಾತ್ ಯೋಜನದ್ವಯ ವ್ಯವಹಿತ ದೇವಾಲಯಂ, ಗೃಹೇ **ಉತ್ಸವಾಸಕ್ತಾಭ್ಯಾಂ. ಮಾತಾಪಿತೃಭ್ಯಾಂ**, ಅವಿಜ್ಞಾತಃ, ಏಕಾಕಿತ್ವೇನ, ಗೃಹಾತ್ ನಿರ್ಗತ್ಯ, ಸ್ವಾಮಿಸೇವಾನಾಯ ಇತಿಭಾವಃ, ಆಗಮತ್ **ಗತವಾನ್**, **ಗಮ್ಲೃಗತೌ ಲುಙ್**, ಕಥಮೇಕಾಕಿನಃ, ಶಿಶೋಃಕಾಂತರೇ, ಸಂಚಾರಃ, ಇತ್ಯತ ಆಹ, ಯಃ, ಇತಿ. ಯಃ **ವಾಸುದೇವನಾಮಾ ಲೋಕಮಾತ್ರಾ**, ದುರ್ಗಯಾ, **ಪಾಜಕಕ್ಷೇತ್ರಗತ ವಿಮಾನಗಿರೌ**, ಪರಶುರಾಮೇಣ, **ಪ್ರತಿಷ್ಠಾಪಿತಯಾ ದುರ್ಗಯಾ, ಲಾಲ್ಯಃ**, ರಕ್ಷ್ಯಃ. **ಸ್ವಲಿಪಿ ಪರಿಚಯೇ**, ಸ್ವಸ್ಯಲಿಪೀನಾಂ, **ಮಾತೃಕಾಕ್ಷರಾಣಾಂ**, ಪರಿಚಯೇ, **ಅಭ್ಯಾಸವಿಷಯೇ**, **ತಾತವಿಸ್ಮೇರತಾಕೃತ್**, **ತಾತಸ್ಯಸ್ವಪಿತುಃ**, **ವಿಸ್ಮೇರತಾಂ**, **ಆಶ್ಚರ್ಯವತ್ತಾಂ**, **ಕರೋತಿ**, ಇತಿ ~~ತಥೋಕ್ತಃ, ವಿಪೂರ್ವಸ್ಯಸ್ಮಯತೇಃ 'ನಮಿಕಂಪಿ ಸ್ಮ್ಯಜಸಕಮಹಿಂಸದೀಪೋರಃ' (3-2-167) ಇತಿರಃ, ಸ್ವತಾತೇನ, ಸ್ವಸ್ಯಲಿಪೀಃ~~ ಪರಿಚಾಯಯಿತುಂ, **ಪೂರ್ವೇದ್ಯುರುಲ್ಲಿಖಿತಾ**, **ಏವಪುನಃ**, **ಪರೇದ್ಯುರುಲ್ಲಿಖಿತಾಃ**, **ವಿಕ್ಷ್ಯ**, **ಕಿಮರ್ಥಂ ಪರಿಚಿತಾ ಏವ** ಪುನರ್ಲಿಖಸಿ ಇತಿ ಸ್ವಬುದ್ಧಿಂ, ಕಿಂಚಿತ್ ಪ್ರಕಾಶ್ಯ, ವಿಸ್ಮಯಂ ಪ್ರಾಪಿತವಾನ್ ಇತಿಭಾವಃ।.

ಪ್ರಾಜ್ಞಮನ್ಯಂ, ಆತ್ಮಾನಂ ಪ್ರಾಜ್ಞಂ, ಮನ್ಯತೇ, ಇತಿಪ್ರಾಜ್ಞಮನ್ಯಃ ಅಹಮೇವ **ಪ್ರಾಜ್ಞಇತಿ ಮನ್ಯಮಾನಃ**, ತಂ ಆತ್ಮಮಾನೇಖಶ್ ಚ (3-2-83) (ಸ್ವಕರ್ಮಕೇಮನನೇ ವರ್ತಮಾನಾತ್ ಮಾನ್ಯತೇಃ **ಸುಪಿಖಶ್ ಸ್ಯಾತ್** ಚಾಣ್ಣಿನಿಃ ಪಂಡಿತಮಾತ್ಮಾನಂ ಮನ್ಯತೇ ಇತಿ ಪಂಡಿತಮ್ಮನ್ಯಃ ಪಂಡಿತಮಾನೀ) **ಖಿತ್ಯನವ್ಯಯಸ್ಯ** (6-3-66) (ಖಿದಂತೇಪರೇಪೂರ್ವಪದಸ್ಯಹ್ರಸ್ವಃ ಸ್ಯಾತ್ ತತೋ ಮುಮ್ ಶುನಿಂಧಯ) ಇತಿ **ಪೂರ್ವಸ್ಯ ಮುಮಾಗಮಃ** ಶಿವಾಖ್ಯಂ, ಶಿವಭಟ್ಟಂ, ಪರಿಷದಿ, ಸಭಾಯಾಂ, ಜಿತವಾನ್, ಜಿಗ್ಯೇ ಯದಾ **ಸ್ವಮಾತಾಸ್ವೇನಸಹ ಘೃತವಲ್ಲ್ಯಾಖ್ಯಂಗ್ರಾಮಂ**, ಜಗಾಮ, ತದಾತತ್ರಗ್ರಾಮೇ, ಅನೇಕ ಪಂಡಿತ ಮಂಡಲ ಮಧ್ಯೇ, ಪುರಾಣಂ, **ವಾಚಯನ್**, **ಶಿವಭಟ್ಟ** ಆಸೀತ್ ತದಾ ತಂ (ತ್ವಂ) ಅನ್ಯಥಾ, ಅರ್ಥಂ, ವರ್ಣಯಸಿ, ಇತ್ಯಾಕ್ಷಿಪ್ಯ, ವಾಸ್ತವಾರ್ಥ **ಮುಕ್ತ್ವಾಜಿತವಾನ್**, ಇತಿ ಭಾವಃ ದುರ್ಗಂ ದುಃಖೇನ ಜ್ಞಾನವ್ಯಂ ಕಠಿನ ಮಿತಿಯಾವತ್ ಸದುರೋರುಪ ಸಂಖ್ಯಾನಂ **ಇತಿಗಮೇರ್ಡಃ** (ಸುದುರೋರಧಿಕರಣೇ ವಾ. 2016 ಸೂ 2965) ಸುಖೇನ ಗಚ್ಛತ್ಯತ್ರಸುಗಃ ದುರ್ಗಃ) ಶಾಖಿನಾಂ **ವೃಕ್ಷ ವಿಶೇಷವಾಚಕ** ಶಬ್ದಾನಾಂ ದುರ್ಗಂ, ದುಃಖೇನ, ಜ್ಞಾತವ್ಯಂ, ಕಠಿನಮಿತಿಯಾವತ್, ಲಿಕುಚೇತ್ಯಸ್ಯ ಅರ್ಥಂ **ವಾಚ್ಯಾರ್ಥಂ**, ಊಚೆ ಬ್ರೂಞ್‌ವ್ಯಕ್ತಾಯಾಂವಾಚಿ, ಲಿಟ್‌ಬ್ರುವೋ ವಚಿಃ (2-4-53) ಇತಿ ವಚಿಃ ಆದೇಶಃ ತೇನ **ಆತ್ಮನೇ ಪದಂ** ಸಾಧೂಕ್ತಂ ಕದಾಚಿತ್, ಸ್ವಪಿತ್ರಾ, ಪುರಾಣಕಥನೇ, ವೃಕ್ಷವಿಶೇಷವಾಚಕಾನಾಂ, ಲಿಕುಚಾದಿ. ಪದಾನಾಂ ಅರ್ಥಂ, ಅರಿದುಷಾ, ತಾನ್, ಶಬ್ದಾನ್, ತ್ಯಕ್ತ್ವಾ, ಉಪರಿತನ ಪದಾನಾಮರ್ಥೇ ವರ್ಣ್ಯಮಾನೇ ಸತಿ, ತದಾಸ್ವಯಂ **ತೇಷಾಂ** ಪದಾನಾಂ ಅರ್ಥಮೂಚೇ ಇತಿಭಾವಃ।

ಪಿತ್ರಾ, ಸ್ವತಾತೇನ, ಉಪನಿತಃ, ಕೃತೋಪನಯನಃ, ಸುರವರಮಹಿತಃ, ಸುರವರ್ಯೈಃ ದೇವೋತ್ತಮ್ಯೈಃ, ಮಹಿತಃ', ಪೂಜಿತಃ ಉಪನಯನೋತ್ಸವೇ ದೇವಾಃ ಸಸ್ತ್ರೀಕಾಃ ಸಂತಃ ನಭಃಸ್ಥಲಂ ಆಗತ್ಯ ಅಲಂಕೃತಂ ವಟುಂ ತಂ ದೃಷ್ಟ್ವಾ, ಪೂಜಿತವಂತಃ ಇತ್ಯರ್ಥಃ ಮೇ ವಚೋಭಿಃ ಸ್ತುತಿವಚನೈಃ ಮಹ್ಯತಾಂ ಪೂಜ್ಯತಾಂ ಮೇ ಸ್ತುತಿ ವಿಷಯೋ ಭವೇತ್ ಇತ್ಯರ್ಥ ಮಹಪೂಜಾಯಾಂ ಕರ್ಮಣಿ ಲೋಟ್ ॥5॥

**ಪದಚ್ಛೇದ** - ಏಕಾಕೀ, ಯೋಜನಾಭ್ಯಾಂ, ವ್ಯವಹಿತಂ, ಅಗಮತ್, ಯಃ, ತ್ರಿವರ್ಷಃ, ಅಮುರೌಕಃ, ಯಃ ಲಾಲ್ಯಃ ಲೋಕಮಾತ್ರಾ, ಸ್ವಲಿಪಿ ಪರಿಚಯೇ, ತಾತವಿಸ್ಮೇರತಾಕೃತ್, ಪ್ರಾಜ್ಞಂ, ಮನ್ಯಂ, ಶಿವಾಖ್ಯಂ, ಪರಿಷದಿ, ಜಿತವಾನ್, ಶಾಖಿನಾಂ, ಅರ್ಥಂ, ಊಚೇ, ದುರ್ಗಂ, ಪಿತ್ರಾ, ಉಪನೀತಃ, ಸುರವರಮಹಿತಃ, ಮಹ್ಯತಾಂ, ಮೇ, ವಚೋಭಿಃ.

**ಅನ್ವಯ** - ತ್ರಿವರ್ಷಃ, ಯಃ, ಏಕಾಕೀ (ಸನ್) ಯೋಜನಾಭ್ಯಾಂವ್ಯವಹಿತಂ ಅಮುರೌಕಃ, ಅಗಮತ್ ಯಃ ಲೋಕಮಾತ್ರಾಲಾಲ್ಯಃ (ಯಃ) ಸ್ವಲಿಪಿಪರಿಚಯೇ ತಾತವಿಸ್ಮೇರತಾಕೃತ್, (ಯಃ) ಪ್ರಾಜ್ಞಂಮನ್ಯಂ ಶಿವಾಖ್ಯಂ ಪರಿಷದಿ ಜಿತವಾನ್, (ಯಃ) ದುರ್ಗಂ ಶಾಖಿನಾಂ ಅರ್ಥಂ ಊಚೇ, ಪಿತ್ರಾ ಉಪನೀತಃ (ಯಃ) ಸುರವರ ಮಹಿತಃ (ಸಃ) ಮೇ ವಚೋಭಿಃ ಮಹ್ಯತಾಂ.

**ಅನ್ವಯಾರ್ಥ** - ತ್ರಿವರ್ಷಃ=ಮೂರು ವರ್ಷವಯಸ್ಸುಳ್ಳ ಯಃ=ಯಾವ ವಾಸುದೇವನೆಂಬ ಹೆಸರುಳ್ಳ ಮುಖ್ಯಪ್ರಾಣನು, ಏಕಾಕೀ ಸನ್=ಒಬ್ಬಂಟಿಗನಾಗಿ ಅಸಹಾಯನಾಗಿ ಯೋಜನಾಭ್ಯಾಂ=ಎರಡು ಯೋಜನೆಗಳಿಂದ, ವ್ಯವಹಿತಂ=ದೂರವಿರುವ ಅಮರೌಕಃ=ಶ್ರೀ ಹರಿಯ ಸನ್ನಿಧಾನವುಳ್ಳ ದೇವಾಲಯವನ್ನು ಕುರಿತು ಆಗಮತ್=ಹೋದನೋ, ಯಃ=ಯಾವ ಪ್ರಾಣದೇವನು, ಲೋಕಮಾತ್ರಾ=ಪ್ರಪಂಚಕ್ಕೆ ತಾಯಿಯಾದ ದುರ್ಗಾದೇವಿಯಿಂದ, ಲಾಲ್ಯಃ=ಲಾಲಿಸಲು ರಕ್ಷಿಸಲ್ಪಡಲು ಅರ್ಹನೋ, ಸ್ವ= ತನ್ನ ಲಿಪಿ ಪರಿಚಯೇ=ಅಕ್ಷರಾಭ್ಯಾಸ ಸಮಯದಲ್ಲಿ ತಾತವಿಸ್ಮೇರತಾಕೃತ್, ತಾತ=ತಂದೆಗೆ, ವಿಸ್ಮೇರತಾ=ಆಶ್ಚರ್ಯವುಳ್ಳತನವನ್ನು, ಕೃತ್=ಉಂಟುಮಾಡುವನೋ ಯಃ=ಯಾವ ವಾಸುದೇವನಾಮಕನಾದ ಮುಖ್ಯಪ್ರಾಣನು ಪ್ರಾಜ್ಞಂಮನ್ಯಂ=ತನ್ನನ್ನು ಬುದ್ಧಿವಂತನೆಂದು ತಿಳಿದಿರುವ ಶಿವಾಖ್ಯಂ=ಶಿವಭಟ್ಟನೆಂಬ ಹೆಸರುಳ್ಳ ಪಂಡಿತನನ್ನು, ಪರಿಷದಿ=ಸಭೆಯಲ್ಲಿ ಜಿತವಾನ್= ಜಯಿಸಿದನೋ, ಯಃ=ಯಾವ ವಾಸುದೇವನಾಮನಾದ ಮುಖ್ಯಪ್ರಾಣನು, ದುರ್ಗಂ=ಕಠಿನವಾದ ತಿಳಿಯಲು ಅಶಕ್ಯವಾದ ಶಾಖಿನಾಂ=ವೃಕ್ಷಗಳ ಅರ್ಥಂ=ವಾಚ್ಯಾರ್ಥವನ್ನು ಹೆಸರನ್ನು ಊಚೇ=ಹೇಳಿದನೋ, ಪಿತ್ರಾ=ತನ್ನ ತಂದೆಯಿಂದ, ಉಪನೀತಃ= ಉಪನಯನ ಮಾಡಲ್ಪಟ್ಟ ಯಃ=ಯಾವ ವಾಸುದೇವ ನಾಮಕನಾದ ಪ್ರಾಣದೇವನು ಸುರವರಮಹಿತಃ =ಸುರವರ ದೇವಶ್ರೇಷ್ಠರಿಂದ ಮಹಿತಃ ಪೂಜಿತನಾದವನೋ ಸಃ=ಅಂತಹ ಪ್ರಾಣದೇವನು ಮೇ=ನನ್ನ ವಚೋಭಿಃ=ಮಾತುಗಳಿಂದ ಮಹ್ಯಂತಾ=ಪೂಜಿಸಲ್ಪಡಲಿ. ನನ್ನ ಸ್ತುತಿಗೆ ಗೋಚರವಾಗಲಿ.

**ತಾತ್ಪರ್ಯ** - ಮುಖ್ಯಪ್ರಾಣಾವತಾರನಾದ ಬಾಲಕ ವಾಸುದೇವನಿಗೆ ಮೂರು ವರ್ಷವಯಸ್ಸಾಯಿತು. ಆಗ ಅವನ ತಂದೆ ತಾಯಿಗಳು ಒಂದು ದಿನ ವಾಸುದೇವನನ್ನು ಕರೆದುಕೊಂಡು ತಮ್ಮ ಬಂಧುಗಳ ಮನೆಗೆ ಹೋದರು. ಅಲ್ಲಿ ತಂದೆ ತಾಯಿಗಳು ಉತ್ಸವದಲ್ಲಿ ಆಸಕ್ತರಾಗಿದ್ದಾಗ ಅವರನ್ನು ಬಿಟ್ಟು ಒಬ್ಬಂಟಿಗನಾಗಿ ಕೊಡುವೂರು ಕಾನ, ಬನ್ನಿಂಜೆ ಎಂಬ ಊರುಗಳಲ್ಲಿರುವ ದೇವಾಲಯಗಳಲ್ಲಿ ತನ್ನ ಸ್ವಾಮಿಯನ್ನು ಸೇವಿಸಿ ಅಲ್ಲಿಂದ ರಜತಪೀಠಪುರಕ್ಕೆ ಬಂದು ಅಲ್ಲಿ ಚಂದ್ರಮೌಳೀಶ್ವರನಲ್ಲಿ ತನ್ನ ಸ್ವಾಮಿಯನ್ನು ವಂದಿಸಿ ಅವನ ಸಹಿತವಾಗಿ ಅನಂತಾಸನದೇವರನ್ನು ವಂದಿಸಿದನು. ತಂದೆಯು ಮಗನನ್ನು ಹುಡುಕುತ್ತಾ ಬಂದು ಕೊನೆಗೆ ಅನಂತಾಸನ ಸನ್ನಿಧಿಯಲ್ಲಿ ಮಗನನ್ನು ಕಂಡು ಬಹಳ ಆನಂದಪಟ್ಟರು. ದೇವರ ದಯೆಯನ್ನು ಕೊಂಡಾಡಿದರು. ಮಗನನ್ನು ಕರೆದುಕೊಂಡು ಹೋದರು. ಈ ರೀತಿ ಮೂರು ವರ್ಷದ ಬಾಲಕನಾದ ವಾಸುದೇವನು ಒಬ್ಬನೇ ದೇವಾಲಯಗಳಿಗೆ ಹೋಗಿ ತನ್ನ ಸ್ವಾಮಿಯನ್ನು ವಂದಿಸುತ್ತಿದ್ದನು.

ವಾಸುದೇವನು ತನ್ನ ಮನೆಯ ಸಮೀಪದಲ್ಲಿರುವ ದುರ್ಗಾಬೆಟ್ಟದಲ್ಲಿ ಒಬ್ಬನೇ ರಾತ್ರಿಯಲ್ಲಿಯೂ ಇರುತ್ತಿದ್ದನು.

ಪರಶುರಾಮ ದೇವರಿಂದ ಪ್ರತಿಷ್ಠಿತಳಾದ ಮಹಾಲಕ್ಷ್ಮೀ ಸ್ವರೂಪಳಾದ ದುರ್ಗೆಯು ಬಾಲಕ ವಾಸುದೇವನನ್ನು ಕಾಪಾಡುತ್ತಿದ್ದಳು. ತಾಯಿಯ ಮಡಿಲಲ್ಲಿ ಮಗುವು ಆನಂದದಿಂದ ಇರುವಂತೆ ವಾಸುದೇವನು ದುರ್ಗಾಬೆಟ್ಟದಲ್ಲಿ ಇರುತ್ತಿದ್ದನು.

ಮಧ್ಯಗೇಹಭಟ್ಟರು ಬಾಲಕ ವಾಸುದೇವನಿಗೆ ಒಂದು ಶುಭ ಮುಹೂರ್ತದಲ್ಲಿ ಅಕ್ಷರಾಭ್ಯಾಸ ಮಾಡಿಸಿದರು. ಮೊದಲನೆಯ ದಿವಸ ಕೆಲವು ಅಕ್ಷರಗಳನ್ನು ಬರೆಸಿ ಮರುದಿವಸ ಅವೇ ಅಕ್ಷರಗಳನ್ನು ಬರೆಸಿದಾಗ ವಾಸುದೇವನು "ಅಪ್ಪಾ, ನಿನ್ನೆ ಬರೆಸಿದ ಅಕ್ಷರಗಳನ್ನೇ ಪುನಃ ಏಕೆ ಬರೆಸುತ್ತಿದ್ದಿ ಎಂದು ಕೇಳಿದನು. ಆಗ ಮಧ್ಯಗೇಹಭಟ್ಟರಿಗೆ ಈ ಶಿಶುವು ಅಸಾಧಾರಣ ಪ್ರತಿಭಾ ಸಮುದ್ರನು ಎಂದು ಆಶ್ಚರ್ಯವುಂಟಾಯಿತು. ಅವರು ತನ್ನ ಸ್ವಾಮಿಯಾದ ಅನಂತಾಸನನ ದಯೆಗೆ ವಂದನೆಗಳನ್ನೂ ಅರ್ಪಿಸಿ, ಮಗುವಿಗೆ ದೃಷ್ಟಿತಾಕದಿರಲೆಂದು ಏಕಾಂತದಲ್ಲಿಯೇ ಪಾಠ ಹೇಳಲಾರಂಭಿಸಿದರು.

ಒಂದಾನೊಂದು ದಿವಸ ಬಾಲಕ ವಾಸುದೇವನು ತಾಯಿಯೊಡನೆ ಘೃತವಲ್ಲೀ (ನೆಯ್ಯಂಪಳ್ಳಿ) ಎಂಬಲ್ಲಿಗೆ ಬಂಧುಗಳ ಮನೆಗೆ ಉತ್ಸವಕ್ಕಾಗಿ ಹೋಗಿದ್ದನು. ಅಲ್ಲಿ ಒಂದು ಸಭೆಯಲ್ಲಿ ಶಿವಭಟ್ಟನೆಂಬ ಪೌರಾಣಿಕನು ಪುರಾಣ ಹೇಳುತ್ತಿದ್ದನು. ಮಧ್ಯದಲ್ಲಿ ಆ ಶಿವಭಟ್ಟನು ಯಾವುದೋ ಒಂದು ವಿಷಯದಲ್ಲಿ ತಪ್ಪಾಗಿ ಅರ್ಥವನ್ನು ಹೇಳಿದಾಗ ವಾಸುದೇವನು ಅವನು ಹೇಳಿದ ಅರ್ಥವು ಸಮಂಜಸವಲ್ಲವೆಂದು ಆಕ್ಷೇಪಿಸಿದನು. ಅದಕ್ಕೆ ಜನರು ನೀನೇ ಪುರಾಣವನ್ನು ಹೇಳು ಎಂದಾಗ ಇನ್ನೂ ಐದು ವರ್ಷ ತುಂಬದ ಬಾಲಕ ವಾಸುದೇವನು ತಾನೇ ಪುರಾಣಿಕನ ಸ್ಥಾನದಲ್ಲಿ ಕೂತು ಸರಿಯಾಗಿ ಪುರಾಣ ವಚನ ಮಾಡಿ ಅರ್ಥವನ್ನು ಹೇಳಿದನು. ಹೀಗೆ ಸಭೆಯಲ್ಲಿ ಶಿವಭಟ್ಟನನ್ನು ಜಯಿಸಿ ಕೀರ್ತಿಯನ್ನು ಪಡೆದನು. ಮತ್ತೊಂದು ದಿನ ಮನೆಯಲ್ಲಿ ವಾಸುದೇವನ ತಂದೆಯಾದ ಮಧ್ಯಗೇಹಭಟ್ಟರೇ ಪುರಾಣ ಹೇಳುತ್ತಿದ್ದರು. ವಾಸುದೇವನು ಶ್ಲೋಕಗಳನ್ನು ಓದುತ್ತಿದ್ದನು. ಆಗ ಯಾವುದೋ ಒಂದು ಘಟ್ಟದಲ್ಲಿ ಅನೇಕ ವೃಕ್ಷಗಳ ಹೆಸರುಗಳು ಬಂದಾಗ ಮಧ್ಯಗೇಹಭಟ್ಟರು ಒಂದು ಶಬ್ದದ ಅರ್ಥವನ್ನು ಹೇಳದೆ ಮುಂದೆ ಹೇಳುತ್ತಾ ಹೋದರು. ಆಗ ಮೃದು ಮಧುರ ಕಂಠದಿಂದ ತಂದೆಯ ಬಳಿಯಲ್ಲಿಯೇ ಪುರಾಣ ವಾಚನ ಮಾಡುತ್ತಿದ್ದ ವಾಸುದೇವನು ಮೆಲ್ಲನೆ 'ಅಪ್ಪಾ ನೀನೇಕೆ ಒಂದು ಪದದ ಅರ್ಥ ಹೇಳದೆ ಮುಂದುವರಿಸಿದೆ?' ಎಂದನು. ತಂದೆಗೆ ಅದರ ಅರ್ಥ ಗೊತ್ತಾಗಲಿಲ್ಲ. ಆಗ ವಿಷಯ ತಿಳಿದು ಸಭ್ಯರು ನೀನೇ ಆ ಪದಕ್ಕೆ ಅರ್ಥ ಹೇಳು ಎಂದಾಗ ವಾಸುದೇವನು ತಂದೆಯು ಅರ್ಥ ಹೇಳದೆ ಬಿಟ್ಟ 'ಲಿಕುಚ' ಎಂಬ ಪದಕ್ಕೆ 'ಹೆಬ್ಬಲಸು' (ಹಲಸಿನಕಾಯಿ ಜಾತಿಯದು) ಎಂದು ಅರ್ಥವನ್ನು ಹೇಳಿ ಎಲ್ಲರಿಗೂ ಸಂತೋಷವನ್ನುಂಟು ಮಾಡಿದನು. ಮಧ್ಯಗೇಹಭಟ್ಟರಿಗೆ ತನ್ನ ಮಗನ ಅಸಾಧಾರಣ ಪ್ರತಿಭೆಯನ್ನು ಕಂಡು ಅತ್ಯಾಶ್ಚರ್ಯವಾಯಿತು. ಅನಂತರ ಯುಕ್ತವಾದ ವಯಸ್ಸಿನಲ್ಲಿ ವಾಸುದೇವನಿಗೆ ಉಪನಯನವಾಯಿತು. ಉಪನಯನೋತ್ಸವದಲ್ಲಿ ದೇವೋತ್ತಮರೂ ಆಕಾಶದಲ್ಲಿ ಬಂದು ಸೇರಿ ವಾಸುದೇವನನ್ನು ಗೌರವಿಸಿದರು. ಇಂತಹ ಜೀವೋತ್ತಮ ಮುಖ್ಯಪ್ರಾಣನ ಅವತಾರನಾದ ವಾಸುದೇವನು ನನ್ನ ಸ್ತುತಿವಚನಗಳಿಂದ ಪೂಜಿಸಲ್ಪಟ್ಟವನಾಗಲಿ, ನನ್ನ ಸ್ತುತಿಯು ಆ ಜೀವೋತ್ತಮನ ಸ್ವರೂಪವನ್ನು ಪ್ರತಿಪಾದಿಸಲಿ ಎಂದು ತಾತ್ಪರ್ಯ.

ವಿಗ್ರಹ - ಏಕಾಕೀ ಅಸಹಾಯಃ ಏಕಃ ಏಕಾಕೀ "ಏಕಾದಾಕಿನಿಚ್ಚಾಸಹಾಯೇ" ಎಂಬ ಸೂತ್ರದಿಂದ ಆಕಿನಿಚ್ ಪ್ರತ್ಯಯ. ತ್ರೀಣಿವರ್ಷಾಣಿ ಯಸ್ಯ ಸಃ ತ್ರಿವರ್ಷಃ ಅಮರಾಣಾಂ ಓಕಃ ಅಮುಕರೌಕಃ ತತ್ (ಓಕಸ್ ಸಕಾರಂತ ನ. ಪು) ಲೋಕಾನಾಂ ಮಾತಾ ಲೋಕಮಾತಾ ತಯಾ. ಲಿಪಿನಾಂ ಪರಿಚಯಃ ಲಿಪಿ ಪರಿಚಯಃ ಸ್ವಸ್ಯ ಲಿಪಿ ಪರಿಚಯಃ ಸ್ವಲಿಪಿಪರಿಚಯಃ, ತಸ್ಮಿನ್, ವಿಸ್ಮೇರಸ್ಯಭಾವ ವಿಸ್ಮೇರತಾ, ತಾತಸ್ಯ ವಿಸ್ಮೇರತಾ ತಾತಸ್ಯ ವಿಸ್ಮೇರತಾ ತಾತವಿಸ್ಮೇರತಾ. ತಾಂ ಕರೋತೀತಿ ತಾತವಿಸ್ಮೇರತಾಕೃತ್, ಆತ್ಮಾನಂ ಪ್ರಾಜ್ಞಂಮನ್ಯತೇ ಇತಿ ಪ್ರಾಜ್ಞಂಮನ್ಯಃ" ತಂ ಶಿವ ಇತಿ ಆಖ್ಯಾಯಸ್ಯಸಃ ಶಿವಾಖ್ಯಃ ತಂ ಶಾಖಾಃ ಏಷಾಂ ಸಂತೀತಿ ಶಾಖಿನಃ ತೇಷಾಂ ದುಃಖೇನಗಂತುಂ ಶಕ್ಯಃ ದುರ್ಗಃ ತಂ ಸುರೇಷು ವರಾಃ ಸುರವರಾಃ ಸುರವರ್ಯೈ ಮಹಿತಃ ಸುರವರಮಹಿತಃ.

**ಧಾತುರೂಪ** - ಅಗಮತ್ ಅಗಮತಾಂ ಅಗಮನ್ ಅಗಮಃ ಅಗಮತಂ ಅಗಮತ ಅಗಮಂ ಅಗಮಾವ ಅಗಮಾಮ. ಗಮ್ ಲ್ಯ್ ಗತೌ ಇತಿ ಗತ್ಯರ್ಥಕಾತ್ ಗಮ್‌ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಭೂತೇ ಲುಙ್ ಪ್ರಥಮ ಪುರುಷ ಏಕವಚನೇ ಅಗಮತ್ ಇತಿರೂಪಂ. ಊಚೇ ಊಚಾತೇ ಊಚಿರೇ, ಉಚಿಷೇ ಊಚಾಥೇ ಊಚಿಧ್ವೇ ಊಚೇ ಊಚಿವಹೇ ಊಚಿಮಹೇ ಬ್ರೂಞ್ ವ್ಯಕ್ತಾಯಾಂ ವಾಚಿ ಇತಿ ವ್ಯಕ್ತವಾಗರ್ಥಕಾತ್ ಬ್ರೂ ಧಾತೋಃ ಭೂತಾನದ್ಯತನಪರೋಕ್ಷೇಲಿಟ್ ವಚ್ ಆದೇಶಃ

ಅಕರ್ಮಕ ಕರ್ತರಿ ಆತ್ಮನೇ ಪದ ಪ್ರಥಮ ಏಕವಚನ ಮಹ್ಯತಾಂ ಮಹ್ಯೇತಾಂ ಮಹ್ಯಂತಾಂ ಮಹ್ಯಸ್ವ ಮಹ್ಯೇಥಾಂ ಮಹ್ಯಧ್ವಂ ಮಹ್ಯೈ ಮಹ್ಯಾವಹೈ ಮಹ್ಯಾಮಹೈ.

ಮಹಪೂಜಾಯಾಂ ಪೂಜಾರ್ಥಕಾತ್ ಮಹಧಾತೋಃ ಕರ್ಮಣೀ ಆತ್ಮನೇಪದಿನಃ ಆಜ್ಞಾಯಾಂ ಲೋಟ್ ಪ್ರಥಮ ಪುರುಷ ಏಕವಚನೇ 'ಮಹ್ಯತಾಂ' ಇತಿರೂಪಂ.

ಪ್ರಯೋಗ – **ತ್ರಿವರ್ಷಃ ಯಃ ಅಮರೌಕಃ ಆಗಮತ್ (ಕರ್ತರಿ)**
**ತ್ರಿವರ್ಷೇಣರೇನ ಯೇನ ಅಮರೌಕಃ ಅಗಾಮಿ (ಕರ್ಮಣಿ)**
**ಯಃ ಪ್ರಾಜ್ಞಂ ಮನ್ಯಂ ಶಿವಾಖ್ಯಂ ಪರಿಷದಿ ಜಿತವಾನ್ (ಕರ್ತರಿ)**
**ಯೇನ ಪ್ರಾಜ್ಞಮನ್ಯಃ ಶಿವಾಖ್ಯಃ ಪರಿಷದಿ ಜಿತಃ (ಕರ್ಮಣಿ)**
**ಯಃ ಶಾಖಿನಾಂ ಅರ್ಥಂ ಊಚೇ (ಕರ್ತರಿ)**
**ಯೇನ ಶಾಖಿನಾಂ ಅರ್ಥಃ ಊಚೇ (ಕರ್ಮಣಿ)**
**ಸಃಮೇ ವಚೋಭಿಃ ಮಹ್ಯತಾಂ (ಕರ್ಮಣಿ)**
**ತಂ ಅಹಂ ಮೇ ವಚೋಭಿಃ ಮಹಯಾನಿ (ಕರ್ತರಿ) ಮಹಯತಿ ಮಹಯತೇ ಉಭಯಪದೀ)**

---

**ಕೋಶ** - ಏಕಾಕೀತ್ವೇಕಏಕಕಃ ಇತ್ಯಮರಃ ಯೋಜನಂ ಪರಮಾತ್ಮ ನಿ ಚತಷ್ಕ್ರೋಶ್ಯಾಂಚಯೋಗೇಚ ಇತಿ ಮೇದಿನೀ. ಧಿಷ್ಣ್ಯಮೋಕೋನಿವಸನಂ, ಲಿಖಿತಾಕ್ಷರವಿನ್ಯಾಸೇಲಿಪಿರ್ಲಿಬಿರುಭೇಸ್ತ್ರಿಯೌ, ತಾತಸ್ತುಜನಕಃ ಪಿತಾಸಮಜ್ಯಾ ಪರಿಷದ್ ಗೋಷ್ಠೀಸಭಾಸ ಮಿತಿ ಸಂಸದಃ, ವೃಕ್ಷೋಮಹೀರುಹಃಶಾಖೀ ವಿಟಪೀ ಪಾದಪಸ್ತರುಃ ಇತ್ಯಮರಃ

**ಗೂಢಭಾವ ಪ್ರಕಾಶಿಕಾ ವ್ಯಾಖ್ಯಾನ ಕನ್ನಡ ಅರ್ಥ** - ಏಕಾಕೀತಿ-ಏಕಾಕೀ ಎಂದು ಶ್ಲೋಕದ ವ್ಯಾಖ್ಯಾನ. ತ್ರಿವರ್ಷಃ ಅಂದರೆ ತ್ರಿವರ್ಷ ವಯಸ್ಕಃ ಮೂರು ವರ್ಷ ವಯಸ್ಸಾದ, ಯಃ=ಯಾವ ವಾಸುದೇವನಾಮಾ=ವಾಸುದೇವನೆಂಬ ಹೆಸರುಳ್ಳ (ಶ್ರೀ ಮುಖ್ಯಪ್ರಾಣನು) ಏಕಾಕೀ ಅಂದರೆ ಅಸಹಾಯಃ ಸನ್=ಸಹಾಯಕರಿಲ್ಲದವನಾಗಿ, ಒಬ್ಬಂಟಿಗನಾಗಿ, ಯೋಜನಾಭ್ಯಾಂ ಅಂದರೆ ಯೋಜನದ್ವಯೇನ ಎರಡು ಯೋಜನೆಗಳಿಂದ (ಒಂದು ಯೋಜನ ಎಂಟು ಮೈಲು) ಅಥವಾ ವ್ಯವಹಿತಂ=ವ್ಯವಧಾನವುಳ್ಳ, ದೂರವಿರುವ, ಅಮುರೌಕಃ=ಅಮರಸ್ಯ ದೇವಸ್ಯ ವಿಷ್ಣೋಃ ನಾರಾಯಣನ, ಓಕಃ ಅಂದರೆ ಆಲಯಂ=ಮನೆಯನ್ನು, ದೇವಾಲಯವನ್ನು, ಓಕಃ ಅಂದರೆ ಮನೆ ಆಲಯ ಎಂದು ಅರ್ಥ. ಇದಕ್ಕೆ ಕೋಶ - ಧಿಷ್ಣ್ಯಂ, ಓಕಃ ನಿವಸನಂ' ಎಂದು ಅಮರ. ಸ್ವವಾಸಭೂಮೇಃ ತನ್ನ ವಾಸ ಸ್ಥಳವಾದ, ಪಾಜಕಕ್ಷೇತ್ರಾತ್=ಪಾಜಕ ಕ್ಷೇತ್ರದಿಂದ ಯೋಜನದ್ವಯ ವ್ಯವಹಿತಂ=ಎರಡು ಯೋಜನ ದೂರದಲ್ಲಿರುವ ದೇವಾಲಯಂ=ದೇವಾಲಯಕ್ಕೆ, ಗೃಹೇ=ಮನೆಯಲ್ಲಿ, ಉತ್ಸವಾಸಕ್ತಾಭ್ಯಾಂ=ಉತ್ಸವದಲ್ಲಿ ಆಸಕ್ತರಾದ, ಮಾತಾಪಿತೃಭ್ಯಾಂ=ತಾಯಿತಂದೆಗಳಿಂದ ಅವಿಜ್ಞಾತಃ= ತಿಳಿಯಲ್ಪಡದೆ ಇದ್ದವನಾಗಿ, ಏಕಾಕಿತ್ವೇನ=ಒಬ್ಬಂಟಿಗತನದಿಂದ, ಗೃಹಾತ್ ನಿರ್ಗತ್ಯ=ಮನೆಯಿಂದ ಹೋರಟ ಸ್ವಾಮಿ ಸೇವಾನಾಯ=ತನ್ನ ಸ್ವಾಮಿಯ ಸೇವೆಗೋಸ್ಕರ, ಆಗಮತ್ ಅಂದರೆ ಗತವಾನ್=ಹೋದನು. ಇತಿಭಾವಃ ಎಂದು ಅಭಿಪ್ರಾಯ. ಅಗಮತ್ ಎಂಬಲ್ಲಿ ಗಮ್‌ಲೃಗತೌ ಎಂಬ ಧಾತುವಿನ ಲುಙ್‌ಲಕಾರವು.

ವರ್ಷ ವಯಸ್ಸಿನವನಾದಾಗ, ತನ್ನ ವಾಸಸ್ಥಳವಾದ ಪಾಜಕಕ್ಷೇತ್ರದಿಂದ **ಎರಡು**
ವಾಸುದೇವನು ಮೂರು ಹೋಗಿ, ಅಲ್ಲಿ ಬಂಧುಗಳ ಮನೆಯ ಉತ್ಸವದಲ್ಲಿ ಆಸಕ್ತರಾದ **ತಂದೆತಾಯಿಗಳಿಗೆ**
ಯೋಜನ ದೂರದ ಊರಿಗೆ ಯೋಜನ ದೂರ ನಡೆದುಹೋಗಿ ಅಲ್ಲಿ ತನ್ನ ಸ್ವಾಮಿಯನ್ನು ಸೇವಿಸಿದನು **ಎಂದು**
ತಿಳಿಯದಂತೆ ಅಲ್ಲಿಂದ ಎರಡು
ಭಾವ.

ಒಬ್ಬಂಟಿಗನಾದ ಶಿಶೋಃ ಮಗುವಿಗೆ, ಕಾಂತರೇ=ದುರ್ಗಮವಾದ ಕಾಡಿನ **ದಾರಿಯಲ್ಲಿ**
ಕಥಂ=ಹೇಗೆ, ಏಕಾಕಿನಃ= ಪ್ರಶ್ನೆಗೆ ಉತ್ತರವಾಗಿ, ಆಹ=ಹೇಳುತ್ತಾರೆ ಯಃ ಇತಿ=ಯಃ ಎಂದು ಆರಂಭಿಸುತ್ತಾರೆ.
ಸಂಚಾರಃ=ಸಂಚಾರವು ಇತ್ಯತಃ=ಈ ಯಾವ ವಾಸುದೇವನೆಂಬ ಹೆಸರುಳ್ಳ ಮುಖ್ಯಪ್ರಾಣನು, ಲೋಕಮಾತ್ರಾ= ಲೋಕಕ್ಕೆ
ಯಃ ಎಂದರೆ ವಾಸುದೇವನಾಮಾ= ದುರ್ಗಾದೇವಿಯಿಂದ ಪಾಜಕ ಕ್ಷೇತ್ರಗತ ವಿಮಾನಗಿರೌ ಪರಶುರಾಮೇಣ ಪ್ರತಿಷ್ಠಾಪಿತಯಾ
ತಾಯಿಯಾದ, ದುರ್ಗಯಾ=ದುರ್ಗಾ ಪಕ್ಕದಲ್ಲಿರುವ ವಿಮಾನಗಿರಿಯಲ್ಲಿ ಶ್ರೀ ಪರಶುರಾಮ ದೇವರಿಂದ ಪ್ರತಿಷ್ಠಿತಳಾದ
ದುರ್ಗಯಾ=ಪಾಜಕಕ್ಷೇತ್ರದ ಎಂದರೆ ರಕ್ಷ್ಯಃ=ರಕ್ಷಿಸಲು ಯೋಗ್ಯನಾಗಿದ್ದಾನೋ, ದುರ್ಗಮವಾದ ದಾರಿಗಳಲ್ಲಿಯೂ
ದುರ್ಗಾದೇವಿಯಿಂದ ಲಾಲ್ಯಃ ರಕ್ಷಣೆಯನ್ನು ಲೋಕಮಾತೆಯಾದ ವಿಶೇಷತಃ ವಾಸುದೇವನ ತಾಯಿಯಾದ ದುರ್ಗೆಯು
ಆ ಬಾಲ ಮುಖ್ಯಪ್ರಾಣನ ವಾಸುದೇವನು ಕೆಲವು ರಾತ್ರಿಗಳನ್ನು ಅಲ್ಲಿಯೇ ಕಳೆದಿದ್ದನು. ಒಬ್ಬಂಟಿಗನಾಗಿ ದೂರಕ್ಕೆ
ಮಾಡುತ್ತಿದ್ದಳು. ಆದ್ದರಿಂದಲೇ ಸ್ವಸ್ಯ=ತನ್ನ, ಲಿಪಿನಾಂ=ಅಕ್ಷರಗಳ ಪರಿಚಯೇ ಅಂದರೆ ಅಭ್ಯಾಸವಿಷಯೇ= ಅಭ್ಯಾಸದ
ಹೋಗುತ್ತಿದ್ದನು. ಸ್ವಲಿಪಿಪರಿಚಯೇ= ಕೃತ್, ಈ ಶಬ್ದ ಅರ್ಥವನ್ನು ಹೇಳುತ್ತಾರೆ. ತಾತಸ್ಯ=ಸ್ವಪಿತುಃ, ತಾತಸ್ಯ ಎಂದರೆ ತನ್ನ
ವಿಷಯದಲ್ಲಿ, ತಾತವಿಸ್ಮೇರತಾ ವಿಸ್ಮೇರತಾ = ಆಶ್ಚರ್ಯವತ್ತಾಂ ವಿಸ್ಮೇರತಾಂ ಎಂದರೆ ಆಶ್ಚರ್ಯವುಳ್ಳತನವನ್ನು,
ತಂದೆಯಾದ ಮಧ್ಯಗೇಹಭಟ್ಟರಿಗೆ, ಮಾಡುತ್ತಾನೆ ಎಂದು ತಥಾ=ತಾತ ವಿಸ್ಮೇರತಾಕೃತ್ ಎಂದು ಉಕ್ತಃ=ಹೇಳಲ್ಪಟ್ಟಿದ್ದಾನೆ.
ಕರೋತಿ ಇತಿ ತಥೋಕ್ತಃ ಪೂರ್ವಕವಾದ ಸ್ಮಯತೇಃ=ಸ್ಮಿದಾತುವಿಗೆ, ನಮಿಕಂಪಿಸ್ಮಿ ಅಜಸಕಮಹಿಂಸದೀಪೋರಃ ಇತಿರಃ
ವಿಪೂರ್ವಸ್ಯ=ವಿಉಪಸರ್ಗ ಸೂತ್ರದಿಂದ ರಪ್ರತ್ಯಯ, ಈ ಕಥೆಯ ಸಾರವನ್ನು ಹೇಳುತ್ತಾರೆ. ಸ್ವತಾತೇನ=ತನ್ನ
ನಮಿಕಂಪಿ ಇತ್ಯಾದಿ ಪಾಣಿನಿ ಅಕ್ಷರಗಳನ್ನು ಪರಿಚಾಯಯಿತುಂ=ಅಭ್ಯಾಸಮಾಡಿಸುವುದಕ್ಕೆ ಪೂರ್ವೇದ್ಯುಃ=ಹಿಂದಿನ
ತಂದೆಯಿಂದ, ಸ್ವಸ್ಯ ತನಗೆ ಲಿಪೀಃ= ಬರೆಯಲ್ಪಟ್ಟವುಗಳನ್ನೇ ಪುನಃ=ತಿರುಗಿಯೂ ಉಲ್ಲಿಖಿತಾಃ=ಬರೆಯಲ್ಪಟ್ಟದ್ದನ್ನು ವೀಕ್ಷ್ಯ=ನೋಡಿ
ದಿನ ಉಲ್ಲಿಖಿತಾಃ ಏವ= ಏವ= ಅಭ್ಯಾಸ ಮಾಡಿದ್ದನ್ನೇ ಮೊದಲು ತಿಳಿದಿದ್ದನ್ನೇ) ಪುನಃ ಮತ್ತೇ ಲಿಖಸಿ=ಬರೆಯುತ್ತೀ
ಕಿಮರ್ಥಂ=ಏತಕ್ಕೋಸ್ಕರ ಪರಿಚಿತಾಃ ಬುದ್ಧಿಯನ್ನು ಕಿಂಚಿತ್ ಪ್ರಕಾಶ್ಯ=ಸ್ವಲ್ಪ ಪ್ರಕಟಗೊಳಿಸಿ ವಿಸ್ಮಯಂ=ಆಶ್ಚರ್ಯವನ್ನು **ಪ್ರಾಪಿತವಾನ್**
ಇತಿ=ಎಂದು ಸ್ವಬುದ್ಧಿ=ತನ್ನ ಇತಿಭಾವಃ=ಎಂದು ಅಭಿಪ್ರಾಯವು.
ಉಂಟು ಮಾಡಿದನು.

ಆತ್ಮಾನಂ ಪ್ರಾಜ್ಞಂಮನ್ಯತೇ ಇತಿ ಪ್ರಾಜ್ಞಂಮನ್ಯಃ=ತನ್ನನ್ನು ಬುದ್ಧಿವಂತನೆಂದು **ತಿಳಿಯುತ್ತಾನೆ**
ಪ್ರಾಜ್ಞಂಮನ್ಯಂ= ಶಬ್ದದ ಅರ್ಥ ಅಹಮೇವಪ್ರಾಜ್ಞಇತಿ ಮನ್ಯಮಾನಃ, ತಂ=ತಾನೇ ಬುದ್ಧಿ**ವಂತನೆಂದು**
ಎಂದು ಪ್ರಾಜ್ಞಂಮನ್ಯಃ ಎಂಬ ಅಂತಹವನನ್ನು, ಪ್ರಾಜ್ಞಂಮನ್ಯಂ ಎಂಬಲ್ಲಿ, ಆತ್ಮಮಾನೇ **ಖಶ್ ಚ** (3.2.83
ತಿಳಿಯುವವನು. ಪ್ರಾಜ್ಞಂಮನ್ಯನು, ಮಾನಾತ್ ಮನ್ಯತೇಃ ಸುಪಿಖಶ್‌ಸ್ಯಾತ್) ಎಂಬ ಸೂತ್ರದಿಂದ **ಖಶಿ=ಖಶ್ ಪ್ರತ್ಯಯ**
ಸ್ವಕರ್ಮಕೇ ಮನನೇ ವರ್ತ 6-3-66 ಖಿದಂತೆ ಪರೇ ಪೂರ್ವಪ್ರದಸ್ಯಹ್ರಸ್ವಃಸ್ಯಾತ್ **ಎಂಬ ದೀರ್ಘವಿದ್ದಲ್ಲಿ ಹ್ರಸ್ವ** ಬಂದ
ಮಾಡಿದಾಗ ಖಿತ್ಯನ ವ್ಯವಸ್ಯ ಮುಮ್ 6-3-67 ಅರುಷೋ ದ್ವಿಷತಃ **ಅಜಂತಸ್ಯಚಮುಮಾಗಮಃ ಸ್ಯಾತ್ ಖಿದಂತೇ**
ಮೇಲೆ 'ಅರುರ್ದ್ವಿಷಜಂತಸ್ಯಮು ಇತಿ ಎಂದು ಪೂರ್ವಸ್ಯ ಹಿಂದಿನ **ಶಬ್ದಕ್ಕೆ ಮುಮಾಗಮಃ=ಮುಮ್** ಎಂಬ ಆಗ
ಉತ್ತರ ಪದೇ, ನತು ಅವ್ಯಯಸ್ಯ ಅಭಿಮಾನವುಳ್ಳ, **ಶಿವಾಖ್ಯಂ=ಶಿವಭಟ್ಟಂ=ಶಿವಭಟ್ಟನನ್ನು ಪರಿಷದಿ=ಸಭಾಯಂ=ಸಭೆಯಲ್ಲಿ**
ಮವು ಬರುತ್ತದೆ. ಹೀಗೆ ಪ್ರಾಜ್ಞನೆಂಬ
ಜಿತವಾನ್=ಜಿಗ್ಯೇ=ಜಯಿಸಿದನು.

ಶವನ್ನು **ಹೇಳುತ್ತಾರೆ**. ಯದಾ=ಯಾವಾಗ, ಸ್ವಮಾತಾ=ತನ್ನ (ವಾಸುದೇವನ) ತಾಯಿಯು,
ಈ ಕಥೆಯ ಸಾರಾಂ **ಘೃತಪಲ್ಲ್ಯಾಖ್ಯಂಗ್ರಾಮಂ, ಘೃತಪಲ್ಲೀ ಎಂಬ** ಗ್ರಾಮವನ್ನು ಕುರಿತು, ಜಗಾಮ=ಹೋದಳೋ,
ಸ್ವೇನ ಸಹ=ತನ್ನ ಜೊತೆಗೆ,

ತದಾ=ಆಗ ತತ್ರಗ್ರಾಮೇ=ಆ ಹಳ್ಳಿಯಲ್ಲಿ ಅನೇಕ ಪಂಡಿತ ಮಂಡಲಮಧ್ಯೇ=ಅನೇಕ ಮಂದಿ ಪಂಡಿತರ ಮಧ್ಯದಲ್ಲಿ, ಪುರಾಣಂ ವಾಚಯನ್=ಪುರಾಣ ಪ್ರವಚನ ಮಾಡುತ್ತಾ, ಶಿವಭಟ್ಟಃ=ಶಿವಭಟ್ಟನು ಆಸೀತ್=ಇದ್ದನು. ತದಾ=ಆಗ, ತಂ=ಅವನನ್ನು ಕುರಿತು (ತ್ವಂ=ನೀನು) ಅನ್ಯಥಾರ್ಥಂ=ತಪ್ಪಾದ ಅರ್ಥವನ್ನು ವರ್ಣಯಿಸಿ=ವರ್ಣಿಸುತ್ತೀ ಇತಿ ಆಕ್ಷಿಪ್ಯ=ಎಂದು ಆಕ್ಷೇಪಿಸಿ, ವಾಸ್ತವಾರ್ಥಂ ಸರಿಯಾದ ಅರ್ಥವನ್ನು ಉಕ್ತ್ವಾ=ಹೇಳಿ, ಜಿತವಾನ್ (ವಾಸುದೇವನು) ಜಯಿಸಿದನು. ಇತಿಭಾವಃ=ಎಂದು ಅಭಿಪ್ರಾಯವು.

ದುರ್ಗಂ=ದುಃಖೇನಜ್ಞಾತವ್ಯಂ=ಕಷ್ಟದಿಂದ ತಿಳಿಯಬೇಕಾದ, ಕಠಿನಂ ಇತಿಯಾವತ್=ಕಠಿನವಾದ ಎಂದು ತಾತ್ಪರ್ಯ, ಸುದುರೋರುಪಸಂಖ್ಯಾನಂ (ಸುದುರೋರಧಿಕರಣೇ ವಾ. 2016 ಇತಿಗಮೇರ್ಡಃ=ಅಂತಾತ್ಯಂತಾಧ್ವದೂರಪಾರಸರ್ವಾನಂತೇಷುಡಃ 3-2-48 ಈ ಸೂತ್ರದಲ್ಲಿರುವ ಸುದುರೋರಧಿಕರಣೇ ವಾ 2016 ಸು, ದುರ್ ಇವುಗಳು ಉಪಪದವಾಗಿದ್ದಾಗ ಅಧಿಕರಣಾರ್ಥದಲ್ಲಿ ಗಮ್‌ಧಾತುವಿಗೆ ಡ ಪ್ರತ್ಯಯ ಬರುತ್ತದೆ ಎಂಬ ವಾರ್ತಿಕದಿಂದ ದುಃಖೇನ ಗಚ್ಛತಿ ಅತ್ರ ಇಲ್ಲಿ ದುಃಖದಿಂದ ಮನುಷ್ಯನು ಹೋಗುತ್ತಾನೆ ಎಂಬ ವ್ಯುತ್ಪತ್ತಿಯಿಂದ ದುರ್ಗಶಬ್ದವು ಸಿದ್ಧವಾಗುತ್ತದೆ. ಇಲ್ಲಿ ಅದರ ಅರ್ಥ ಕಷ್ಟದಿಂದ ತಿಳಿಯಬೇಕಾದುದು ಎಂದು ಶಾಖಿನಾಂ=ವೃಕ್ಷ ವಿಶೇಷಕವಾಚಕ ಶಬ್ದಾನಾಂ=ವೃಕ್ಷ ವಿಶೇಷಗಳನ್ನು ಹೇಳುವ ಶಬ್ದಗಳ, ದುರ್ಗಂ=ದುಃಖೇನ ಜ್ಞಾತವ್ಯಂ=ದುಃಖದಿಂದ ತಿಳಿಯಬೇಕಾದ, ಕಠಿನಂ ಇತಿಯಾವತ್=ಕಠಿನವಾದ ಎಂದು ತಾತ್ಪರ್ಯ, . ಲಿಕುಚೇತ್ಯಸ್ಯ ಅರ್ಥಂ ವಾಚ್ಯಾರ್ಥಂ=ಲಿಕುಚ ಎಂಬುದರ, ಅರ್ಥಂ=ವಾಚ್ಯಾರ್ಥಂ=ವಾಚ್ಯಾರ್ಥವನ್ನು, ಊಚೇ=ಹೇಳಿದನು. ಬ್ರೂಞ್ ವ್ಯಕ್ತಾಯಾಂ ವಾಚಿ=ವ್ಯಕ್ತವಾದ ಮಾತು ಎಂಬ ಅರ್ಥದಲ್ಲಿರುವ ಬ್ರೂಞ್(ಬ್ರೂ) ಧಾತುವು ಲಿಟ್=ಲಿಟ್‌ಕಾರವು ಬ್ರುವೋಚಿಃ= (2-453) ಎಂಬ ಸೂತ್ರದಿಂದ, ವಚಿಃ ಆದೇಶಃ=ಬ್ರೂಧಾತುವಿಗೆ ವಚ್ ಎಂದು ಆದೇಶವು ತೇನ= ಬ್ರೂಧಾತುವಿಗೆ ವಚ್ ಆದೇಶವು ಬಂದುದರಿಂದ ಆತ್ಮನೇ ಪದಂ=ಆತ್ಮನೇ ಪದವು ಸಾಧು=ಸರಿಯಾಗಿಯೇ ಉಕ್ತಂ=ಹೇಳಲ್ಪಟ್ಟಿದೆ. (ಬ್ರೂಞ್‌ಧಾತುವು) ಉಭಯಪದಿಯಾದುದರಿಂದ ಅದರ ಸ್ಥಾನದಲ್ಲಿ ಬಂದ ವಚ್ ಎಂಬ ಆದೇಶವೂ ಆತ್ಮನೇಪದಿಯಾಗುತ್ತದೆ. ಆಗ ಊಚೇ ಎಂಬ ಆತ್ಮನೇಪದಿ ರೂಪವು ಸರಿಹೋಗುತ್ತದೆ. (ವಚಪರಿಭಾಷಣೇ 1063 ಎಂಬ ಧಾತುವನ್ನು ಇಟ್ಟುಕೊಂಡರೆ ಆ ಧಾತುವಿಗೆ ಪರಸ್ಮೈಪದ ಮಾತ್ರ ಇರುತ್ತದೆ. ಲಿಟ್‌ನಲ್ಲಿ ಊಚೇ ಎಂದು ರೂಪವಾಗುವುದಿಲ್ಲ, ಊವಾಚ ಎಂದೇ ರೂಪವಾಗುತ್ತದೆ. ಈಗ ಸಂದರ್ಭದ ತಾತ್ಪರ್ಯವನ್ನು ಹೇಳುತ್ತಾರೆ. ಕದಾಚಿತ್=ಒಂದಾನೊಂದು ದಿನ, ಸ್ವಪಿತ್ರಾ ತನ್ನ (ವಾಸುದೇವನ) ತಂದೆಯಾದ ಮಧ್ಯಗೇಹಭಟ್ಟರಿಂದ, ಪುರಾಣಕಥನೇ (ಸತಿ)= ಪುರಾಣವಾಚನ ವಾಗುತ್ತಿರುವಾಗ ವೃಕ್ಷವಿಶೇಷವಾಚಕಾನಾಂ=ವೃಕ್ಷವಿಶೇಷಗಳನ್ನು, ಬೋಧಿಸುವ, ಲಿಕುಚಾದಿಪದಾನಾಂ=ಲಿಕುಚ ಮುಂತಾದ ಪದಗಳ, ಅರ್ಥಂ=ಅರ್ಥವನ್ನು, ಅವಿದುಷಾ=ತಿಳಿಯದಿರುವ, ತಾನ್‌ಶಬ್ದಾನ್=ಆ ಶಬ್ದಗಳನ್ನು, ತ್ಯಕ್ತ್ವಾ=ಬಿಟ್ಟು ಉಪರಿತನಪದಾನಾಂ= ಮುಂದಿನಪದಗಳ, ಅರ್ಥೆ ವರ್ಣ್ಯಮಾನೇ (ಸತಿ)=ಅರ್ಥವು ವರ್ಣಿಸಲ್ಪಡುತ್ತಿರುವಾಗ, ತದಾ=ಆಗ, ಸ್ವಯಂ=ತಾನೇ, (ವಾಸುದೇವನೇ) ತೇಷಾಂ ಪದಾನಾಂ=ಆ ಪದಗಳ, ಅರ್ಥಂ=ಅರ್ಥವನ್ನು, ಊಚೇ =ಹೇಳಿದನು, ಇತಿ ಭಾವಃ=ಎಂದು ಅಭಿಪ್ರಾಯವು.

ಪಿತ್ರಾ=ಸ್ವತಾತೇನ=ಪಿತ್ರಾ ಎಂದರೆ ತನ್ನ ತಂದೆಯಿಂದ, ಉಪನಿತಃ=ಕೃತೋಪನಯನಃ ಉಪನೀತಃ ಎಂದರೆ ಮಾಡಲ್ಪಟ್ಟ ಉಪನಯನವುಳ್ಳವನಾಗಿ, ಸುರವರಮಹಿತಃ ಸುರವರ್ಯೈ=ದೇವೋತ್ತಮ್ಮೈಃ, ಸುರವರಮಹಿತಃ ಎಂಬ ಪದದ ಅರ್ಥವನ್ನು ಹೇಳುತ್ತಾರೆ. ಸುರವರ್ಯೈ=ಎಂದರೆ ದೇವೋತ್ತಮ್ಮೈಃ ದೇವಶ್ರೇಷ್ಠರಿಂದ ಮಹಿತಃ=ಪೂಜಿತಃ ಮಹಿತ ಎಂದರೆ ಪೂಜಿಸಲ್ಪಟ್ಟ.

ಈ ಸಂದರ್ಭದ ತಾತ್ಪರ್ಯವನ್ನು ಹೇಳುತ್ತಾರೆ. ಉಪನಯನೋತ್ಸವೇ=ವಾಸುದೇವನ ಉಪನಯನೋತ್ಸವವು ನಡೆಯುತ್ತಿರುವಾಗ, ದೇವಾಃ=ದೇವತೆಗಳು ಸಸ್ತ್ರೀಕಾಃ ಸಂತಃ=ತಮ್ಮ ಪತ್ನಿಯರಿಂದ ಕೂಡಿದವರಾಗಿ ನಭಸ್ಥಲಂ ಅಲಂಕೃತ್ಯ= ಆಕಾಶ ಪ್ರದೇಶವನ್ನು ಅಲಂಕರಿಸಿ, ವಟುಂ ಬ್ರಹ್ಮಚಾರಿಯನ್ನು, ಪೂಜಿತವಂತಃ=ಪೂಜಿಸಿದರು. ಇತ್ಯರ್ಥಃ=ಎಂದು ಅಭಿಪ್ರಾಯವು ಸಃ=ಅಂತಹ ವಾಸುದೇವನು, ಮೇ=ನನ್ನ, ವಚೋಭಿಃ=ಸ್ತುತಿವಚನ್ಯೈಃ=ವಚೋಭಿಃ ಎಂದರೆ ಸ್ತೋತ್ರದ

ಮಾತುಗಳಿಂದ, ಮಹ್ಯತಾಂ=ಪೂಜ್ಯತಾಂ=ಮಹ್ಯತಾಂ ಎಂದರೆ ಪೂಜಿಸಲ್ಪಡಲಿ, ಮೇಸ್ತುತಿವಿಷಯೋ ಭವೇತ್ ನನ್ನ ಸ್ತುತಿಗೆ ವಿಷಯನಾಗಲಿ, ಇತ್ಯರ್ಥಃ=ಎಂದು ಅಭಿಪ್ರಾಯವು (ಮಹ್ಯತಾಂ ಎಂಬಲ್ಲಿ) ಮಹಪೂಜಾಯಾಂ=ಪೂಜೆ ಎಂಬ. ಅರ್ಥವಾಚಕವಾದ ಮಹಧಾತುವಿಗೆ ಕರ್ಮಣಿ=ಕರ್ಮಣಿ ಪ್ರಯೋಗದಲ್ಲಿ ಲೋಟ್=ಲೋಟ್ ಲಕಾರವು ॥೫॥

**ಅವತರಣಿಕಾ** - ಆಚಾರ್ಯರು ಮಾಡಿದ ಮಣಿಮಂತನ ನಿಗ್ರಹ, ವಿದ್ಯಾಭ್ಯಾಸದ ಆಟಪಾಟಗಳು, ಆಚಾರ್ಯರ ಪ್ರಖರ ಬುದ್ಧಿಶಕ್ತಿ, ಗುರುಪುತ್ರನ ಶಿರೋವೇದನೆಯನ್ನು ಹೋಗಲಾಡಿಸಿದ್ದು, ತನ್ನ ಗುರುಗಳಿಗೆ ಉಪನಿಷತ್ತಿನ ಅರ್ಥವನ್ನು ತಿಳಿಸಿದುದು, ದೇವತೆಗಳು ಆಚಾರ್ಯರನ್ನು ಪ್ರಾರ್ಥನೆ ಮಾಡಿದುದು ಈ ವಿಷಯಗಳನ್ನು ಆರನೆಯ ಪದ್ಯದಿಂದ ತಿಳಿಸುತ್ತಾರೆ.

**ಪಾಯನ್ಮಾಂ ಯೋ ಭುಜಂಗಂ ಸದರಿಮದಮಯದ್ ದ್ರಾಗುಪಾಧ್ಯಾಯಸೇವೀ,**
**ವಿಶ್ವೇಭ್ಯೋಽವೇಗ ದೂರಪ್ಲವನ ಜವನಿಯುದ್ಧಾದಿ ವೀರ್ಯಾತಿ ಶಾಯೀ।**
**ಯೇನಾಸ್ತಾ ಮೂಢಶಂಕಾ ಶ್ರುತಿಶುಚವಚಸಾಽಲಂ ಗುರೋಃ ಶೀರ್ಷಶೂಲಾ**
**ಸಖ್ಯುರ್ನಾರಾಯಣಜ್ಯೋಽಥಯ ಉಪನಿಷದಂ ವ್ಯಾಖ್ಯತಾಸ್ಮೈ ಸುರಾರ್ಥ್ಯಃ ॥೬॥**

**ಗೂಢಭಾವಪ್ರಕಾಶಿಕಾ** - ಪಾಯಾದಿತಿ+ಯಃ ಸದರಿಂ, ಸತಾಂ ಅರಿಂ ಶತ್ರುಭೂತಂ ಅಸುರಸ್ವರೂಪಂ ಇತಿಯಾವತ್, ಭುಜಂಗಂ ಸರ್ಪರೂಪಂ, ದ್ರಾಕ್‌ಸಪದಿ, 'ದ್ರಾಙ್ ಮಂಕ್ಷುಸಪದಿ ದ್ರುತಂ' ಇತ್ಯಮರಃ, ಅದಮಯತ್ ದಮಯಾಮಾಸ. ದಮು ದಮನೇ (ದಮುಉಪಶಮೇ 1203 ಉಪಶಮೇ ಇತಿಣ್ಯಂತಸ್ಯ ತೇನ ಸಕರ್ಮ ಕೋಽ ಯಂ ನತುಶಮಿವತ್ ಅಕರ್ಮಕಃ) ಲಙ್ ಮಿತ್ವಾತ್ ಉಪಧಾಹ್ರಸ್ವಃ

ಪಾಜಕಕ್ಷೇತ್ರ ಸಮೀಪಗತ ವಿಮಾನಗಿರೌ ಸಂಚರನ್, ಸರ್ಪಮಯಃ ಅಸುರಃ ಕದಾಚಿತ್, ಗಿರಿಸಮೀಪೇ, ಸ್ವಗೃಹಾಂಗಣಪರಿಸರೇ ಸ್ಥಿತಂ ವಟುಂ ಆಲೋಕ್ಯ, ಗಿರೇಃ ಅವರುಹ್ಯ, ಅತಿತೀವ್ರವಿಷೋಲ್ಬಣಂ ಸ್ವಮಸ್ತಕಂ ಉದ್ಯಮ್ಯ ಉಪದದಂಶ, ತದಾ ಸಃ ಅಂಗುಷ್ಠೇನ ತಚ್ಛಿರಃ ಚೂರ್ಣಯಾಮಾಸ ಇತಿ ಭಾವಃ.

~~ಉಪಾಧ್ಯಾಯಸೇವೀ, ಉಪಾಧ್ಯಾಯಃ ಸ್ವಸ್ಯವೇದಾಧ್ಯಾಪಕಃ ತಂ ಸೇವತೇ ಇತಿ ಸಃ ತಥೋಕ್ತಃ, ವೇದಾಧ್ಯಯನಾರ್ಥಂ~~ ಗುರುಸೇವೀತ್ಯರ್ಥಃ

ವಿಶ್ವೇಭ್ಯಃ ಸರ್ವೇಭ್ಯಃ ವಯಸ್ಯೇಭ್ಯಃ, ಅವೇಗದೂರ ಪ್ಲವನ ಜವನಿಯುದ್ಧಾದಿ ವೀರ್ಯಾತಿಶಾಯೀ, **ಅವೇಗೇನ** ದೂರಧಾವನೇನ ವಿನೈವ, ದೂರಪ್ಲವನಂ ಜವಃ ವೇಗಃ, ನಿಯುದ್ಧಂ ದ್ವಂದ್ವಯುದ್ಧಂ ಏತಾನ್ಯೇನ **ಆದೀನಿಯೇಷಾಂ** ಜಲವಿಹಾರ ಗುರುತರ ಶಿಲೋದ್ಧರಣಾದೀನಾಂ, ತೇಷು ಯದ್ವೀರ್ಯಂ ಸಾಮರ್ಥ್ಯಂ, ತತ್, **ಅತಿಶಯಿತುಂ ಶೀಲಂ** ಅಸ್ಯ ಅಸ್ತೀತಿ ಸಃ ತಥೋಕ್ತಃ, ತಾಚ್ಛೀಲಿಕಃ ಣಿನಿಃ,

ಪ್ರತ್ಯಹಂ ಅಧ್ಯಯನಾವಸಾನೇ ಸಖಿಭಿಃ ಸಮಂಯಥೇಷ್ಟಂ ವಿಹೃತ್ಯ, ತಾನ್ **ಸರ್ವಾನ್ ಅತ್ಯೇತಿ ಇತಿ ಭಾವಃ** ಯೇನ ವಾಸುದೇವನಾಮ್ನಾ ವಟುನಾ ಗುರೋಃ ಅಧ್ಯಾಪಕಸ್ಯ ಮೂಢಶಂಕಾ **ಮೂಢಃ ಇತಿ ಸಂದೇಹಃ, ಶ್ರುತಿಶುಚಿವಚಸಾ,** ಶ್ರುತೇಃ, ಅಧೀತವೇದಸ್ಯ (ಅನಧೀತಸ್ಯವೇದಸ್ಯಚ) ಶುಚಿವಚಸಾಂ, **ಶೋಭನವಚಸಾ, ಅಲಂ ಸಮ್ಯಕ್ ಅಸ್ತಾ,** ನಿರಸ್ತಾ,

ಕ್ರುದ್ಧೇನ ಅಧ್ಯಾಪಕೇನ, ವ್ಯಾಖ್ಯಾತಂ (ಪಾಠಿತಂ) ನ **ಪಠಸಿ ಸದಾ ವಿಹರಸಿ ಇತ್ಯುಕ್ತೇ** ಸತಿ, ತದಾ ಅಧೀತಂ ಸರ್ವಂ (ಅನಧೀತಂ ಚ) **ತತ್‌ಪುರತಃ ಪ್ರೋಚ್ಯ, ಸ್ವಸ್ಯ ಅಜ್ಞಾನಿತ್ವಶಂಕಾಂ ಗುರೋಃ ವಿದ್ಯಮಾನಾಂ** ನಿರಾಸ ಇತಿ ಭಾವಃ। ಸಖ್ಯುಃ ಸ್ವವಯಸ್ಯಸ್ಯ **ಶೀರ್ಷಸೂಲಾ ಶಿರೋವೇದನಾಚ ಅಲಂಅಸ್ತಾ ಇತ್ಯನ್ವಯಃ।**

ಅಥಸಾಂಗವೇದಾಧ್ಯಯನಾನಂತರಂ, **ಸುರಾರ್ಥ್ಯಃಯಃ ಅಯಿ, ಸ್ವಾಮಿನ್,** ಗುರುಕುಲವಾಸವಿಡಂಬನಯಾ ಅಲಂ, ದುರ್ಜನ **ವಿಜಯಾರ್ಥಂ ಪ್ರವರ್ತಸ್ವ, ವಿಷ್ಣೋಃ ಗುಣಾನ್** ಪ್ರಕಾಶಯ, ಇತ್ಯಾದಿರೂಪೇಣ, ದೇವೈಃ,

ಯಾಚ್ಯಮಾನಃ, ನಾರಾಯಣಜ್ಞಃ, ಪರತತ್ತ್ವಜ್ಞಃ, ಅಸ್ಮೈ ಅಧ್ಯಾಪಕಾಯ, ಉಪನಿಷದಂ ಐತರೇಯೋಪನಿಷದಂ, ವ್ಯಾಖ್ಯತ, ವಾಚಖ್ಯೌ, ಚಕ್ಷಿಙ್ ವ್ಯಕ್ತಾಯಾಂವಾಚಿ. ಲುಙ್ ಚಕ್ಷಿಙಃ ಖ್ಯಾಞ್ (2-4-54) ಇತಿ ಖ್ಯಾದೇಶಃ ಅಸ್ಯತಿ ವಕ್ತಿ ಖ್ಯಾತಿಭ್ಯೋಽಙ್ (3-1-52) ಇತಿ ಅಙಾದೇಶಃ ಗುರುದಕ್ಷಿಣತಯಾ ಏಕಾಂತೇ ಐತರೇಯೋಪನಿಷದಃ ಪಾಠವ್ಯಾಜೇನ ಆತ್ಮಪರತಯಾ, ಗುರವೇ ತದರ್ಥಂ ಉಪದಿಷ್ಟವಾನ್ ಇತಿ ಭಾವಃ ಸಃ ವಾಸುದೇವನಾಮಾ ಮಾಂ ಪಾಯಾತ್ ರಕ್ಷತು ಪಾರಕ್ಷಣೇ, ಆಶಿಷಿಲಿಙ್ ॥೬॥

**ಪದಚ್ಛೇದ** - ಪಾಯಾತ್, ಮಾಂ, ಯಃ, ಭುಜಂಗಂ, ಸದರಿಂ, ಅದಮಯತ್, ಉಪಾಧ್ಯಾಯಸೇವೀ, ವಿಶ್ವೇಭ್ಯಃ, ಅವೇಗದೂರಪ್ಲವನಜವನಿಯುದ್ಧಾದಿವೀರ್ಯಾತಿಶಾಯೀ, ಯೇನ, ಅಸ್ತಾ, ಮೂಢಶಂಕಾ, ಶ್ರುತಿ ಶುಚಿವಚಸಾ, ಅಲಂ, ಗುರೋಃ, ಶೀರ್ಷಶೂಲ ಸಖ್ಯುಃ, ನಾರಾಯಣಜ್ಞಃ, ಅಥ, ಯಃ, ಉಪನಿಷದಂ, ವ್ಯಾಖ್ಯತ, ಅಸ್ಮೈ, ಸುರಾರ್ಥ್ಯಃ

**ಅನ್ವಯ** - ಯಃ ಸದರಿಂ ಭುಜಂಗಂ ದ್ರಾಕ್ ಅದಮಯತ್, ಉಪಾಧ್ಯಾಯಸೇವೀ ವಿಶ್ವೇಭ್ಯಃ, ಅವೇಗ ದೂರಪ್ಲವನಜವನಿಯುದ್ಧಾದಿ ವೀರ್ಯಾತಿಶಾಯೀ ಯೇನ ಗುರೋಃ ಮೂಢಶಂಕಾ ಶ್ರುತಿಸುಚಿವಚಸಾ ಅಲಂಅಸ್ತಾ ಶಖ್ಯುಃ ಶೀರ್ಷಶೂಲಾ (ಚ) (ಅಲಂ ಅಸ್ತಾ) ಅಥಃ ಸುರಾರ್ಥ್ಯಃ ನಾರಾಯಣಜ್ಞಃ, ಯ ಅಸ್ಮೈ ಉಪನಿಷದಂ ವ್ಯಾಖ್ಯತ, (ಸಃ) ಮಾಂಪಾಯಾತ್.

**ಅನ್ವಯಾರ್ಥ** - ಯಃ=ಯಾವ ಮುಖ್ಯ ಪ್ರಾಣಾವತಾರರಾದ ಶ್ರೀ ವಾಸುದೇವಾಚಾರ್ಯರು, ಸದರಿಂ=ಸಜ್ಜನರಿಗೆ ಶತ್ರುವಾದ (ಅಸುರಸ್ವರೂಪಿಯಾದ) ಭುಜಂಗಂ=ಸರ್ಪವನ್ನು, ದ್ರಾಕ್=ಕೂಡಲೇ, ಅದಮಯತ್=ನಿಗ್ರಹಿಸಿದರೋ, ಉಪಾಧ್ಯಾಯಸೇವೀ=ತನಗೆ ವೇದೋಪದೇಶ ಮಾಡಿದ ಗುರುಗಳನ್ನು ಸೇವಿಸುವ, ವಿಶ್ವೇಭ್ಯಃ=ತನ್ನ ಎಲ್ಲಾ ಸಹಾಧ್ಯಾಯಿಗಳಿಗಿಂತಲೂ, ಅವೇಗ ದೂರಪ್ಲವನ ಜವನಿಯುದ್ಧಾದಿ ವೀರ್ಯಾತಿಶಾಯೀ, ಅವೇಗ=ವೇಗವಿಲ್ಲದೆ (ಓಡದೆ) ದೂರ ಪ್ಲವನ=ದೂರಕ್ಕೆ ಹಾರುವುದು, ಜವ=ವೇಗವು, ನಿಯುದ್ಧ=ಮಲ್ಲಯುದ್ಧ, ಆದಿ=ಇವೇ ಮೊದಲಾಗಿ ಉಳ್ಳವುಗಳಲ್ಲಿ ವೀರ್ಯ=ಸಾಮರ್ಥ್ಯದಲ್ಲಿ, ಅತಿಶಾಯೀ=ಇತರರನ್ನು ಅತಿಕ್ರಮಿಸಿದವರೂ, ಯೇನ=ಯಾವ ಶ್ರೀವಾಸುದೇವಾ ಚಾರ್ಯರಿಂದ, ಗುರೋಃ=ಗುರುಗಳ ಮೂಢಶಂಕಾ=ಮೂಢನೆಂಬ ಸಂದೇಹವು ಶ್ರುತಿ ಶುಚಿವಚಸಾ, ಶ್ರುತಿವೇದದ=ಓದಿದ (ಮತ್ತು ಓದದೆ ಇದ್ದ) ಶುಚಿ=ಶುದ್ಧವಾದ, ವಚಸಾ=ಮಾತಿನಿಂದ, ಅಲಂ=ಚೆನ್ನಾಗಿ, ಅಸ್ತಾ=ನಿವಾರಿಸಲ್ಪಟ್ಟಿದೆಯೋ, ಸಖ್ಯುಃ=ಸ್ನೇಹಿತನ, ಶೀರ್ಷಶೂಲಾಚ=ಶಿರೋವೇದನೆಯೂ (ಅಲಂ=ಚೆನ್ನಾಗಿ ಅಸ್ತಾ=ನಿವಾರಿಸಲ್ಪಟ್ಟಿದೆಯೋ, ಅಥ= ಸಾಂಗವೇದಾಧ್ಯಯನಾನಂತರದಲ್ಲಿ, ಸುರಾರ್ಥ್ಯಃ=ದೇವತೆಗಳಿಂದ ಪ್ರಾರ್ಥಿಸಲು ಯೋಗ್ಯರಾಗಿಯೂ, ನಾರಾಯಣಜ್ಞಃ= ನಾರಾಯಣನನ್ನು ಬಲ್ಲವರಾಗಿಯೂ ಇರುವ ಯಃ=ಯಾವ ಶ್ರೀವಾಸುದೇವಾಚಾರ್ಯರು ಅಸ್ಮೈ=ತನಗೆ ವೇದೋಪದೇಶಕರಾದ ಗುರುವಿಗೆ ಉಪನಿಷದಂ=ಐತರೇಯೋಪನಿಷತ್ತನ್ನು, ವ್ಯಾಖ್ಯತ=ವ್ಯಾಖ್ಯಾನಿಸಿದರೋ ಬೋಧಿಸಿದರೋ ಸಃ=ಅಂತಹ ಶ್ರೀ ವಾಸುದೇವಾಚಾರ್ಯರು, ಮಾಂ=ನನ್ನನ್ನು ಪಾಯಾತ್=ರಕ್ಷಿಸಲಿ.

**ತಾತ್ಪರ್ಯ** - ಪಾಜಕ ಕ್ಷೇತ್ರದ ಸಮೀಪದ ವಿಮಾನಗಿರಿಯಲ್ಲಿ ಸರ್ಪರೂಪಿಯಾದ ಮಣಿಮಂತನೆಂಬ ಅಸುರನು ಸಂಚರಿಸುತ್ತಿದ್ದನು. ಒಂದಾನೊಂದು ದಿನ ಶ್ರೀ ವಾಸುದೇವಾಚಾರ್ಯರು ತನ್ನ ಮನೆಯ ಅಂಗಳದ ಹತ್ತಿರವಿದ್ದಾಗ ಸರ್ಪರೂಪಿಯಾದ ಆ ಅಸುರನು ಬ್ರಹ್ಮಚಾರಿ ವೇಷದಲ್ಲಿದ್ದ ಆಚಾರ್ಯರನ್ನು ನೋಡಿ ಬೆಟ್ಟದಿಂದ ಬೇಗನೆ ಇಳಿದು ಹೆಡೆಯೆತ್ತಿ ವಿಷಪೂರಿತವಾದ ತನ್ನ ಹಲ್ಲುಗಳಿಂದ ಆಚಾರ್ಯರನ್ನು ಬಲವಾಗಿ ಕಚ್ಚಿದನು. ಆಗ ಆಚಾರ್ಯರು ತನ್ನ ಕಾಲಿನ ಹೆಬ್ಬೆರಳಿನಿಂದ ಆತನ ಶಿರಸ್ಸನ್ನು ಅದುಮಿ ಹಿಡಿದು ಕಲ್ಲಿನ ಮೇಲೆ ಉಜ್ಜಿ, ಮರ್ದಿಸಿ ಆ ಸರ್ಪರೂಪಿಯಾದ ಅಸುರನನ್ನು ಕೊಂದರು. ತಾವು ಸ್ವತಃ ತ್ರಿಲೋಕ ಗುರುಗಳಾಗಿದ್ದರೂ ಲೋಕಶಿಕ್ಷೆಗಾಗಿ ತೋಟಂತಿಲ್ಲಾಯ (ಪೂಗವನಾನ್ವಯದ್ವಿಜ) ಗುರುಗಳಲ್ಲಿ ಗುರುಸೇವೆ ಮಾಡುತ್ತಾ ವಿದ್ಯಾಭ್ಯಾಸ ಮಾಡಿದರು. ಪಾಠವಾದ ಮೇಲೆ ತನ್ನ ಸಹಪಾಠಿಗಳೊಡನೆ ಆಟವಾಡುತ್ತಾ ಇದ್ದರು. ಆಗ ದೂರಕ್ಕೆ ಓಡದೆ ನಿಂತಲ್ಲಿಂದಲೇ ಬಹು ದೂರಕ್ಕೆ ನೆಗೆಯುವುದು, ಈಜುವುದು ದೂರಕ್ಕೆ ಓಡುವುದು, ಕುಸ್ತಿ ಮುಂತಾದುವುಗಳಲ್ಲಿ ತಮ್ಮ ಸಹಪಾಠಿಗಳನ್ನೆಲ್ಲಾ

ಮೀರಿಸಿದರು. ಎಲ್ಲಾ ಸಹಪಾಠಿಗಳೂ ಈ ಶ್ರೀ ವಾಸುದೇವಾಚಾರ್ಯರನ್ನು ಇವನು ಭೀಮಸೇನನೇ ಸರಿ ಎಂದು ನಿಶ್ಚಯಿಸಿದರು. ಇತರ ಶಿಷ್ಯರಂತೆ ವಾಸುದೇವನು ಪಾಠಗಳನ್ನು ಚೆನ್ನಾಗಿ ಅಭ್ಯಾಸ ಮಾಡುತ್ತಿಲ್ಲ, **ಆಟದಲ್ಲಿಯೇ** ಆಸಕ್ತನಾಗಿದ್ದಾನೆ, ಇವನು ಪಾಠವನ್ನು ಅಭ್ಯಾಸ ಮಾಡಲಾರದ ಮೂಢನೇ ಇರಬಹುದು ಎಂದು ಸಂದೇಹಿಸಿ ಗುರುಗಳು ಒಂದು ದಿನ ಶ್ರೀ ವಾಸುದೇವಾಚಾರ್ಯರನ್ನು ಕರೆದು ನೀನೇಕೆ ಸರಿಯಾಗಿ ಓದುತ್ತಿಲ್ಲ? ಯಾವಾಗಲೂ ಓದುವುದರಲ್ಲಿ ಉದಾಸೀನನಾಗಿದ್ದು ಆಟದಲ್ಲಿ ಆಸಕ್ತನಾಗಿರುತ್ತೀಯೆ? ಎಂದು ಕೋಪಿಸಿಕೊಂಡು ಗದರಿಸಿದರು. ಆಗ ಶ್ರೀ ವಾಸುದೇವಾಚಾರ್ಯರು ಪಾದಸಂತೆ, ಅರ್ಧಸಂತೆ, ಋಕ್‌ಸಂತೆ, ಹೀಗೆ ಕಂಠಪಾಠ ಮಾಡುವುದು ನನಗೆ ಇಷ್ಟವಾಗುವುದಿಲ್ಲ ಹಿಡಿಸುವುದಿಲ್ಲ, ಎಂದು ಹೇಳಿದಾಗ ಹಾಗಾದರೆ ನಿನಗೆ ಎಲ್ಲಾ ಬರುತ್ತದೆಯೇ? ಹೇಳು ನೋಡೋಣ ಎಂದಾಗ, ಗುರುಗಳ ಎದುರಿಗೆ ಅದುವರೆಗೆ ಆಗಿದ್ದ ಪಾಠವನ್ನು ಆಗದೆ ಇದ್ದ ಪಾಠವನ್ನೂ ಸ್ವಲ್ಪವೂ ತಪ್ಪದೆ ಬಾಯಿಪಾಠವಾಗಿ ಒಪ್ಪಿಸಿದರು. ಗುರುಗಳಿಗೆ ತನ್ನ ವಿಷಯದಲ್ಲಿದ್ದ ಸಂದೇಹವನ್ನು ಹೋಗಲಾಡಿಸಿದರು. ಶ್ರೀ ವಾಸುದೇವಾಚಾರ್ಯರ ವೇದಗುರುಗಳ ಮಗನಿಗೆ ಬಾಲ್ಯದಿಂದ ಒಂದು ವಿಚಿತ್ರವಾದ ತಲೆನೋವು ಬರುತ್ತಿತ್ತು. ಅದನ್ನು ಗುಣಪಡಿಸಲು ಯಾರಿಗೂ ಸಾಧ್ಯವಾಗಿರಲಿಲ್ಲ. ಒಂದು ದಿವಸ ಆಚಾರ್ಯರು ತಮ್ಮ ಬಾಯಿಯಿಂದ ಗುರುಪುತ್ರನ ಕಿವಿಯಲ್ಲಿ ಬಲವಾಗಿ ಗಾಳಿಯನ್ನೂದಿ ಆ ತಲೆನೋವನ್ನು ಸಂಪೂರ್ಣವಾಗಿ ಪರಿಹರಿಸಿದರು. ಹೀಗೆ ಆಚಾರ್ಯರು ವೇದ ವಿದ್ಯಾಭ್ಯಾಸ ಮಾಡುತ್ತಿದ್ದಾಗ ದೇವತೆಗಳು ಸ್ವಾಮೀ, ಸಜ್ಜನರ ಉದ್ಧಾರಕ್ಕಾಗಿ ಅವತರಿಸಿದ ನೀವು ಈ ವಿದ್ಯಾಭ್ಯಾಸದ ಲೋಕ ನಟನೆಯನ್ನು ಬಿಟ್ಟು ಸಜ್ಜನೋದ್ಧಾರಕ್ಕಾಗಿ ಮುಂದಿನ ಕಾರ್ಯವನ್ನು ಕೈಗೊಳ್ಳಬೇಕು, ದುಷ್ಟರನ್ನು ಖಂಡಿಸಬೇಕು ಎಂದು ಪ್ರಾರ್ಥಿಸಿದರು. ಆಚಾರ್ಯರು ವೇದ ವಿದ್ಯಾಭ್ಯಾಸವನ್ನು ಪೂರೈಸಿ ತಮ್ಮ ಗುರುಗಳಿಗೆ ಗುರುದಕ್ಷಿಣಾರೂಪವಾಗಿ ಐತರೇಯೋಪನಿಷತ್ತಿನ ಅರ್ಥವನ್ನೇ ವಿವರಿಸಿ ತಿಳಿಸಿದರು. ಹರಿಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವವರಲ್ಲಿ ಮುಖ್ಯರಾದ ಆಚಾರ್ಯರಿಂದ ಉಪನಿಷತ್ತಿನ ರಹಸ್ಯಾರ್ಥವನ್ನು ತಿಳಿದು ಆಚಾರ್ಯರ ವೇದ ವಿದ್ಯಾಗುರುಗಳೂ ಗೋವಿಂದ ಭಕ್ತಿಯೆಂಬ ಉತ್ತಮವಾದ ಗುರುದಕ್ಷಿಣೆಯನ್ನು ಪಡೆದರು. ಹೀಗೆ ಗುರುಕುಲ ವಾಸವನ್ನು ಮಾಡಿ ಗುರುದಕ್ಷಿಣೆಯನ್ನು ಕೊಟ್ಟು ಲೋಕನಟನೆಯನ್ನು ಮಾಡುತ್ತಿರುವ ಸರ್ವಜ್ಞರಾದ ಭಾರತೀರಮಣ ಮುಖ್ಯ ಪ್ರಾಣರೂಪರಾದ ಆಚಾರ್ಯರು ನನ್ನನ್ನು ಕಾಪಾಡಲಿ.

---

**ವಿಗ್ರಹ** – ಸತಾಂ ಅರಿಃ ಸದರಿಃ ತಂ, ಭುಜೈಃ ಗಚ್ಛತಿ ಇತಿ ಭುಜಂಗಃ ತಂ, ಉಪೇತ್ಯ ಅಸ್ಮಾತ್ ಅಧೀಯತೇ ಇತ್ಯುಪಾಧ್ಯಾಯಃ, ಉಪಾಧ್ಯಾಯಂ, ಸೇವತೇ ಇತಿ, ಉಪಾಧ್ಯಾಯಸೇವೀ, ವೇಗಸ್ಯಾಭಾವಃ, ಅವೇಗಃ, ದೂರಂ ಚ, ತತ್, ಪ್ಲವನಂ ಚ, ದೂರಪ್ಲವನಂ, ಅವೇಗೇನ, ದೂರ ಪ್ಲವನಂ, ಅವೇಗ ದೂರಪ್ಲವನಂ. ಅವೇಗ ದೂರ **ಪ್ಲವನಂ** ಚ, ಜವಶ್ಚನಿಯುದ್ಧಂ ಚ, ಅವೇಗದೂರಪ್ಲವನಜವನಿಯುದ್ಧಾನಿ, ತಾನಿ, ಅದೀನಿ, ಯೇಷಾಂತಾನಿ, **ಅವೇಗದೂರಪ್ಲವನ** ಜವನಿಯುದ್ಧಾದೀನಿ, ತೇಷುವೀರ್ಯಂ, ಅವೇಗದೂರಪ್ಲವನಜವನಿಯುದ್ಧಾದಿವೀರ್ಯಂ, ತತ್ **ಅತಿಶಯಿತುಂ, ಶೀಲಂ,** ಅಸ್ಯ, ಅಸ್ತೀತಿ, ಅವೇಗದೂರಪ್ಲವನಜವನಿಯುದ್ಧಾದಿ ವೀರ್ಯಾತಿಶಾಯೀ, ಮೂಢ ಇತಿ, **ಶಂಕಾ, ಮೂಢಶಂಕಾ,** ಶುಚಿಚ ತತ್, ವಚಶ್ಚ, ಶುಚಿವಚಃ, ಶ್ರುತೇಃ, ಶುಚಿವಚಃ, ಶ್ರುತಿಶುಚಿವಚಃ, ತೇನ **ಶ್ರುತಿಶುಚಿವಚಸಾ, ಶೀರ್ಷಸ್ಯ** ಶೂಲಾ, ಶೀರ್ಷಶೂಲಾ, ನಾರಾಯಣಂ ಜಾನಾತೀತಿ ನಾರಾಯಣಜ್ಞಃ, **ಅರ್ಹಯಿತುಂ, ಯೋಗ್ಯಃ, ಅರ್ಹ್ಯಃ,** ಸುರೈಃ, ಅರ್ಹ್ಯಃ, ಸುರಾರ್ಹ್ಯಃ

**ಕ್ರಿಯಾಪದ** – ಪಾಯಾತ್, ಪಾಯಾತಾಂ, **ಪಾಯುಃ,**
ಪಾಯಾಃ, ಪಾಯಾತಂ, **ಪಾಯಾತ,**
**ಪಾಯಾಂ,** ಪಾಯಾವ, **ಪಾಯಾಮ,**

ಪಾರಕ್ಷಣೇ ಇತಿ **ರಕ್ಷಣಾರ್ಥಕಾತ್ ಪಾಧಾತೋಃ, ಸಕರ್ಮಕಾತ್, ಕರ್ತರಿ,** ಪರಸ್ಮೈಪದಿನಃ, ವಿಧೌಲಿಙ್, ಪ್ರಥಮ ಪುರುಷ **ಏಕವಚನೇ, ಪಾಯಾತ್, ಇತಿರೂಪಂ.**

ಅದಮಯತ್, ಅದಮಯತಾಂ, ಅದಮಯನ್,
ಅದಮಯಃ, ಅದಮಯತಂ, ಅದಮಯತ,
ಅದಮಯಂ, ಅದಮಯಾವ, ಅದಮಯಾಮ

ದಮು ಉಪಶಮೇ ಇತಿ ಉಪಶಮಾರ್ಥಕಾತ್ 'ದಮ್' ಧಾತೋಃಣಿಜಂತಾತ್ ಸಕರ್ಮಕಾತ್ ಕರ್ತರಿ, ಅನದ್ಯತನ ಭೂತೇಜಙ್, ಪ್ರಥಮಪುರುಷೈಕವಚನೇ, ಅದಮಯತ್ ಇತಿರೂಪಂ.

ವಿ+ಆ+ಅಖ್ಯತ, ಅಖ್ಯೇತಾಂ, ಅಖ್ಯಂತ,
ಅಖ್ಯಥಾಃ, ಅಖ್ಯೇಥಾಂ, ಅಖ್ಯಧ್ವಂ,
ಅಖ್ಯೇ, ಅಖ್ಯಾವಹಿ, ಅಖ್ಯೇಮಹೀ,

ವಿ ಆ ಇತ್ಯುಪಸರ್ಗದ್ವಯಪೂರ್ವಕಾತ್ ಚಕ್ಷಿಙ್, ವ್ಯಕ್ತಾಯಾಂ ವಾಚಿ, ಇತ್ಯಸ್ಮಾದ್ ಧಾತೋಃ, ಭೂತೇಲುಙ್ ಆತ್ಮನೇ ಪದಿನಃ, ಪುರಥಮ ಪುರುಷ ಏಕವಚನೇ, ವ್ಯಾಖ್ಯತ, ಇತಿರೂಪಂ.

**ಪ್ರಯೋಗ** – ಸಃ ಮಾಂ ಪಾಯಾತ್ (ಕರ್ತರಿ)
ತೇನ ಅಹಂ ಪಾಯೇಯ (ಕರ್ಮಣಿ)
ಯಃ ಸದರಿಂ ಭುಜಂಗಂ ಅದಮಯತ್ (ಕರ್ತರಿ)
ಯೇನ ಸದರಿಃ ಭುಜಂಗಃ ಅದಮ್ಯತ (ಕರ್ಮಣಿ)
ಯಃ ಉಪನಿಷದಂ ವ್ಯಾಖ್ಯತ (ಕರ್ತರಿ)
ಯೇನ ಉಪನಿಷತ್ ವ್ಯಾಖ್ಯಾಯಿ (ಕರ್ಮಣಿ)

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** – ಪಾಯಾದಿತಿ - ಯಃ=ಯಾವ ಮುಖ್ಯಪ್ರಾಣಾವತಾರರಾದ ~~ವಾಸುದೇವಾಚಾರ್ಯರು, ಸತಾಂಅರಿಂ ಶತ್ರುಭೂತಂ ಅಸುರಸ್ವರೂಪಂ ಇತಿಯಾವತ್=ಸದರಿಂ ಎಂಬಲ್ಲಿ ಸತಾಂ ಅರಿಃ~~ ಎಂದು ವಿಗ್ರಹ, ಸಜ್ಜನರಿಗೆ ಶತ್ರುವಾಗಿರುವ, ಅಸುರ ಸ್ವರೂಪನಾದ, ಎಂದು ಅಭಿಪ್ರಾಯ. ಭುಜಂಗಂ ಸರ್ಪರೂಪಂ= ಭಜಂಗಂ ಎಂದರೆ ಸರ್ಪರೂಪನಾದವನನ್ನು ಎಂದು ಅಭಿಪ್ರಾಯ. ದ್ರಾಕ್=ಸಪದಿ, ಅಂದರೆ ಕೂಡಲೇ, ಅದಮಯತ್= ದಮಯಾಮಾಸ=ದಂಡಿಸಿದರು ಶಿಕ್ಷಿಸಿದರು, ಸಂಹರಿಸಿದರು ಎಂದು ತಾತ್ಪರ್ಯ. ಇಲ್ಲಿ ಅದಮಯತ್ ಎಂಬಲ್ಲಿ ದಮು ದಮನೇ ಎಂಬ ಧಾತುವು. ಆ ಧಾತುವು ಮಿತ್ ಆದುದರಿಂದ ಉಪಧೆಗೆ ಹ್ರಸ್ವ ಬರುತ್ತದೆ (ದಮ್ ಧಾತುವು ಅಮಂತವಾದುದರಿಂದ ಜನೀಜ್ಟೃಷ್ ಕ್ನಸುರಂಜೋಮಂತಾಶ್ಚ ಎಂಬ ವಾರ್ತಿಕದಿಂದ ಅದು ಮಿತ್ ಆಗುತ್ತದೆ. ಮಿತ್ ಆದ ಧಾತುವಿಗೆ ಮಿತಾಂಹ್ರಸ್ವಃ (6-4-92) ಎಂಬ ಸೂತ್ರದಿಂದ (ಮಿತ್ ಆದ ಧಾತುವಿಗೆ ಣಿಚ್‌ಪರವಾದಾಗ ಉಪಧೆಗೆ ಹ್ರಸ್ವ ಬರುತ್ತದೆ ಎಂದು ಸೂತ್ರಾರ್ಥ) ಉಪಧೆಗೆ ಹ್ರಸ್ವ ಬರುತ್ತದೆ.) ಈ ಧಾತುವಿಗೆ ಲಙ್‌ಲಕಾರವು.

ಪಾಜಕಕ್ಷೇತ್ರಗತ ವಿಮಾನಗಿರೌ=ಪಾಜಕಕ್ಷೇತ್ರದಲ್ಲಿರುವ ವಿಮಾನಗಿರಿಯಲ್ಲಿ, ಸಂಚರನ್=ಸಂಚರಿಸುತ್ತಿದ್ದ, ಸರ್ಪಮಯಃ ಅಸುರ=ಸರ್ಪರೂಪಿಯಾದ ದೈತ್ಯನು, ಕದಾಚಿತ್=ಒಂದಾನೊಂದು ದಿನ, ಗಿರಿಸಮೀಪೇ=ವಿಮಾನ ಗಿರಿಯ ಹತ್ತಿರ, ಸ್ವಗೃಹಾಂಗಣೇ=ತನ್ನ ಮನೆಯ ಅಂಗಳದಲ್ಲಿ ಸ್ಥಿತಂ=ನಿಂತಿದ್ದ, ವಟುಂ=ಬ್ರಹ್ಮಚಾರಿಯಾದ, ವಾಸುದೇವಾಚಾರ್ಯರನ್ನು, ಆಲೋಕ್ಯ=ನೋಡಿ, ಗಿರೇಃ=ಪರ್ವತದಿಂದ, ಅವರುಹ್ಯ=ಇಳಿದು, ಅತಿ ತೀವ್ರ ವಿಷೋಲ್ಬಣಂ=ಅತ್ಯಂತ ದುಸ್ಸಹವಾದ ವಿಷದಿಂದ ಭಯಂಕರವಾದ ಸ್ವಮಸ್ತಕಂ=ತನ್ನ ಶಿರಸ್ಸನ್ನು, ಉದ್ಯಮ್ಯ=ಎತ್ತಿ, ಉಪದದಂಶ=ಹತ್ತಿರದಲ್ಲಿಯೇ ಕಚ್ಚಿದನು, ತದಾ=ಆಗ, ಸಃ=ಆ ವಾಸುದೇವಾಚಾರ್ಯರು ಅಂಗುಷ್ಠೇನ=ಹೆಬ್ಬೆರಳಿನಿಂದ, ತಚ್ಛಿರಃ=ಆ ಸರ್ಪದ ಶಿರಸ್ಸನ್ನು ಚೂರ್ಣಯಾಮಾಸ ಇತಿ ಭಾವಃ=ಪುಡಿ ಮಾಡಿದರು ಎಂದು ಅಭಿಪ್ರಾಯ.

ಉಪಾಧ್ಯಾಯಸೇವೀ ಎಂಬಲ್ಲಿ ಉಪಾಧ್ಯಾಯಃ ಸ್ವಸ್ಯವೇದಾಧ್ಯಾಪಕಃ=ಉಪಾಧ್ಯಾಯ ಎಂದರೆ **ತನಗೆ ವೇದಾಭ್ಯಾಸ** ಮಾಡಿಸುವವರು, ತಂಸೇವತೇ ಇತಿ=ಅವರನ್ನು ಸೇವಿಸುತ್ತಾರೆ, ಎಂದು ಸಃತತಥೋಕ್ತಃ=ಆ ವಾಸು**ದೇವಾಚಾರ್ಯರು**, ಹಾಗೆ ಹೇಳಲ್ಪಟ್ಟಿದ್ದಾರೆ. ಅಂದರೆ ಉಪಾಧ್ಯಾಯಸೇವೀ ಎಂಬ ಪದದಿಂದ ಹೇಳಲ್ಪಟ್ಟಿದ್ದಾರೆ.

ವೇದಾಧ್ಯಯನಾರ್ಥಂ ಗುರುಸೇವೀ ಇತ್ಯರ್ಥಃ=ವೇದಾಧ್ಯಯನಕ್ಕೋಸ್ಕರ ಗುರುಗಳನ್ನು **ಸೇವಿಸುತ್ತಿದ್ದವರು** ಎಂದು ಅರ್ಥ. ವಿಶ್ವೇಭ್ಯಃ ಸರ್ವೇಭ್ಯಃ, ಸವಯಸ್ಯೇಭ್ಯಃ ವಿಶ್ವೇಭ್ಯಃ ಎಂದರೆ ಎಲ್ಲಾ ಸಮಾನ ವಯಸ್ಸಿನವರಿಗಿಂ**ತಲೂ**, ಅವೇಗದೂರಪ್ಲವನಜವನಿಯುದ್ಧಾದಿವೀರ್ಯಾತಿಶಾಯೀ ಅವೇಗೇನ=ದೂರಧಾವನೇನ ವಿನೈವ=ಅವೇಗ ಎಂದರೆ **ದೂರಕ್ಕೆ** ಓಡದೆಯೇ, ದೂರಪ್ಲವನಂ=ದೂರಕ್ಕೆ ಹಾರುವುದು, ಜವ=ವೇಗವು ನಿಯುದ್ಧಂ ದ್ವಂದ್ವಯುದ್ಧಂ ನಿಯುದ್ಧ **ಎಂದರೆ** ದ್ವಂದ್ವಯುದ್ಧ, ಕುಸ್ತಿಯಾಡುವುದು ಏತಾನಿ ಏವ ಆದೀನಿ=ಇವೇ ಮೊದಲು, ಯೇಷಾಂ=ಯಾವ, ಜಲವಿಹಾರ ಗುರುತರ ಶಿಲೋದ್ಧರಣಾದೀನಾಂ=ನೀರಲ್ಲಿ ಆಟವಾಡುವುದು ಭಾರವಾದ ಶಿಲೆಯನ್ನು ಎತ್ತುವುದು, ಮೊದಲಾದುವುಗಳಿಗೆ ಇದೆಯೋ, ಅವುಗಳು ಅದೂರಪ್ಲವನಜವನಿಯುದ್ಧಾದೀನಿ ತೇಷು=ಅವುಗಳಲ್ಲಿ, ಯದ್‌ವೀರ್ಯಂ ಸಾಮರ್ಥ್ಯಂ ಯಾವ ಸಾಮರ್ಥ್ಯವಿದೆಯೋ, ತತ್=ಆ ಸಾಮರ್ಥ್ಯವನ್ನು, ಅತಿಶಯಿತುಂ=ಮೀರುವುದಕ್ಕೆ, ಶೀಲಂ ಅಸ್ಯಅಸ್ತೀತಿ=ಸ್ವಭಾವವು ಇವನಿಗೆ ಇದೆಯೆಂದು, ಸಃ=ಆ ವಾಸುದೇವಾಚಾರ್ಯರು ತಥೋಕ್ತಃ=ಅವೇಗದೂರಪ್ಲವನ ಜವನಿಯುದ್ಧಾದಿ ವೀರ್ಯಾತಿಶಾಯೀ ಎಂಬ ಪದದಿಂದ ಹೇಳಲ್ಪಟ್ಟಿದ್ದಾರೆ. ತಾಚ್ಛೀಲಿಕೋಣಿನಿಃ=ಅವೇಗ ವೀರ್ಯಾತಿಶಾಯೀ ಎಂಬ ಪದದಲ್ಲಿ ಆಸ್ವಭಾವವುಳ್ಳವನು ಎಂಬ ಅರ್ಥದಲ್ಲಿ ಬರುವ ಣಿನಿಪ್ರತ್ಯಯಃ

ಪ್ರತ್ಯಹಂ=ಪ್ರತಿದಿವಸವೂ, ಅಧ್ಯಯನಾವಸಾನೇ=ವೇದ ಪಾಠಸಮಾಪ್ತವಾದಾಗ, ಸಖಿಭಿಃ ಸಮಂ=ಸ್ನೇಹಿತರೊಂದಿಗೆ ಯಥೇಷ್ಟಂ=ತನ್ನ ಇಚ್ಛೆಯಂತೆ, ವಿಹೃತ್ಯ=ಆಟವಾಡಿ, ತಾನ್ ಸರ್ವಾನ್=ಆ ಸ್ನೇಹಿತರೆಲ್ಲರನ್ನು, ಅತ್ಯೇತಿ ಇತಿ **ಭಾವಃ** (ವಾಸುದೇವಾಚಾರ್ಯರು) ಮೀರಿಸುತ್ತಿದ್ದರು ಎಂದು ಭಾವ, ಯೇನ ವಾಸುದೇವನಾಮ್ನಾ ವಟುನಾ=ಯಾವ ವಾಸು**ದೇವನೆಂಬ** ಹೆಸರುಳ್ಳ ಬ್ರಹ್ಮಚಾರಿಯಿಂದ, ಗುರೋಃ ಅಧ್ಯಾಪಕಸ್ಯ=ಗುರೋಃ ಎಂದರೆ ತನಗೆ ವೇದಾಧ್ಯಾಪಕರಾದ **ಗುರುಗಳ**, ಮೂಢಶಂಕಾ=ಇವನು ಮೂಢನು ಸರಿಯಾಗಿ ವೇದಾಧ್ಯಯನ ಮಾಡಲಾರದ ಮೂರ್ಖನು ಎಂಬ **ಸಂದೇಹವು**, ~~ಶ್ರುತಿಶುಚಿವಚಸಾ=ಎಂಬ ಪದದ ಅರ್ಥ ಹೇಳುತ್ತಾರೆ. ಶ್ರುತೇಃ ಅಧೀತವೇದಸ್ಯ=ಶ್ರುತೇಃ ಅಂದರೆ ಓದಿದ **ವೇದದ**~~, ಶುಚಿವಚಸಾಶೋಭನವಚಸಾ=ಶುಚಿವಚಸಾ=ಶುಚಿವಚಸಾ ಎಂದರೆ ಸರಿಯಾದ ಮಾತಿನಿಂದ ಅಲಂ **ಸಮ್ಯಕ್=ಅಲಂ** ಅಂದರೆ ಚೆನ್ನಾಗಿ, ಅಸ್ತಾನಿರಸ್ತಾ=ಅಸ್ತಾ ಅಂದರೆ ನಿರಾಸ ಮಾಡಲ್ಪಟ್ಟಿತು, ಹೋಗಲಾಡಿಸ್ಪಟ್ಟಿತು **ಎಂದು ಅರ್ಥ**.

ಕ್ರುದ್ಧೇನ ಅಧ್ಯಾಪಕೇನ=ಸಿಟ್ಟುಗೊಂಡ ಉಪಾಧ್ಯಾಯರಿಂದ, ಶಠ, ನ ಪಠಿಸಿ=ದುಷ್ಟನೇ, **ನೀನು ಸರಿಯಾಗಿ** ಓದುತ್ತಿಲ್ಲ, ಸದಾವಿಹರಸಿ=ಯಾವಾಗಲೂ ಆಟವಾಡುತ್ತೀ, ಇತ್ಯುಕ್ತೇಸತಿ=ಹೀಗೆ ಹೇಳಿದಾಗ, **ಸ್ವರವರ್ಣಾದಿಗಳಿಂದ** ಕೂಡಿದ, ತದಾ ಅಧೀತಂ ಸರ್ವಂಪ್ರೋಚ್ಯ=ಆಗ ಅಧ್ಯಯನ ಮಾಡಿದ ಎಲ್ಲವನ್ನು ಹೇಳಿ, **ಗುರೋಃ ವಿದ್ಯಮಾನಾಂ=ಗುರುಗಳಿಗೆ** (ಗುರುಗಳಲ್ಲಿರುವ) ಸ್ವಸ್ಯ ಅಜ್ಞಾನಿತ್ವಶಂಕಾಂ=ತಾನು ಅಜ್ಞಾನಿ ಎಂಬ ಸಂದೇಹವನ್ನು **ನಿರಾಸ=ಹೋಗಲಾಡಿಸಿದರು**. ಇತಿಭಾವಃ=ಎಂದು ಅಭಿಪ್ರಾಯವು.

ಸಖ್ಯುಃ ಸ್ವವಯಸ್ಯಸ್ಯ=ಸಖ್ಯುಃ ಎಂದರೆ ತನ್ನ ಸ್ನೇಹಿತನ, ಶೀರ್ಷ**ಶೂಲಾ ಶಿರೋವೇದನಾ ಚ=ಶೀರ್ಷಶೂಲಾ** ಅಂದರೆ ತಲೆನೋವೂ ಕೂಡ ಅಲಂ ಅಸ್ತಾ=ಚೆನ್ನಾಗಿ ಹೋಗಲಾಡಿಸ**ಲ್ಪಟ್ಟಿತು**. **ಇತಿ ಅನ್ವಯಃ=ಎಂದು ಅನ್ವಯವು**.

ಜನ್ಮ ಆರಭ್ಯ=ಹುಟ್ಟಿನಿಂದ ಆರಂಭಿಸಿ, ಅನುವರ್ತಮಾನಾಂ=**ಬೆನ್ನು ಬಿಡದಿರುವ, ಕೇನಾಪಿ** ನಿವರ್ತಯಿತುಂ ಅಶಕ್ಯಾಂ=ಯಾರಿಂದಲೂ ಹೋಗಲಾಡಿಸಲು ಸಾಧ್ಯವಿಲ್ಲದಿರುವ, **ಅತಿ ದುಸ್ಸಹಾಂ=ಸಹಿಸಲು** ಸಾಧ್ಯವಿಲ್ಲದಿರುವ, ಸ್ವಗುರುಪುತ್ರಶೀರ್ಷಶೂಲಾ=ತನ್ನ ಗುರುವಿನ ಮಗನ ತಲೆನೋ**ವನ್ನು ಸ್ವಮುಖವಾಯುನಾ**=ತನ್ನ ಬಾಯಿಯ ಗಾಳಿಯಿಂದ ತಚ್ಛ್ರೋತ್ರೇ=ಅವನ ಕಿವಿಯಲ್ಲಿ ಪೂತ್ಕೃತ್ಯ=ಊದಿ (**ಪೂತ್ಕಾರ ಮಾಡಿ) ವ್ಯುದಾಸ=ಹೋಗಲಾಡಿ**ಸಿದರು. ಇತಿಭಾವಃ=ಎಂದು ಅಭಿಪ್ರಾಯ.

ಅಥಸಾಂಗವೇದಾಧ್ಯಯನಾನಂತರಂ=ಸಾಗಂವೇದಾಧ್ಯಯನ ಮಾಡಿದ ಮೇಲೆ, ಯಃ=ಯಾವ ವಾಸುದೇವಾಚಾರ್ಯರು, ಸುರಾರ್ಥ್ಯಃ=ದೇವತೆಗಳಿಂದ ಪ್ರಾರ್ಥಿಸಲ್ಪಡತಕ್ಕವರಾಗಿ ಅಯಿಸ್ವಾಮಿನ್=ಎಲೈ ಸ್ವಾಮಿಯೇ, ಗುರುಕುಲ ವಾಸವಿಡಂಬೇನ ಅಲಂ=ಗುರುಕುಲವಾಸದ ವಿಡಂಬನೆಯು ಸಾಕು, ದುರ್ಜನ ವಿಜಯಾರ್ಥಂ ಪ್ರವರ್ತಸ್ವ=ದುರ್ಜನರ ವಿಜಯಕ್ಕಾಗಿ ಪ್ರವೃತ್ತರಾಗಿರಿ. ವಿಷ್ಣೋರ್ಗುಣಾನ್ ಪ್ರಕಾಶಯ=ಪರಮಾತ್ಮನ ಗುಣಗಳನ್ನು ಪ್ರಕಾಶಗೊಳಿಸಿರಿ? ಇತ್ಯಾದಿ ರೂಪೇಣ=ಇದೇ ಮೊದಲಾದ ರೂಪದಿಂದ, ದೇವೈಃ ಯಾಚ್ಯಮಾನಃ=ದೇವತೆಗಳಿಂದ ಪ್ರಾರ್ಥಿಸಲ್ಪಡತಕ್ಕವರಾಗಿ, ನಾರಾಯಣಜ್ಞಃ=ಪರತತ್ವಜ್ಞಃ= ನಾರಾಯಣನೆಂಬ ಪರತತ್ತ್ವವನ್ನು ತಿಳಿದಿರುವ ವಾಸುದೇವಾಚಾರ್ಯರು, ಅಸ್ಮೈ=ಅಧ್ಯಾಪಕಾಯ ಅಸ್ಮೈ ಅಂದರೆ ತನಗೆ ವೇದ ಪಾಠವನ್ನು ಹೇಳಿದ ಗುರುವಿಗೆ, ಉಪನಿಷದಂ=ಐತರೇಯೋಪನಿಷದಂ=ಐತರೇಯೋಪನಿಷತ್ತನ್ನು, ವ್ಯಾಖ್ಯತ=ವ್ಯಾಖ್ಯಾನಿಸಿದರು (ಪ್ರವಚನ ಮಾಡಿದರು) ಚಕ್ಷಿಙ್ ವ್ಯಕ್ತಾಯಾಂವಾಚಿ=ವ್ಯಾಖ್ಯತ ಎಂಬಲ್ಲಿ ಚಕ್ಷಿಙ್ 'ಚಕ್ಷ್' ಎಂಬ ಧಾತುವು. ಅದಕ್ಕೆ ವ್ಯಕ್ತವಾಗಿ ಮಾತಾಡುವುದು ಎಂದು ಅರ್ಥ, ಆ ಧಾತುವಿನ 'ಲುಙ್' ಲಕಾರ 'ಚಕ್ಷಿಙಃ ಖ್ಯಾಙ್' ಎಂಬ ಸೂತ್ರದಿಂದ ಆರ್ಧಧಾತುಕದಲ್ಲಿ 'ಖ್ಯಾ' ಆದೇಶ. 'ಅಸ್ಯತಿ ವಕ್ತಿಖ್ಯಾತಿಭ್ಯೋ ಅಙ್' ಎಂಬ ಸೂತ್ರದಿಂದ ಧಾತು ಮತ್ತು ಪ್ರತ್ಯಯದ ಮಧ್ಯದಲ್ಲಿ ಬಂದಿರುವ 'ಚ್ಲಿ' ಪ್ರತ್ಯಯಕ್ಕೆ ಅಙ್ ಆದೇಶ,

ಗುರುದಕ್ಷಿಣತಯಾ=ಗುರುದಕ್ಷಿಣಾರೂಪವಾಗಿ, ಏಕಾಂತೇ=ರಹಸ್ಯ ಪ್ರದೇಶದಲ್ಲಿ ಐತರೇಯೋಪನಿಷತ್ತಿನ, ಪಾಠವ್ಯಾಜೇನ=ಪಾಠದ ನೆಪದಿಂದ, ಗುರವೇ=ತನಗೆ ವೇದಾಧ್ಯಯನ ಮಾಡಿಸಿದ ಗುರುಗಳಿಗೆ, ತದರ್ಥಂ=ಆ ಐತರೇಯೋಪನಿಷತ್ತಿನ ಅರ್ಥವನ್ನು ಉಪದಿಷ್ಟವಾನ್=ಉಪದೇಶಿಸಿದರು. ಇತಿ ಭಾವಃ=ಎಂದು ಅಭಿಪ್ರಾಯವು. ಸಃ ವಾಸುದೇವಃ=ಅಂತಹ ವಾಸುದೇವಾಚಾರ್ಯರು, ಮಾಂಪಾಯಾತ್=ರಕ್ಷತು=ನನ್ನನ್ನು ಕಾಪಾಡಲಿ. ಪಾರಕ್ಷಣೇ ಆಶಿಷಿಲಿಙ್= ಪಾಯಾತ್ ಎಂಬಲ್ಲಿ ಪಾರಕ್ಷಣೇ ರಕ್ಷಣಾರ್ಥಕವಾದ ಪಾಧಾತುವು, ಆಶೀರರ್ಥದಲ್ಲಿ ಲಿಙ್ ಲಕಾರವು॥೬॥

# ಶ್ರೀಮದಣುಮಧ್ವವಿಜಯ

## ಏಳನೆಯ ಶ್ಲೋಕವು

**ಶ್ಲೋಕ- ಸನ್ನ್ಯಾಸೇ ಬದ್ಧಬುದ್ಧಿಃ ಕೃತಹರಿನಮನಃಪಾರ್ಥಪೂಜ್ಯಂಯತಿಂಪ್ರಾಕ್**
**ಪ್ರಾಜ್ಞಂ ಗುರ್ವಾಜ್ಞ ಯಾಲಂ ಸಗುಣಹರಿವಿದಂ ಸತ್ತ ಪಸ್ತ್ವ್ಯಪ್ತದೈವಾತ್।**
**ಪ್ರಾಪ್ತಂಸರ್ವಜ್ಞ ಶಿಷ್ಯಾಖ್ಯವರಮುಪಗತೋದ್ವಿಃಸ್ವತಾತಂ ನಿಷೇದ್ಧುಂ**
**ಪ್ರಾಪ್ತಂಚಾನುತ್ತರಂಯೋವ್ಯಥಿತ ಸಹಜವಾನ್ ಮಾತರಂ ಚಾವತಾನ್ಮಾಮ್ ॥೭॥**

## ಗೂಢಾಭಾವ ಪ್ರಕಾಶಿಕಾ

ಸನ್ನ್ಯಾಸ ಇತಿ। ಯಃ ವಾಸುದೇವನಾಮಾ, ವಟುಃ, ಸನ್ನ್ಯಾಸೇ, ತುರಿಯಾಶ್ರಮೇ, ಬುದ್ಧಬುದ್ಧಿಃ, ದೃಢನಿಶ್ಚಯಃ, ಕೃತಹರಿನಮನಃ, ಅನುಜ್ಞಾರ್ಥಂ, ಕೃತಂ ಹರೇಃ ನಮನಯೇನಸಃ, ಪ್ರಾಕ್ ಪೂರ್ವಂ ಜನ್ಮಾಂತರೇ, ಪ್ರಾರ್ಥಪೂಜ್ಯಂ ಪ್ರಾರ್ಥೈಃಪಾಂಡವೈಪೂಜ್ಯಂ । ಪೂರ್ವಜನ್ಮನಿ ಪಾಂಡವಾಲಯೇ ದ್ರೌಪದೀಕರಾರ್ಪಿತಭೋಜನೇನ ಶುದ್ಧಾಂತಃಕರಣಮಿತಿಭಾವಃ।

ಪ್ರಾಜ್ಞಂ ಸರ್ವಶಾಸ್ತ್ರಾಭಿಜ್ಞಂ, ಗುರ್ವಾಜ್ಞಯಾ ಸ್ವಗುರೋರನುಜ್ಞಯಾ ಅಲಂ ನಿಸ್ಸಂದೇಹಂ ಸಗುಣ ಹರಿವಿದಂ, ಸಗುಣಂ ಗುಣೋಪೇತ ಹರಿಂವೇತ್ತೀತಿ ಸಃ ತಥಾ। ಅಯಂಭಾವಃ ನಿರ್ಗುಣೋಪಾಸಕಸ್ಯಮಮ, ಗುರೋಶ್ಚನ ಕಿಂಚಿದ **ಪರೋಕ್ಷಮಾಸೀತ್**, ಅತಃ ತ್ವಂನಿರ್ಗುಣೋಪಾಸ್ತಿಂ ಅವಿಶ್ವಸ್ಯ, ಸಗುಣಂ, ಬ್ರಹ್ಮಉಪಾಸ್ವ ಇತಿ ಗುರ್ವಾಜ್ಞಯಾ **ಸಗುಣಮೇವ** ಬ್ರಹ್ಮ ಇತ್ಯುಪಾಸ್ಯಂ ಇತಿ।

ಸಚ್ಚತತ್ ತಪಶ್ಚ ತಥೋಕ್ತಂ ತೇನ, ತೃಪ್ತಂ ಚ ತತ್ ದೈವಂಚ ತಸ್ಮಾತ್ ಸತ್ತಪಸ್ತೃಪದೈವಾತ್, **ಪ್ರಾಚೀನ** ಸಮೀಚೀನ ತಪಸಾ ಸಂತುಷ್ಟಾತ್ ಪರಮಾತ್ಮನಃ ಸಕಾಶಾತ್, ಸರ್ವಜ್ಞಶಿಷ್ಯಾಖ್ಯವರಂ, ಸರ್ವಜ್ಞ **ಶ್ಯಾಸೌ ಶಿಷ್ಯಶ್ಚ** (ಸರ್ವಜ್ಞ ಶಿಷ್ಯಃ) ಸ ಇತ್ಯಾಖ್ಯಾ ಯಸ್ಯತಂ ವರಂ ಪ್ರಾಪ್ತಂ ಪ್ರಾಪ್ತವಂತಂ । ತತ್ವ ಬುಭುತ್ಸುಃ ಸನ್ ತಪಸಾರೂಪ ಪೀಠಸ್ಥಂ ವಿಭುಂ ಸಂತೋಷ್ಯ, ಕಶ್ಚನ ತವ ಶಿಷ್ಯೋಭವಿಷ್ಯತಿ, ತೇನ ತತ್ತ್ವಂವಿದ್ಧಿ ಇತಿ ಭಗವತಾ ವರಂಲಬ್ಧವಂತಂ ಇತಿಭಾವಃ। ಯತಿಂ ಅಚ್ಯುತಪ್ರೇಕ್ಷನಾಮಾನಂ ಉಪಗತಃ ಪ್ರಾಪ್ತಃ, ಸಹಜವಾನ್ ಅನುಜವಾನ್, ನಿಷೇದ್ಧುಂ ಪುತ್ರಸನ್ನ್ಯಾಸಂ ಪ್ರತಿರೊದ್ಧುಂ ದ್ವಿಃ ದ್ವಿವಾರಂ, ದ್ವಿಚತುರ್ಭ್ಯಃ ಸುಚ್ ಇತಿಸುಚ್, ಪ್ರಾಪ್ತಂ ಆಗತಂ ಸ್ವತಾತಂ ಮಧ್ಯಗೇಹಭಟ್ಟಂ ಅನುತ್ತರಂ ನಿರುತ್ತರಂ, ಮಾತರಂಚ, ಅನುತ್ತರಾಂ (ನಿರುತ್ತರಾಂ) ಇತಿ ಸಂಬಂಧ ವ್ಯಧಿತ ಅಕಾರ್ಷೀತ್, ಡುಧಾಞ್‌ಧಾರಣಪೋಷಣಯೋಃ ಲುಙ್।

ಅಯಂಭಾವಃ (ಮಧ್ಯಗೇಹಭಟ್ಟಃ) ಪೂರ್ವಂ ಆಗತ್ಯ ಪುತ್ರಂನತ್ವಾಂ ಸಯಾಚನಂ ನಿರುಂಧಾನಂ ತಾತಂ ದೃಷ್ಟ್ವಾ ಉತ್ತಮೇನ ಅಧಮಃ ನ, ನಮ್ಯಃ ನತಂ ಚ ಮಹ್ಯಂ ಭವತಾ, ಅತಃ ಜ್ಞಾಯತೇ, ವಿಧಾತ್ರಾಸ್ವಯಮೇವ ಮಮಸನ್ನ್ಯಾಸಾನುಜ್ಞಾದಾಪಿತಾ, ಇತಿವದನ್ ತಂ ನಿರುತ್ತರಂ ಕೃತ್ವಾ ಪ್ರೇಷಿತವಾನ್। ಪುನಃ ಪುತ್ರಂ ಸ್ಮೃತ್ವಾಕ್ಷುಭಿತಮನಾಃ ಸನ್ ಪುನರಾಗತ್ಯ ಪುತ್ರ ! ವೃದ್ಧೌ ಮಾತಾಪಿತರೌ, ಮೃತಾನೇಕ ಪುತ್ರಕೌ ಅನಾಥೌ ಆವಾಂ ಹಿತ್ವಾ, ತವ ಪರಿವ್ರಜನಂ ನಧರ್ಮಃ ಇತ್ಯಾದಿ ವದಂತಂ ಪಿತರಂ ಪ್ರತಿ ಯುವಯೋಃ ಮದನುಜಃ ಪಾಲಕೋ ಭವಿಷ್ಯತಿ, ಕಿಂಚ ಜ್ಞಾನಿನಃ ತವ ಶುಭಪ್ರತಿಘಾತಃ ನೋಚಿತಃ" ಇತ್ಯಾದಿ ವದನ್ ನಿರುತ್ತರಂ ಚಕಾರ ಇತಿ। ಏತಾದೃಶಃ ಸಹಜವಾನ್ ಭ್ರಾತೃಮಾನ್ ಅನಂತರೋತ್ಪನ್ನ ಭ್ರಾತರಂ ದೃಷ್ಟ್ವಾ ಮಾತಾಪಿತ್ರೋಃ ಅನುಜ್ಞಾಂ (ಲಬ್ಧವಾನ್) ಯಃ ಸಃ ಮಾಂ ಅವತಾತ್ । ಅವರಕ್ಷಣೇ ಆಶಿಷಿಲೋಟ್ ॥೭॥

**ಪದಚ್ಛೇದ** - ಸನ್ನ್ಯಾಸೇ, ಬುದ್ಧಬುದ್ಧಿಃ, ಕೃತಹರಿನಮನಃ, ಪ್ರಾರ್ಥಪೂಜ್ಯಂ, ಯತಿಂ, ಪ್ರಾಕ್, ಪ್ರಾಜ್ಞಂ, ಗುರ್ವಾಜ್ಞಯಾ, ಅಲಂ, ಸಗುಣಹರಿವಿದಂ, ಸತ್ತಪಸ್ತೃಪ್ತದೈವಾತ್, ಪ್ರಾಪ್ತಂ, ಸರ್ವಜ್ಞಶಿಷ್ಯಾಖ್ಯವರಂ, ಉಪಗತಃ, ದ್ವಿಃ, ಸ್ವತಾತಂ, ನಿಷೇದ್ಧುಂ, ಪ್ರಾಪ್ತಂ, ಚ, ಅನುತ್ತರಂ, ಯಃ, ವ್ಯಧಿತ, ಸಹಜವಾನ್, ಮಾತರಂ, ಚ, ಅವತಾತ್, ಮಾಂ,।

---

**ಅನ್ವಯ** - ಯಃ ಸನ್ನ್ಯಾಸೇ ಬುದ್ಧಬುದ್ಧಿಃ ಕೃತಹರಿನಮನಃ ಪ್ರಾಕ್ ಪಾರ್ಥಪೂಜ್ಯಂ ಪ್ರಾಜ್ಞಂ ಗುರ್ವಾಜ್ಞಯಾ ಅಲಂ ಸಗುಣಹರಿವಿದಂ ಸತ್ತಪಸ್ತೃಪ್ತ ದೈವಾತ್ ಸರ್ವಜ್ಞಶಿಷ್ಯಾಖ್ಯವರಂ ಪ್ರಾಪ್ತಂ ಯತೀಂ ಉಪಗತಃ ಸಹಜವಾನ್ ನಿಷೇದ್ಧುಂ ದ್ವಿಃ ಪ್ರಾಪ್ತಂ ಸ್ವತಾತಂ ಅನುತ್ತರಂ ಚ ಮಾತರಂ (ಅನುತ್ತರಾಂ ವ್ಯಧಿತ ಸಃ ಅವತಾತ್)

**ಅನ್ವಯಾರ್ಥ** - ಯಃ=ಯಾವ ಶ್ರೀವಾಸುದೇವಾಚಾರ್ಯರು ಸನ್ಯಾಸೇ=ಸನ್ನ್ಯಾಸಾಶ್ರಮವನ್ನು ಸ್ವೀಕರಿಸುವ ವಿಷಯದಲ್ಲಿ ಬದ್ಧಬುದ್ಧಿಃ=ದೃಢವಾದ ನಿಶ್ಚಯವುಳ್ಳವರಾಗಿ ಕೃತಹರನಮನಃ= (ಅನುಜ್ಞಾಸ್ವೀಕಾರಕ್ಕೊಸ್ಕರ) ಮಾಡಲ್ಪಟ್ಟ ಶ್ರೀ ಹರಿಯ ನಮಸ್ಕಾರವುಳ್ಳವರಾಗಿ ಪ್ರಾಕ್=ಹಿಂದಿನ ಜನ್ಮದಲ್ಲಿ ಪಾರ್ಥಪೂಜ್ಯಂ=ಪಾಂಡವರಿಂದ ಪೂಜಿತರಾದ ಪ್ರಾಜ್ಞಂ= ಸರ್ವಶಾಸ್ತ್ರಬಿಜ್ಞರಾದ ಗುರ್ವಾಜ್ಞಯಾ=ತನ್ನ ಗುರುಗಳ ಅಪ್ಪಣೆಯಿಂದ ಅಲಂ ಸಂದೇಹವಿಲ್ಲದಂತೆ ಸಗುಣ ಹರಿವಿದಂ=ಗುಣಪೂರ್ಣನಾದ ಹರಿಯನ್ನು ತಿಳಿದಿರುವ.

ಸತ್ತಪಃ=ಉತ್ತಮವಾದ ತಪಸ್ಸಿನಿಂದ, ತೃಪ್ತ=ಸಂತುಷ್ಟನಾದ, ದೈವಾತ್, ಅನಂತಾಸನನೆಂಬ ಹೆಸರುಳ್ಳ ಪರಮ್ಮಾತ್ಮನದೆಸೆಯಿಂದ, ಸರ್ವಜ್ಞ=ಎಲ್ಲವನ್ನೂ ಬಲ್ಲ ಶಿಷ್ಯಾಖ್ಯ=ಶಿಷ್ಯನೆಂಬ ಹೆಸರುಳ್ಳ, ವರಂ=ವರನನ್ನು, **ಪ್ರಾಪ್ತಂ** ಹೊಂದಿರುವ, ಯತಿಂ=ಅಚ್ಯುತ ಪ್ರೇಕ್ಷಾಚಾರ್ಯರೆಂಬ ಸನ್ಯಾಸಿಯನ್ನು, ಉಪಗತಃ=ಹೊಂದಿದ, **ಸಹಜವಾನ್=ತಮ್ಮನನ್ನು** ಹೊಂದಿದ, ನಿಷೇದ್ಧುಂ=(ತನ್ನಸನ್ಯಾಸವನ್ನು ತಡೆಯುವುದಕ್ಕಾಗಿ, ದ್ವಿಃ ಎರಡು ಬಾರಿ **ಪ್ರಾಪ್ತಂ=ಬಂದಿದ್ದ, ಸ್ವತಾತಂ=ತನ್ನ** ತಂದೆಯನ್ನು, ಅನುತ್ತರಂ = ಉತ್ತರವಿಲ್ಲದವಳನ್ನಾಗಿ, ಚ=ಮತ್ತು, **ಮಾತರಂ=ತಾಯಿಯನ್ನು, ಅನುತ್ತರಾಂ=ಉತ್ತರ** ಇಲ್ಲದವಳನ್ನಾಗಿ ವ್ಯಧಿತ=(ಯಾವನು) ಮಾಡಿದನೋ, ಸಃ ಅವನು ಅಂತಹ **ಶ್ರೀ ಮಧ್ವಾಚಾರ್ಯರು, ಮಾಂ=ನನ್ನನ್ನು ಅವತಾತ್=ಕಾಪಾಡಲಿ.**

**ತಾತ್ಪರ್ಯ** - ಈ ಶ್ಲೋಕದಲ್ಲಿ ಶ್ರೀಮತ್ ಸುಮಧ್ವವಿಜಯ ನಾಲ್ಕನೇ ಸರ್ಗದ ೨೮ನೆಯ ಶ್ಲೋಕದವರೆಗಿನ ಅರ್ಥವನ್ನು, ಸಂಗ್ರಹಿಸಿ ಹೇಳುತ್ತಿದ್ದಾರೆ.

ಆಶ್ರಮಗಳಲೆಲ್ಲಾ ಶ್ರೇಷ್ಠವಾದುದು ಸನ್ಯಾಸಾಶ್ರಮವು. ಶ್ರೀವಾಸುದೇವ ನಾಮಕರಾದ ಮುಖ್ಯಪ್ರಾಣದೇವರು ಬ್ರಹ್ಮಚರ್ಯಾಶ್ರಮದಿಂದಲೇ ಸನ್ಯಾಸಾಶ್ರಮವನ್ನು ಸ್ವೀಕರಿಸಲು ನಿಶ್ಚಯಿಸಿದರು. ಅದಕ್ಕಾಗಿ ಶ್ರೀ ವಾಸುದೇವಾಚಾರ್ಯರು ತಮ್ಮ ಮನೆಯಲ್ಲಿರುವ, ಮತ್ತು ಸುತ್ತಮುತ್ತಲಿರುವ ವಸ್ತುಗಳಿಗೆ ನಮಸ್ಕರಿಸಲು ಆರಂಭಿಸಿದರು. ಇದನ್ನು ನೋಡಿ ತಂದೆತಾಯೀ ಮತ್ತಿತರ ಬಂಧುಗಳು ಈ ನಮಸ್ಕಾರ ಏತಕ್ಕಾಗಿ ಎಂದು ಪ್ರಶ್ನಿಸಿದರು. ನನ್ನ ವಸ್ತು ನಾರಾಯಣನು ಈ ವಸ್ತುಗಳಲ್ಲಿ ವ್ಯಾಪ್ತನಾಗಿರುವ ಅವನನ್ನು ನನ್ನಲ್ಲಿ ಅನುಗ್ರಹಿಸುವುದಕ್ಕಾಗಿ ಈ ರೀತಿ ನಮಸ್ಕರಿಸುತ್ತಿದ್ದೇನೆ ಎಂದು ಉತ್ತರವನ್ನಿತ್ತರು. ಮುಂದೆ ತಾನು ವಿಧಿವತ್ತಾಗಿ ಆಶ್ರಮವನ್ನು ಸ್ವೀಕರಿಸಲು ಯೋಗ್ಯರಾದ ಒಬ್ಬ ಉತ್ತಮ ಗುರುಗಳನ್ನು ಹುಡುಕುತ್ತಾ ವಾಸುದೇವಾಚಾರ್ಯರು ಮನೆಯಿಂದ ಹೊರಟರು.

ಆಗ ಹಂಸನಾಮಕ ಪರಮಾತ್ಮ-ಸನಕ-ದೂರ್ವಾಸರು ಪರತೀರ್ಥರು ಸತ್ಯಪ್ರಜ್ಞ, ಪ್ರಾಜ್ಞತೀರ್ಥರು ಈ ಪರಂಪರೆಯಲ್ಲಿ ಬಂದಿರುವ ಅಚ್ಯುತ ಪ್ರೇಕ್ಷಾಚಾರ್ಯರೆಂಬ ಯತಿಶ್ರೇಷ್ಠರೊಬ್ಬರು ಉಡುಪಿಯಲ್ಲಿ ಅನಂತಾಸನ ದೇವರ ಸನ್ನಿಧಿಯಲ್ಲಿ ವಾಸಿಸುತ್ತಿದ್ದರು. ಇವರು ಕಾಲಬಲದಿಂದ ಮಾಯಾವಾದಿ ಸನ್ಯಾಸಿಗಳಂತೆ ಇದ್ದರು. ಆದರೆ ಇವರ ಗುರುಗಳು ದೇಹ ತ್ಯಜಿಸುವ ಕಾಲದಲ್ಲಿ ಅಚ್ಯುತ ಪ್ರೇಕ್ಷಕರನ್ನು ಕುರಿತು ಜೀವ ಬ್ರಹ್ಮೈಕ್ಯವು ನಮ್ಮ ಗುರುಗಳಿಗಾಗಲೀ ನಮಗಾಗಲೀ, ಅನುಭವ ಸಿದ್ಧವಾಗಿಲ್ಲ. ಅಲ್ಲದೆ ಶ್ರುತ್ಯಾದಿ ಪ್ರಮಾಣ ವಿರುದ್ಧವೂ ಆಗಿದೆ. ಆದುದರಿಂದ ಯಥಾರ್ಥ ಜ್ಞಾನಪ್ರಾಪ್ತಿಗಾಗಿ ನೀವು (ಅಚ್ಯುತ ಪ್ರೇಕ್ಷರು) ಸಕಲ ಗುಣ ಪರಿಪೂರ್ಣನೆಂದೂ ಸತ್ಯಜಗತ್ ಸೃಷ್ಟ್ಯಾದಿಕರ್ತನೆಂದೂ ಪರಮಾತ್ಮನನ್ನು ಭಜಿಸಿರಿ, ಹೀಗೆ ಮಾಡಿದರೆ ಮಾತ್ರವೇ ಪರಮಾತ್ಮನು ಪ್ರಸನ್ನನಾಗುವನು. ಐಕ್ಯೋಪಾಸನೆಯು ಸರ್ವಥಾ ಯೋಗ್ಯವಲ್ಲವೆಂದು ಉಪದೇಶಿಸಿದರು. ಈ ಅಚ್ಯುತ ಪ್ರೇಕ್ಷತೀರ್ಥರು ಹಿಂದಿನ ಜನ್ಮದಲ್ಲಿ ಪಾಂಡವರ ಮನೆಗಳಲ್ಲಿ ಭಿಕ್ಷೆಗಾಗಿ ಓಡಾಡುತ್ತಿದ್ದರು ಮಧುಕರ ವೃತ್ತಿಯಿಂದ ಜೀವಿಸುತ್ತಿದ್ದರು. ಆಗ ದ್ರೌಪದೀದೇವಿಯವರ ಹಸ್ತಸ್ಪರ್ಶದಿಂದ ಪವಿತ್ರರಾದ ಭಿಕ್ಷಾನ್ನವನ್ನು ಸ್ವೀಕರಿಸಿ ಪರಿಶುದ್ಧವಾದ ಅಂತಃಕರಣವುಳ್ಳವರಾಗಿದ್ದರು. ~~ಅಂತಹ ಜೀವಾತ್ಮನೇ ಅಚ್ಯುತಪ್ರೇಕ್ಷಾಚಾರ್ಯರೆಂಬ ಹೆಸರಿನಿಂದ ಕಲಿಯುಗದಲ್ಲಿ ಹುಟ್ಟಿ ಗುರುಗಳ ಆಜ್ಞೆಯಂತೆ~~ ರಜತಪೀಠದಲ್ಲಿ ಶ್ರೀ ಮದನಂತೇಶ್ವರ ಎಂಬ ಹೆಸರಿನಿಂದ ಕಲಿಯುಗದಲ್ಲಿ ಹುಟ್ಟಿ ಗುರುಗಳ ಆಜ್ಞೆಯಂತೆ ರಜತಪೀಠಪುರದಲ್ಲಿ ಶ್ರೀ ಮದನಂತೇಶ್ವರ ಎಂಬ ಹೆಸರಿನಿಂದ ರಾರಾಜಿಸುತ್ತಿದ್ದ ಶ್ರೀಮದನಾಂತಸನ ದೇವರನ್ನು ಪ್ರಯೋವ್ರತ ಮುಂತಾದ ಕಠಿನ ವ್ರತಗಳಿಂದ ಸಂತೋಷ ಪಡಿಸಿದರು. ನೀನು ಸರ್ವಜ್ಞನಾದ ಶಿಷ್ಯನನ್ನು ಪಡೆದು ನಿನ್ನ ಸಂಶಯ ನಿವೃತ್ತಿಯನ್ನು ಹೊಂದಿ ನಿನ್ನ ಅಪೇಕ್ಷಿತವಾದ ಪುರಸಾರ್ಥವನ್ನು ಇಷ್ಟಾರ್ಥವನ್ನು ಪಡೆಯುವಿ ಎಂಬ ವರವನ್ನು ದೇವರಿಂದ ಪಡೆದರು. ಅನಂತರ ಪರಮಾತ್ಮನನ್ನು ನಿಸ್ಸಂದೇಹವಾಗಿ ಗುಣಪೂರ್ಣನೆಂದೇ ಉಪಾಸಿಸುತ್ತಾ ಇದ್ದರು. ಸರ್ವಜ್ಞರಾದ ಮುಖ್ಯಪ್ರಾಣಾವತಾರರಾದ ವಾಸುದೇವಾಚಾರ್ಯರು ಇದನ್ನೇ ತಿಳಿದಿದ್ದರು. ಆದ್ದರಿಂದ ಶ್ರೀ ಅಚ್ಯುತಪ್ರೇಕ್ಷರ ಬಳಿಗೆ ಬಂದು ಸನ್ಯಾಸ ಸ್ವೀಕಾರಕ್ಕಾಗಿ ಗುರುಗಳಲ್ಲಿ ವಾಸಿಸಲು ಪ್ರಾರಂಭಿಸಿದರು.

ಶ್ರೀ ಮಧ್ಯಗೇಹಭಟ್ಟರು ಮಗನ ವಿರಹದಿಂದ ದುಃಖಿತರಾಗಿದ್ದರು. ಈ ವೃತ್ತಾಂತವನ್ನು ತಿಳಿದ ಕೂಡಲೇ ಪತ್ನಿ ಸಹಿತರಾಗಿ ಉಡುಪಿಗೆ ಬಂದು, ಅಚ್ಯುತ ಪ್ರೇಕ್ಷಕರಿಗೆ ನಮಸ್ಕರಿಸಿ, ಮಗನು ಸನ್ಯಾಸ ಸ್ವೀಕಾರ ಮಾಡಬಾರದೆಂದು ಅನೇಕ ಶಾಸ್ತ್ರ ಮತ್ತು ಯುಕ್ತಿಗಳ ಆಧಾರದಿಂದ ಒತ್ತಾಯದಿಂದ ಹೇಳಿದರು. ಆಚಾರ್ಯರು ಶಾಸ್ತ್ರ ಮತ್ತು ಪ್ರಬಲವಾದ ಯುಕ್ತಿಗಳಿಂದ ಮಧ್ಯಗೇಹಭಟ್ಟರ ಮಾತುಗಳನ್ನು ನಿರಾಕರಿಸಿದರು. ಆಗ ವಿಚಿತ್ರವಾದ ಒಂದು ದೈವಘಟನೆ ನಡೆಯಿತು. 'ವೃದ್ಧರಾದ ಮಾತಾಪಿತೃಗಳನ್ನು ತೊರೆದು ಅವರ ಸೇವೆ ಮಾಡದೆ ಸನ್ಯಾಸ ಸ್ವೀಕಾರ ಮಾಡುವುದು ನಿನಗೆ ಸರ್ವಥಾ ಉಚಿತವಲ್ಲ, ನೀನು ದಯವಿಟ್ಟು ಸನ್ಯಾಸ ಸ್ವೀಕಾರ ಮಾಡಬಾರದು ಎಂದು ಹೇಳುತ್ತಾ ಮಧ್ಯಗೇಹದಂಪತಿಗಳು ಪ್ರದಕ್ಷಿಣೆ ಬಂದು ಮಗನಿಗೆ ಸನ್ಯಾಸಿಗಳಿಗೆ ನಮಸ್ಕರಿಸುವಂತೆ ನಮಸ್ಕಾರ ಮಾಡಿದರು.

"ಹಿರಿಯರು ಕಿರಿಯರಿಗೆ ನಮಸ್ಕರಿಸುವುದು ಯುಕ್ತವಲ್ಲ, ನೀವಿಬ್ಬರೂ ದೈವ ಪ್ರೇರಣೆಯಿಂದ ನನಗೆ ನಮಸ್ಕರಿಸಿದ್ದರಿಂದ ನನ್ನ ಸನ್ಯಾಸಾಶ್ರಮವು ದೇವತೆಗಳಿಗೆ ಶ್ರೀ ಹರಿಗೆ ಸಮ್ಮತವೆಂದೂ, ಅದಕ್ಕೆ ನಿಮ್ಮಿಂದಲೇ ಅನುಜ್ಞೆಯು ಬಂದಂತೆಯೇ ಆಯಿತೆಂದೂ ತಿಳಿದುಬರುತ್ತದೆ ಎಂದು ಹೇಳಿ ತಂದೆಯನ್ನು ಸಮಾಧಾನಗೊಳಿಸಿದರು. ತಾಯಿಯನ್ನೂ ಸಮಾಧಾನಪಡಿಸಿದರು. ಎರಡನೆಯ ಬಾರಿ ತಂದೆಯು ತನ್ನನ್ನು ನೋಡಲು ಬಂದು ಸರ್ವಥಾ ಸನ್ನ್ಯಾಸ ಸ್ವೀಕಾರಮಾಡಬಾರದೆಂದು ಒತ್ತಾಯಿಸಿದಾಗ ತಂದೆಯನ್ನು ಶಾಸ್ತ್ರವಾಕ್ಯಗಳಿಂದ ಮತ್ತು ಯುಕ್ತಿಯಿಂದ ಸಮಾಧಾನಗೊಳಿಸಿ ನಿಮ್ಮ ಮುಪ್ಪಿನಲ್ಲಿ ನಿಮ್ಮನ್ನು ಸಲಹುವ ಪುತ್ರನೊಬ್ಬನು ಜನಿಸುವನು. ಅದುವರೆಗೆ ನಾನು ನಿಸ್ಸಂಗನಾಗಿದ್ದರೂ ಸನ್ನ್ಯಾಸವನ್ನು ಸ್ವೀಕರಿಸುವುದಿಲ್ಲ ಮತ್ತು ಜ್ಞಾನಿಗಳಾದ ನೀವು ಜಗನ್ಮಂಗಳಕರವಾದ ನನ್ನ ಸನ್ನ್ಯಾಸಶ್ರಮ ಸ್ವೀಕಾರವನ್ನು ನಿಷೇಧಿಸಬಾರದು ಎಂದು ಸಮಾಧಾನಪಡಿಸಿ ಕಳುಹಿಸಿದರು. ತಮ್ಮನು ಹುಟ್ಟಿದ ಮೇಲೆ ಮನೆಗೆ ಬಂದು ತಂದೆತಾಯಿಗಳಿಬ್ಬರಿಂದಲೂ ಸನ್ನ್ಯಾಸಾಶ್ರಮ ಸ್ವೀಕಾರಕ್ಕೆ ಅನುಜ್ಞೆಯನ್ನು ಪಡೆದರು. ಇಂತಹ ಜಗದ್ಗುರು ಮುಖ್ಯಪ್ರಾಣಾವತಾರರಾದ ಶ್ರೀ ವಾಸುದೇವಾಚಾರ್ಯರು ಮುಂದೆ ಶ್ರೀ ಮಧ್ವಾಚಾರ್ಯರೆಂದು ಪ್ರಸಿದ್ಧರಾಗಲಿರುವವರು ನನ್ನನ್ನು (ಭಕ್ತಜನರೆಲ್ಲರನ್ನು) ಕಾಪಾಡಲಿ ಎಂದು ಭಾವ.

**ವಿಗ್ರಹ** - ಬದ್ಧಾಬುದ್ಧಿಃ ಯಸ್ಯಸಃ ಬದ್ಧಬುದ್ಧಿಃ, ಹರೇ ನಮನಂ ಹರಿನಮನಂ ಕೃತಂ ಹರಿನಮನಂ ಯೇನ ಸಃಕೃತಹರಿನಮನಃ, ಪೃಥಯಾಃ ಇಮೇ ಪಾರ್ಥಾ, ಪೂಜಾಯಿತುಂ ಯೋಗ್ಯಃ ಪಾಜ್ಯಃ, ಪಾರ್ಥೈಃಪೂಜ್ಯಃ ಪಾರ್ಥಪೂಜ್ಯಃ ತಂ, ಗುರೋಃ, ಅಜ್ಞಾ ಗುರ್ವಾಜ್ಞಾ, ತಯಾ, ಗುಣೈಃ ಸಹವರ್ತತೇ ಇತಿ ಸಗುಣಃ, ಸಗುಣಶ್ಚಾಸೌ ಹರಿಶ್ಚ ಸಗುಣಹರಿಃ, ಸಗುಣಹರಿಂ ವೇತ್ತೀತಿ ಸಗುಣಹರಿವಿತ್, ತಂ, (ಹರಿಂವೇತ್ತೀತಿ ಹರಿವಿತ್, ಸಗುಣ ಇತಿ ಹರಿಂ ವೇತ್ತೀತಿ ಸಗುಣಹರಿವಿತ್ ತಂ) ಸತ್ ಚ ತತ್ ತಪಶ್ಚ ಸತ್ತಪಃ, ಸತ್ತಪಸಾತೃಪ್ತಂ ಸತ್ತಪಸ್ತೃಪ್ತಂ ಸತ್ತಪಸ್ತೃಪ್ತಂಚ ತತ್ ದೈವಂಚ ಸತ್ತಪಸ್ತೃಪ್ತದೈವಂ ತಸ್ಮಾತ್, ಸರ್ವಂ ಜಾನಾತಿ ಇತಿ ಸರ್ವಜ್ಞಃ ಸರ್ವಜ್ಞಶ್ಚಾಸೌಶಿಷ್ಯಶ್ಚ ಸರ್ವಜ್ಞಶಿಷ್ಯಃ ಸರ್ವಜ್ಞಶಿಷ್ಯಃ ಸರ್ವಜ್ಞಶಿಷ್ಯ ಇತಿ ಆಖ್ಯಾಯಸ್ಯಸಃ ಸರ್ವಜ್ಞ ಶಿಷ್ಯಾಖ್ಯಃ, ಸರ್ವಜ್ಞಶಿಷ್ಯಾಖ್ಯಶ್ಚಸೌವರಶ್ಚ ಸರ್ವಜ್ಞಶಿಷ್ಯಾಖ್ಯವರಃ, ತಂ ಸ್ವಸ್ಯ ತಾತಃ ಸ್ವತಾತಃ, ತಂ, ನ ವಿದ್ಯತೇ ಉತ್ತರಂ ಯಸ್ಯಸಃ ಅನುತ್ತರಃತಂ, ಸಹಜಾಯತೇ ಇತಿಸಹಜಃ, ಸಹಜಃ ಅಸ್ಯಅಸ್ತೀತಿಸಹಜವಾನ್,

---

**ಕ್ರಿಯಾಪದ** - ಅವತಾತ್, ಅವತು ಅವತಾಂ ಅವಂತುಂ

ಅವತಾತ್

ಅವ ಅವತಂ ಅವತ

ಅವತಾತ್

ಅವಾನಿ ಅವಾವ ಅವಾಮ

ಅವರಕ್ಷಣಾಗತಿಕಾಂತಿಪ್ರೀತಿತೃಪ್ತ್ಯವಗಮ ಪ್ರವೇಶಶ್ರವಣಸ್ವಾಮ್ಯರ್ಥಯಾಚನಕ್ರಿಯೇಚ್ಛಾದೀಪ್ತ್ಯ ವಾಪ್ತ್ಯಾಲಿಂಗನ ಹಿಂಸಾದಾನ ಬಾಗವೃದ್ಧಿಷು ಇತಿರಕ್ಷಣಾದ್ಯರ್ಥಕಾತ್

ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ಆಶಿಷಿ ಲೋಟ್ ಪ್ರಥಮ ಪುರುಷೈಕವಚನೇ ಅವತಾತ್ ಇತಿರೂಪ.

**ಪ್ರಯೋಗ** – ಸಃ ಮಾನ ಅವತಾತ್ (ಕರ್ತರಿ, ಸಕರ್ಮ ಪ್ರಯೋಗ) ತೇನ ಅಹಂ ಅವ್ಯೈ ಕರ್ಮಣಿ ಲೋಟ್)

ವ್ಯಾ.ವಿ. ದ್ವಿಃ ಎಂಬಲ್ಲಿ ದ್ವಿತ್ರಿಚತುರ್ಭ್ಯಃ ಸುಟ್ ಎಂಬ ಸೂತ್ರದಿಂದ ಕ್ರಿಯೆಯ ಆವೃತ್ತಿಯನ್ನು ಹೇಳುವಾಗ ಸುಚ್ ಪ್ರತ್ಯಯ. ಎರಡುಬಾರಿ ಎಂದು ಅರ್ಥ.

**ಗೂಢಾಪ್ರಕಾಶಿಕಾ ಅನ್ವಯಾರ್ಥ** - ಸನ್ಯಾಸ ಇತಿ ಸನ್ಯಾಸೇ ಬುದ್ಧಬುದ್ಧಿಃ ಎಂಬ ಶ್ಲೋಕದ ವ್ಯಾಖ್ಯಾನ ಪ್ರಾರಂಭವಾಗುತ್ತಿದೆ. ಯಃ ವಾಸುದೇವನಾಮಾ ವಟುಃ=ಯಾವ ವಾಸುದೇವನೆಂಬ ಹೆಸರುಳ್ಳ ಬ್ರಹ್ಮಚಾರಿಯು (ಬ್ರಹ್ಮಚರ್ಯಾಶ್ರಮದಲ್ಲಿರುವ ಮುಖ್ಯ ಪ್ರಾಣದೇವರು) ಸನ್ನ್ಯಾಸೇ ತುರಿಯಾಶ್ರಮೇ='ಸನ್ಯಾಸೇ' ಎಂದರೆ ನಾಲ್ಕನೆಯದಾದ ಸನ್ಯಾಸಾಶ್ರಮದಲ್ಲಿ ಎಂದು ಅರ್ಥ. ಬದ್ಧಾ ಬುದ್ಧಿಃ ಯಸ್ಯಸಃ ಬದ್ಧ ಬುದ್ಧಿಃ ದೃಢ ನಿಶ್ಚಯಃ ಬದ್ಧಬುದ್ಧಿಃ ಎಂದರೆ ದೃಢವಾದ ಮನಸ್ಸು ಉಳ್ಳವನು, ದೃಢನಿಶ್ಚಯ ಮಾಡಿದವನು ಎಂದು ಅರ್ಥ. ಇಲ್ಲಿ ಬದ್ಧಾಬುದ್ಧಿಃ ಯಸ್ಯಸಃ ಎಂದು ವಿಗ್ರಹ, ಕೃತಹರಿನಮನಃ ಅನುಜ್ಞಾರ್ಥಕಂ ಕೃತಂ ಹರೇಃ ನಮನಂ ಯೇನಸಃ=ಕೃತಹರಿನಮನಃ ಎಂದರೆ ಸನ್ಯಾಸಾಶ್ರಮ ಸ್ವೀಕಾರಕ್ಕೆ ಅನುಜ್ಞಾಪ್ರಾಪ್ತಿಗೋಸ್ಕರ ಮಾಡಲ್ಪಟ್ಟ ಹರಿಯ ನಮಸ್ಕಾರವುಳ್ಳವರು ಎಂದು ಅರ್ಥ. ಇಲ್ಲಿ ಕೃತಂ ಹರೇಃ ನಮನಂ ಯೇನ ಸಃ ಎಂದು ವಿಗ್ರಹ. ಪ್ರಾಕ್ = ಪೂರ್ವ ಜನ್ಮಾಂತರೇ, ಹಿಂದಿನ ಬೇರೊಂದು ಜನ್ಮದಲ್ಲಿ ಎಂದು ಅರ್ಥ. ಪಾರ್ಥಪೂಜ್ಯಂ ಎಂದರೆ ಪಾರ್ಥೈಃ=ಪಾಂಡವೈಃ ಪೂಜ್ಯಂ=ಪಾಂಡವರಿಂದ ಪೂಜಿತರಾದ ಎಂದು ಅರ್ಥ.

ಪೂರ್ವ ಜನ್ಮಾಂತರೇ ಪಾಂಡವಾಲಯೇ ದ್ರೌಪದೀಕರಾರ್ಪಿತಭೋಜನೇನ ಶುದ್ಧಾಂತಃಕರಣಂ ಇತಿ ಭಾವಃ= ಹಿಂದಿನ ಒಂದು ಜನ್ಮದಲ್ಲಿ ಪಾಂಡವರ ಮನೆಯಲ್ಲಿ ದ್ರೌಪದಿದೇವಿಯು ತನ್ನ ಕೈಯಿಂದಲೇ ಒಪ್ಪಿಸಿದ ಅನ್ನಾದಿಭಿಕ್ಷೆಯ ಸ್ವೀಕಾರದಿಂದ ಶುದ್ಧವಾದ ಅಂತಃಕರಣವುಳ್ಳವರನ್ನು ಎಂಬುದು 'ಪ್ರಾಕ್ ಪಾರ್ಥಪೂಜ್ಯಂ' ಎಂಬ ಪದದಿಂದ ಸೂಚಿತವಾದ ಅರ್ಥ, ಪ್ರಾಜ್ಞಂ ಸಕಲಶಾಸ್ತ್ರಾಭಿಜ್ಞಂ=ಪ್ರಾಜ್ಞಂ ಎಂದರೆ ಸಮಸ್ತಶಾಸ್ತ್ರರಹಸ್ಯಗಳನ್ನು ತಿಳಿದವರನ್ನು ಎಂದು ಅರ್ಥ. ಗುರ್ವಾಜ್ಞಯಾ=ಸ್ವಗುರೋರನುಜ್ಞಯಾ ಗುರ್ವಾಜ್ಞಯಾ ಎಂದರೆ ತನ್ನ ಗುರುಗಳ ಉಪದೇಶರೂಪವಾದ ಅಪ್ಪಣೆಯಿಂದ ಎಂದು ಅರ್ಥ, ಅಲಂ=ನಿಸ್ಸಂದೇಹಂ=ಅಲಂ ಎಂದರೆ ಸಂದೇಹವಿಲ್ಲದೆ ಎಂದು ಅರ್ಥ. ಸಗುಣಹರಿವಿದಂ ಎಂದರೆ ಗುಣಪೂರ್ಣನಾದ ಹರಿಯನ್ನು ಯಾರು ತಿಳಿಯುತ್ತಾರೊ ಅವನು 'ಸಗುಣಹರಿವಿತ್' ಅಂತಹವನನ್ನು ಎಂದರ್ಥ.

ಅಯಂಭಾವಃ=ಇಲ್ಲಿಯ ಅಭಿಪ್ರಾಯ ಹೀಗಿದೆ ನಿರ್ಗುಣೋಪಾಸ್ಯಕಸ್ಯ ಮಮ, ಗುರೋಶ್ಚ ನಕಿಂಚಿದ ಪರರೋಕ್ಷ ಆಸೀತ್, ಅತಃ ತ್ವಂ ನಿರ್ಗುಣೋಪಾಸ್ತಿಂ ಅವಿಶ್ವಸ್ಯ ಸಗುಣಂ ಬ್ರಹ್ಮ ಉಪಾಸ್ವ=ನಿರ್ಗುಣೋಪಾಸಕನಾದ ನನಗೂ ನನ್ನ ಗುರುಗಳಿಗೂ ಯಾವ ನಿರ್ಗುಣಾಪರೋಕ್ಷವೂ ಆಗಿಲ್ಲ. ಆದ್ದರಿಂದ ನೀನು ನಿರ್ಗುಣೋಪಾಸನೆಯಲ್ಲಿ ನಂಬಿಕೆಯಿಡದೆ ಗುಣಪೂರ್ಣವೆಂಬುದಾಗಿಯೇ ಬ್ರಹ್ಮನನ್ನು ಉಪಾಸಿಸು, ಇತಿ ಗುರ್ವಾಜ್ಞಯಾ ಸಗುಣಂ ಏವ ಬ್ರಹ್ಮ ಇತಿ ಉಪಾಸಕಂ ಇತಿ=ಈ ರೀತಿಯಾದ ಗುರುಗಳ ಅಪ್ಪಣೆಯಿಂದ ಪರಬ್ರಹ್ಮವು ಸಗುಣವೆಂದೇ ಉಪಾಸನೆ ಮಾಡುತ್ತಿರುವವರನ್ನು ಹೀಗೆ ಉಪಾಸನೆ ಮಾಡುತ್ತಿರುವ ಅಚ್ಯುತ ಪ್ರೇಕ್ಷಯತಿಗಳನ್ನು ಎಂದು ಭಾವ. ಪ್ರಾಕ್‌ಪಾರ್ಥಪೂಜ್ಯಂ, ಪ್ರಾಜ್ಯಂ, ಗುರ್ವಾಜ್ಞಯಾ ಅಲಂ ಸಗುಣಹರಿವಿದಂ, ಸತ್ತಪ್ತಸ್ಸೃಪ್ತ ದೈವಾತ್ ಸರ್ವಜ್ಞ ಶಿಷ್ಯಾಖ್ಯ ವರಂ, ಪ್ರಾಪ್ತಂ, ಇವು ನಾಲ್ಕು ಯತಿಂ ಎಂಬುದಕ್ಕೆ ವಿಶೇಷಣಗಳು. ಇವುಗಳಲ್ಲಿ ಮೂರು ವಿಶೇಷಣಗಳ ಅರ್ಥವನ್ನು ಹೇಳಿ ನಾಲ್ಕನೆಯ ವಿಶೇಷಣದ ಅರ್ಥವನ್ನು ಹೇಳುತ್ತಾರೆ. ಸತ್ತಪಸ್ತೃಪ್ತ ದೈವಾತ್ ಎಂಬಲ್ಲಿ, ಸಚ್ಚತತ್ ತಪಶ್ಚ ತಥೋಕ್ತಂತೇನ ಸಮೀಚೆನವಾದ ತಪಸ್ಸು - ಸತ್ತಪಃ, ಅದರಿಂದ, ಅಂದರೆ ಸತ್ತಪಸಾ, ತೃಪ್ತಂ ಚತತ್ ದೈವಂ ಚ ತಸ್ಮಾತ್, ತೃಪ್ತದೈವಾತ್ ಎಂಬಲ್ಲಿ ತೃಪ್ತಂ ಚತತ್ ದೈವಂಚ ಎಂದು ವಿಗ್ರಹ, ಸತ್ತಪಸಾ ತೃಪ್ತದೈವಂ ಸತ್ತಪಸ್ತೃಪ್ತದೈವಂ ತಸ್ಮಾತ್ ಸತ್ತಪಸ್ತೃಪ್ತ ದೈವಾತ್= ಉತ್ತಮವಾದ ತಪಸ್ಸಿನಿಂದ ಸಂತುಷ್ಟನಾದ ಪರಮಾತ್ಮನ ದೆಸೆಯಿಂದ, ಎಂದು ಅರ್ಥ, ಪ್ರಾಚೀನ ಸಮೀಚಿನ ತಪಸಾ ಸಂತಿಷ್ಟಾತ್ ಪರಮಾತ್ಮನಃ ಸಕಾಶಾತ್ ಹಿಂದಿನ ಜನ್ಮದ ಉತ್ತಮತಪಸ್ಸಿನಿಂದ ಸಂತುಷ್ಟನಾದ ಪರಮಾತ್ಮನ ದೆಸೆಯಿಂದ ಎಂದು ಈ ಅರ್ಥವನ್ನೇ ಟೀಕೆಯಲ್ಲಿ ಹೇಳಿದ್ದಾರೆ. ಸರ್ವಜ್ಞ ಶಿಷ್ಯಾಖ್ಯರಿವರು, ಇಲ್ಲಿ ಸರ್ವಜ್ಞಶ್ಚಾಸೌ ಶಿಷ್ಯಶ್ಚ ಎಂದು ವಿಗ್ರಹಮಾಡಿದಾಗ ಸರ್ವಜ್ಞಶಿಷ್ಯಃ ಎಂದು ಸಮಾಸಪದವಾಗುತ್ತದೆ. ಸ ಇತಿ ಆಖ್ಯಾ ಯಸ್ಯ ಸರ್ವಜ್ಞ ಶಿಷ್ಯ ಎಂದು ಹೆಸರು ಯಾರಿಗಿದೆಯೋ ಅವನು ಎಂದು ವಿಗ್ರಹ ಮಾಡಿದಾಗ ಸರ್ವಜ್ಞಶಿಷ್ಯಾಖ್ಯಃ ಎಂದು ಸಮಾಸಪದವಾಗುತ್ತದೆ. ಸರ್ವಜ್ಞಶಿಷ್ಯಾಖ್ಯಶ್ಚಾಸೌವರಶ್ಚ ಎಂದು ವಿಗ್ರಹಮಾಡಿದಾಗ ಸರ್ವಜ್ಞ ಶಿಷ್ಯಾಖ್ಯ ವರಃ ಎಂದಾಗುತ್ತದೆ, ತಂವರಂ ಪ್ರಾಪ್ತಂ ಪ್ರಾಪ್ತಂ ಪ್ರಾಪ್ತವಂತಂ ಸರ್ವಜ್ಞ ಶಿಷ್ಯನೆಂಬ ಹೆಸರುಳ್ಳ ವರವನ್ನು ಪಡೆದಿರುವ,

ತತ್ತ್ವಬುಭುಸ್ಸು ಸ್ಸನ್= ಶ್ರೀಮದ್ ಅಚ್ಯುತ ಪ್ರೇಕ್ಷಾಚಾರ್ಯರು ತತ್ತ್ವಜ್ಞಾನಾಪೇಕ್ಷಿಗಳಾಗಿ, **ತಪಸಾ=ತಪಸ್ಸಿನಿಂದ**, ರೂಪ್ಯಪೀಠಸ್ಥಂ=ರಜತಪೀಠದಲ್ಲಿರುವ, ವಿಭುಂ=ವ್ಯಾಪಕನಾದ ಅನಂತಾಸನ ಸ್ವಾಮಿಯನ್ನು ಸಂತೋಷ್ಯ=**ಸಂತೋಷಗೊಳಿಸಿ**, ಕಶ್ಚನ ತವಶಿಷ್ಯಃ ಭವಿಷ್ಯತಿ=ಯಾವನೋ ಒಬ್ಬನು ನಿನ್ನ ಶಿಷ್ಯನಾಗುತ್ತಾನೆ, ತೇನ=ಅವನಿಂದ, ತತ್ತ್ವಂ ವಿದ್ಧಿ=**ತತ್ತ್ವವನ್ನು** ತಿಳಿ, ಇತಿ ಭಗವತಾ ವರಂ ಲಬ್ಧವಂತಂ ಇತಿಭಾವಃ ಎಂದು ಪರಮಾತ್ಮನಿಂದ ವರವನ್ನು ಪಡೆದಿರುವ **ಅಚ್ಯುತ** ಪ್ರೇಕ್ಷಾಚಾರ್ಯರನ್ನು, (ಉಪಗತಃ=ಹೊಂದಿದ) ಎಂದು ಅಭಿಪ್ರಾಯ. ಯತಿಂ ಅಚ್ಯುತಪ್ರೇಕ್ಷನಾಮಾನಂ ಉಪಗತಃ ಪ್ರಾಪ್ತಂಃ=ಸನ್ಯಾಸಿಗಳಾದ ಅಚ್ಯುತಪ್ರೇಕ್ಷಾಚಾರ್ಯರನ್ನು ಉಪಗತಃ ಅಂದರೆ ಪ್ರಾಪ್ತರಾದ, ಸಹಜವಾನ್, ಅನುಜವಾನ್ ಸಹಜವಾನ್, ಎಂದರೆ ತಮ್ಮನುಳ್ಳವರಾದ, ನಿಷೇದ್ಧುಂ ಪುತ್ರಸನ್ಯಾಸಂ ಪ್ರತಿರೋದ್ಧುಂ 'ನಿಷೇದ್ಧುಂ' ಎಂದರೆ ಮಗನ ಸನ್ಯಾಸವನ್ನು ತಡೆಯುವುದಕ್ಕಾಗಿ ಎಂದು ಅರ್ಥ=ದ್ವಿಃದ್ವಿವಾರಂ ದ್ವಿಃ ಎಂದರೆ ಎರಡುಬಾರಿ ಎಂದು ಅರ್ಥ, ದ್ವಿತ್ರಿಚತುರ್ಭ್ಯಃ ಸುಚ್ (5-೪-18) (ಸಂಖ್ಯಾವಾಚಕ ಶಬ್ದಕ್ಕೆ ಕ್ರಿಯೆಯು ಅಭ್ಯಾವೃತ್ತಿ ಎಂದರೆ ಉತ್ಪತ್ತಿಯನ್ನು ಹೇಳುವಾಗ ಕೃತ್ವಸುಚ್ ಪ್ರತ್ಯಯ ಬರುತ್ತದೆ, ದ್ವಿಚತುರ್ ಶಬ್ದಗಳಿಗೆ ಸುಚ್ ಪ್ರತ್ಯಯ ಬರುತ್ತದೆ. ಎಂದು ಸೂತ್ರಾರ್ಥ. ದ್ವಿಃ ಎರಡುಬಾರಿ ತ್ರಿಃ=ಮೂರು ಬಾರಿ, ಚತುಃ=ನಾಲ್ಕುಬಾರಿ (ಭುಕ್ತೇ=ಊಟ ಮಾಡುತ್ತಾನೆ.) ಪ್ರಾಪ್ತಂ ಆಗತಂ ಪ್ರಾಪ್ತಂ ಎಂದರೆ ಬಂದಿರುವ, ಸ್ವತಾತಂ ಮಧ್ಯಗೇಹಭಟ್ಟಂ, ಸ್ವತಾತಂ=ತನ್ನ ತಂದೆಯಾದ ಮಧ್ಯಗೇಹಭಟ್ಟರನ್ನು ಅನುತ್ತರಂ ನಿರುತ್ತರಂ=ಅನುತ್ತರಂ ಎಂದರೆ ಉತ್ತರ ಇಲ್ಲದವನ್ನಾಗಿ, ಚ ಮಾತರಂ (ಚ) ಮತ್ತು ತಾಯಿಯನ್ನೂ ಕೂಡ ಅನುತ್ತಾರಾಂ ಇತಿ ಸಂಬಂಧಃ=ಉತ್ತರ ಇಲ್ಲದವಳನ್ನಾಗಿ ಎಂದು ಸೇರಿಸಿಕೊಳ್ಳಬೇಕು. ವ್ಯಥಿತ ಅಕಾರ್ಷಿತ್=ವ್ಯಥಿತ ಎಂದರೆ ಮಾಡಿದರು ಎಂದು ಅರ್ಥ. ಡುಧಾಞ್‌ಧಾರುಣಪೋಷಣಯೋಃ ಧಾತುವಿನ ಲುಙ್.

ಅಯಂ ಭಾವಃ=ಇಲ್ಲಿಯ ಅಭಿಪ್ರಾಯ ಹೀಗಿದೆ. ಪೂರ್ವಂ ಆಗತ್ಯ=ಮೊದಲು ಬಂದು, ಪುತ್ರಂ ನತ್ವಾಹ=ಮಗನಾದ ವಾಸುದೇವನ್ನೇ ನಮಸ್ಕರಿಸಿ, ಸಯಾಂಚಾಂ=ಪ್ರಾರ್ಥನಾಪೂರ್ವಕವಾಗಿ, ನಿರುಂಧಾನಂ=ಸನ್ಯಾಸವನ್ನು ತಡೆಯುತ್ತಿರುವ, ತಾತಂ ದೃಷ್ಟ್ವಾ=ತಂದೆಯನ್ನು ನೋಡಿ, ಉತ್ತಮೇನ ಅಧಮಃ ನನಮ್ಯಃ=ಉತ್ತಮರಿಂದ ಅಧಮರು (ಅಂದರೆ ಶ್ರೇಷ್ಠರು ಕನಿಷ್ಠರನ್ನು) ನಮಸ್ಕರಿಸಬಾರದು. ನತಂಚ ಮಹ್ಯಂ ಭವತಾ=ನಿಮ್ಮಿಂದ ನನಗೆ ನಮಸ್ಕರಿಸಲ್ಪಟ್ಟಿದೆ. ಅತಃ ಜ್ಞಾಯತೇ=ಆದ್ದರಿಂದ ತಿಳಿಯಲ್ಪಡುತ್ತದೆ. ವಿಧಾತ್ರಾ, ಸ್ವಯಮೇವ ಮಮಸನ್ಯಾಸಾನುಜ್ಞಾದಾಪಿತಾ ಏನೆಂದರೆ- ಬ್ರಹ್ಮನಿಂದ (ದೇವರಿಂದ) ಸ್ವತಃ ನನಗೆ ಸನ್ಯಾಸಾಶ್ರಮಕ್ಕೆ ಅನುಜ್ಞೆಯು ಕೊಡಲ್ಪಟ್ಟಿದೆ. ಇತಿವದನ್=ಹೀಗೆ ಹೇಳುತ್ತಾ, ನಿರುತ್ತರಂ ಕೃತ್ವಾ=ಉತ್ತರವಿಲ್ಲದವರನ್ನಾಗಿ ಮಾಡಿ, ಪ್ರೇಷಿತವಾನ್=ಕಳುಹಿಸಿದರು. ಪುನಃ=ತಿರುಗಿ, ಪುತ್ರಂ ಸ್ಮೃತ್ವಾ=ಮಗನನ್ನು ನೆನೆಸಿಕೊಂಡು, ಕ್ಷುಭಿತಮನಾಸನ್= ಕ್ಷೋಭೆಗೊಂಡ ಮನಸ್ಸುಳ್ಳವರಾಗಿ, ಪುನಃ ಆಗತ್ಯ=ಮತ್ತೊಂದು ಬಾರಿಬಂದು, ಪುತ್ರ!=ಮಗನೇ! ಮೃತಾನೇಕ ಪುತ್ರಕೌ= ಅನೇಕ ಮಕ್ಕಳು ಸತ್ತುಹೋಗಿರುವ, ಅನಾಥೌ=ರಕ್ಷಕರಿಲ್ಲದ, ವೃದ್ಧೌ=ಮುದುಕರಾದ, ಮಾತಾಪಿತರೌ ಆವಾಂ=ತಂದೆ ತಾಯಿಗಳಾದ ನಮ್ಮಿಬ್ಬರನ್ನು, ಹಿತ್ವಾ=ಪರಿತ್ಯಜಿಸಿ, ತವ=ನಿನಗೆ, ಪರಿವ್ರಜನಂ=ಸನ್ಯಾಸ ಸ್ವೀಕಾರ ಮಾಡುವುದು, ನ ಧರ್ಮಃ=ಧರ್ಮವಲ್ಲ, ಇತ್ಯಾದಿ ವದಂತಂ ಪಿತರಂ ಪ್ರತಿ=ಇದೇ ಮೊದಲಾದ ಮಾತನ್ನು ಹೇಳುತ್ತಿರುವ ತಂದೆಯನ್ನು ಕುರಿತು, 'ಯುವಯೋಃ=ನಿಮ್ಮಿಬ್ಬರಿಗೂ, ಮದನುಜಃ=ನನ್ನ ತಮ್ಮನು, ಪಾಲಕಃ ಭವಿಷ್ಯತಿ=ಪಾಲಕನಾಗುವನು, ಕಿಂಚ= ಮತ್ತು ಜ್ಞಾನಿನಃ ತವ=ಜ್ಞಾನಿಗಳಾದ ನಿಮಗೆ, ಶುಭಪ್ರತಿಘಾತಃ=ಮಂಗಳಕಾರ್ಯಕ್ಕೆ ವಿಘ್ನವನ್ನುಂಟುಮಾಡುವುದು, ನ ಉಚಿತಃ=ಯೋಗ್ಯವಲ್ಲ, ಇತ್ಯಾದಿ ವದನ್=ಇದೇ ಮೊದಲಾದ ಮಾತನ್ನು ಹೇಳುತ್ತಾ, ನಿರುತ್ತರಂ **ಚಕಾರ=ಇತಿ** (ತಂದೆಯನ್ನು) ಉತ್ತರ ಇಲ್ಲದವರನ್ನಾಗಿ ಮಾಡಿದನು. ಎಂದು ಅಭಿಪ್ರಾಯವು. ಯಃ ಸಃ=ಇಂತಹವನು **ಯಾವನೋ** ಅವನು, ಮಾಂ ಅವಂತಾತ್=ನನ್ನನ್ನು ಕಾಪಾಡಲಿ. ಅವರಕ್ಷಣೇ ಆಶಿಷಿಲೋಟ್=ಅವತಾತ್ **ಎಂಬಲ್ಲಿ ಅವರಕ್ಷಣೇ** ಎಂಬ ಧಾತುವಿನ ಲೋಟ್ ಕಾರವು.

**ಪೂರ್ಣಪ್ರಜ್ಞಾಖ್ಯ ಆಸೀದ್ಯತಿಕುಲತಿಲಕೋಯಃ ಶುಭಾಚಾರ ಈಶ**
**ಪ್ರತ್ತೋಸ್ಮಾ ಈಶ್ವರಾಜ್ಞಾಗತ ಸುರಸರಿತಿ ಸ್ನಾನಕೃಜ್ಜೈತ್ರಪತ್ರಃ।**
**ದುಷ್ಟದ್ಯಟ್ಟಿಚ್ಚ ಲೋಕೇ ಪ್ರವಚನ ಚತುರಃ ಸತ್ ಪುರಾಣೇತಿಹಾಸ**
**ಸ್ತೋಕೌಮೇಧಾಪ್ರದರ್ಶೀದಿಶತುಶುಭದೃಶಂ ಮಹ್ಯಮ್ಮೃದ್ವಗ್ರಣೀಃ ಸಃ ।।೮।।**

## ಗೂಢಾಭಾವಪ್ರಕಾಶಿಕಾ

ಯಃ ಪೂರ್ಣಪ್ರಜ್ಞಾಖ್ಯಃ ಪೂರ್ಣಪ್ರಜ್ಞನಾಮಾ ಸನ್। ಯತಿಕುಲತಿಲಕಃ ಯತಿಕುಲಶ್ರೇಷ್ಠಃ ಶುಭಾಚಾರಃ ಆಶ್ರಮೋಚಿತಾನೇಕ ಧರ್ಮಶೀಲಃ। ಆಸೀತ್ ಅಭವತ್। ಅಸಭುವಿ ಲಜ ! ಅಚ್ಯುತ ಪ್ರೇಕ್ಷಾದಾಶ್ರಮಂ ಸ್ವೀಕೃತ್ಯ ಪೂರ್ಣಪ್ರಜ್ಞ ಇತಿನಾಮ ತತೋ ಲೇಭೆ ಇತಿ ಭಾವಃ। ಅಸ್ಮೈ ಅಚ್ಯುತಪ್ರೇಕ್ಷಾಯ ಈಶಪ್ರತ್ತಃ ಈಶೇನ ರೂಪ್ಯ ಪೀಠಭರ್ತ್ರಾ ವಿಷ್ಣುನಾ (ಪ್ರತ್ತಃ) ದತ್ತಃ। ಆಶ್ರಮಾನಂತರಂ ಸ್ವಗುರುಣಾ ಅಚ್ಯುತಪ್ರೇಕ್ಷೇಣ ಸಹ ರೂಪ್ಯಪೀಠಂ ಗತ್ವಾ ತತ್ರತ್ಯಸ್ವಾಮಿನಂ ಪ್ರಣನಾಮ। ತದಾ ಈಶಃ ಕಂಚನ ಪುರುಷಮಾವಿಶ್ಯ, ಪೂರ್ಣಪ್ರಜ್ಞಹಸ್ತಂ ಗೃಹಿತ್ವಾ ಅಚ್ಯುತ ಪ್ರೇಕ್ಷಹಸ್ತೇ ತತ್ತ್ವಬುಭುತ್ಸಯಾ ಚಿರೇಣ ತ್ವಯಾತಪಃ ಚೀರ್ಣಂ, ತತ್ಫಲಂ ಇದಂ ತುಭ್ಯಂದದಾಮಿ ಇತಿ ಉಕ್ತ್ವಾದತ್ತವಾನಿತಿ ಭಾವಃ।

ಈಶ್ವರಾಜ್ಞಾಗತಸುರಸರಿತಿ, ಈಶ್ವರಸ್ಯ ರೂಪ್ಯಪೀಠಭರ್ತುಃ ವಿಷ್ಣೋಃ ಅಜ್ಞಯಾ, ಆಗಚ್ಛತಿ ಇತ್ಯನು ಶಾಸನಾತ್ ಆಗತಾಯಾಂ ಸುರಸರಿತಿ ಗಂಗಾಯಾಂ ಸ್ನಾನಕೃತ್ ಸ್ನಾನಂಕುರ್ವಾಣಃ। ಯದಾ ಪೂರ್ಣಭೋಧಃ ಗಂಗಾ ಗಂತುಂ ಉದ್ಯತಃ ಸನ್ ಸ್ವಗುರುಂ ಆಜ್ಞಾಂ ಅಯಾಚತ, ತದಾ ಅಸೌ ಅಚ್ಯುತಪ್ರೇಕ್ಷಃ ತದ್ವಿಯೋಗಭೀರುಃ ಸ್ವಸ್ವಾಮಿನಂ ಯಯಾಚೇ। ಸ್ವಾಮೀ ಚ ಕಂಚನಪುರುಷಂ ಆವಿಶ್ಯ ಇತಃ ತೃತೀಯೇ ದಿವಸೇ, ಗಂಗಾತ್ವದರ್ಥಂ ಅಸ್ಮತ್ತಟಾಕಂ ಅಗಮಿಷ್ಯತಿ। ಅತಃ ತ್ವಂ ಮಾಗಚ್ಛ ಇತಿ ಪೂರ್ಣಬೋಧಮವದತ್ ತದಾಜ್ಞಾಗತಗಂಗಾಯಾಂ (ಸಃ) ಜನ್ಯೈಃ ಸಹಸಸ್ನೌ ಇತಿಭಾವಃ।

ಜೈತ್ರಪತ್ರಃ ಜೈತ್ರಂಜಯಶೀಲಪತ್ರಂಯಸ್ಯಸತಥೋಕ್ತಃ। ಸನ್ಯಾಸಾನಂತರಂ ಗತ್ವಾ ಚತ್ವಾರಿಂಶದ್ದಿವಸಾಪಗಮೇಸತಿ ತತ್ರ ಪತ್ರಾಗಂಬಂನಂ ಕೃತ್ವಾ ಬಹೂನ್ ಜಿಗಾಯ ಇತಿಭಾವಃ। ದುಷ್ಟದ್ಯಚ್ಚಿತ್, ದುಷ್ಟದ್ಯಂ ಇಷ್ಟಸಿದ್ಧ್ಯಾಖ್ಯ ಮಾಯಾವಾದಿ ಗ್ರಂಥಸ್ಥಾದಿಪದ್ಯಂ ಛಿನತ್ತೀತಿ ಸಃ ಯದಾ ಪೂರ್ಣಭೋದಂ ವಾಗ್ಮಿನಂ ಚಿಕೀರ್ಷುಃ ಅಚ್ಯುತಪ್ರೇಕ್ಷಃ ತಸ್ಮೈ ಇಷ್ಟಸಿದ್ಧ್ಯಾಖ್ಯಂ ಗ್ರಂಥಂವ್ಯಾಚಖ್ಯೌ, ತದಾ ಸಃ ತದಾದ್ಯಶ್ಲೋಕೇ ದ್ವಾತ್ರಿಂಶಂದ್ದೂಷಣಾನ್ಯುವಾಚ ಇತಿಭಾವಃ ।

---

ಲೋಕೇ ಪ್ರವಚನ ಚತುರಃ (ವಿದ್ವತ್ಸಮೂಹೇ) ಪ್ರವಚನ ಚತರಃ ಪ್ರವಚನೇ ಇಷ್ಟಸಿದ್ಧ್ಯಾಖ್ಯಗ್ರಂಥ ವ್ಯಾಖ್ಯಾನೇ ಕುಶಲಃ ಚತುರಃ, ಅಚ್ಯುತಪ್ರೇಕ್ಷೇ ಇಷ್ಟಸಿದ್ಧಾಖ್ಯಂಗ್ರಂಥಂ ವ್ಯಾಕುರ್ವತಿ ಸತಿ ತದ್ದೂಷಕಂ ಪೂರ್ಣಬೋಧಂ ದೃಷ್ಟ್ವಾ ಜನಾಃ ತರ್ಹಿತ್ವಮೇವ ಪ್ರಜ್ಞತ್ವಾತ್ ವ್ಯಾಕುರು, ಇತ್ಯವದನ್! ತದಾ ಸಸಂಪ್ರದಾಯಂ ಇಷ್ಟಸಿದ್ಧ್ಯಾಖ್ಯ ಗ್ರಂಥಂ (ಪೂರ್ಣಬೋಧಃ) ಜನಸಂಸದಿ ವ್ಯಾಖ್ಯಾತವಾನ್ ಇತಿಭಾವಃ। ಸತ್ ಪುರಾಣೇತಿಹಾಸಸ್ಯ, ಸಚ್ಚತತ್ ಪುರಾಣಂಚ ಭಾಗವತದಿ ತೇನ ಸಹಿತಃ ಇತಿಹಾಸಃ ಭಾರತಂ ತಸ್ಯೋಕ್ತೌ ಅಭಿದಾನೇ, ಮೇಧಾಪ್ರದರ್ಶೀಮೇಧಾಂಬುದ್ಧಿಂ ಪ್ರದರ್ಶಯತೀತಿ ಸಃ। ಕದಾಚಿತ್ ಅಚ್ಯುತಪ್ರೇಕ್ಷಸಮೀಪೇ ಪಂಚಷ್ಯೈಃ ದ್ವಿಜೈಃ ಭಾಗವತೇ ಪ್ರಕಾಕಾಂತರೇಣ ವಾಚ್ಯಮಾನೇ ಸತಿ, ತದಾ ಸ್ವಯನನೇಯಂ ವ್ಯಾಸಕೃತಿಃ ಕಿಂತು ಅನ್ಯೈವ ಇತಿಪ್ರಕಾರಂತರೇಣ ಕಥಿ ತೇಸತಿ, ಸ್ವಗುರುಣಾ ಯದಿ ತ್ವಂ ವ್ಯಾಸಕೃತಿಂ ವೇತ್ಥ ತದಾ ಅತ್ರೈವ ಪಂಚಮೇ ಸ್ಕಂಧೇ (ಅಧ್ಯಾಯೇ) ಕಿಂಚಿದ್ ವದಇತಿ ಸಾಕ್ಷೇಪಂ ಉಕ್ತೇಸತಿ ತಮಧ್ಯಾಯಂ ಸರ್ವಮುಕ್ತ್ವಾ ಸ್ವಬುದ್ಧಿಂ ಪ್ರಕಾಶಿತವಾನ್ ಇತಿಭಾವಃ। ಸಃ ಋಜ್ವಗ್ರಣೀಃ ಋಜವಃ ಬ್ರಹ್ಮತ್ವಯೋಗ್ಯಾ ಜೀವಾಃ ತೇಷಾಮಗ್ರಣೀಃ ಆದ್ಯಃ ಮುಖ್ಯವಾಯಿರೀತಿಭಾವಃ। ಮಹ್ಯಂ ಶುಭಂದೃಶಂ ಸಮೀಚೀನಜ್ಞಾನಂ ದಿಶತು ದದಾತು। ದಿಶ ಅತಿ ಸರ್ಜನೇ ಆಶಿಷಿಲೋಟ್.

**ಪದಚ್ಛೇದ** - ಪೂರ್ಣಪ್ರಜ್ಞಾಖ್ಯಃ, ಆಸಿತ್, ಯತಿಕುಲತಿಲಕಃ, ಯಃ, ಶುಭಾಚಾರಃ, ಈಶಪ್ರತ್ತಃ, ಅಸ್ಮೈ, **ಈಶ್ವರಾಜ್ಞಾಗತ**ಸುರಸರಿತಿ, ಸ್ನಾನಕೃತ್, ಜೈತ್ರಪತ್ರಃ, ದುಷ್ಟದ್ಯಚಿತ್, ಚ ಲೋಕೇ, ಪ್ರವಚನಚತುರಃ, ಸತ್ ಪುರಾಣೇತಿಹಾಸಸ್ಯ, **ಉಕ್ತೌ ಮೇಧಾ** ಪ್ರದರ್ಶೀ, ದಿಶತು, ಶುಭದೃಶಂ, ಮಹ್ಯಂ ಋಜ್ವಗ್ರಣೀ ಸಃ ॥

**ಅನ್ವಯ** - ಯಃ ಪೂರ್ಣ ಪ್ರಜ್ಞಾಖ್ಯಃ ಸನ್, ಯತಿಕುಲತಿಲಕಃ ಶುಭಾಚಾರಃ ಆಸೀತ್, ಅಸ್ಮೈ ಈಶಪ್ರತ್ತಃ, ಈಶ್ವರಾಜ್ಞಾಗತಸುರಸರಿತಿ. ಸ್ನಾನಕೃತ್, ಜೈತ್ರಪತ್ರಃ, ದುಷ್ಟದ್ಯಚಿತ್, ಲೋಕೇ, ಪ್ರವಚನ ಚತುರಃ, ಸತ್ ಪುರಾಣೇತಿಹಾಸಸ್ಯ, ಉಕ್ತೌ, ಮೇಧಾಪ್ರದರ್ಶೀ, ಋಜ್ವಗ್ರಣೀ ಸಃ ಮಹ್ಯಂ ಶುಭದೃಶಂ ದಿಶತು.

**ಅನ್ವಯಾರ್ಥ** – ಯಃ=ಯಾವ ವಾಸುದೇವಾಚಾರ್ಯರು, ಪೂರ್ಣಪ್ರಜ್ಞಾಖ್ಯಃ ಸನ್=ಪೂರ್ಣಪ್ರಜ್ಞ ಎಂಬ ಹೆಸರುಳ್ಳವರಾಗಿ, ಯತಿಕುಲತಿಲಕಃ=ಸನ್ಯಾಸಿ ವಂಶದಲ್ಲಿ ಶ್ರೇಷ್ಠರೂ, ಶುಭಾಚಾರಃ=ತನ್ನ ಆಶ್ರಮಕ್ಕೆ ಉಚಿತವಾದ ಮಂಗಳಕರವಾದ ನಡೆತೆಯುಳ್ಳವರೂ (ಅಸಿತ್=ಆಗಿದ್ದರೋ) ಅಸ್ಮೈ= ಈ ಅಚ್ಯುತ ಪ್ರೇಕ್ಷಾಚಾರ್ಯರಿಗೆ, ಈಶ ಪ್ರತ್ತಃ= ರಜತಪೀಠಪುರಸ್ವಾಮಿಯಾದ ಅನಂತಾಸನ ದೇವರಿಂದ ಕೊಡಲ್ಪಟ್ಟವರೂ, ಈಶ್ವರಾಜ್ಞಾಗತಸುರಿಸರಿತಿ, ಈಶ್ವರ=ರೂಪ್ಯಪೀಠಪುರ ಸ್ವಾಮಿಯಾದ ಅನಂತಾಸನದೇವರ ಆಜ್ಞಾ=ಅಪ್ಪಣೆಯಿಂದ, ಆಗತ=ಬಂದಿರುವ, ಸುರಸರಿತಿ=ದೇವಗಂಗಾನದಿಯಲ್ಲಿ ಸ್ನಾನಕೃತ್= ಸ್ನಾನವನ್ನು ಮಾಡಿದ, ಜೈತ್ರಪತ್ರಃ=ಜಯಸೂಚಕವಾದ ಪತ್ರಗಳುಳ್ಳ, ದುಷ್ಟದ್ಯಚಿಚ್ಛಿತ್ =ಇಷ್ಟ ಸಿದ್ಧಿ ಎಂಬ ಮಾಯಾವಾದಿ ಗ್ರಂಥದ) ದೋಷದುಷ್ಟವಾದ ಮೊದಲನೆಯ ಪದ್ಯವನ್ನು ಖಂಡಿಸಿದ, ಲೋಕೇ=ಪಂಡಿತ ಪ್ರಪಂಚದಲ್ಲಿ, ಪ್ರವಚನಚತುರಃ= ಗ್ರಂಥವ್ಯಾಖ್ಯಾನ ಮಾಡುವ ವಿಷಯದಲ್ಲಿ ಕುಶಲರಾದ, ಸತ್ ಪುರಾಣೇತಿಹಾಸಸ್ಯ=ಸತ್=ನಿರ್ದೋಷವಾದ, ಪುರಾಣ= ಭಾಗವತಾದಿ ಪುರಾಣಗಳು, ಇತಿಹಾಸಸ್ಯ=ಭಾರತಾದಿಗಳು ಇವುಗಳ ಉಕ್ತೌ=ಹೇಳುವಿಕೆಯ ವಿಷಯದಲ್ಲಿ ಮೇಧಾಪ್ರದರ್ಶಿ=ತನ್ನ ಬುದ್ಧಿಕೌಶಲವನ್ನು ತೋರಿಸಿದ, ಋಜ್ವಗ್ರಣೀಃ=ಋಜಯೋಗಿ ಶ್ರೇಷ್ಠರಾದ, ಸಃ= ಆ ಶ್ರೀ ಮಧ್ವಾಚಾರ್ಯರು, ಮಹ್ಯಂ=ನನಗೆ ಶುಭದೃಶಂ=ಒಳ್ಳೆಯ ಜ್ಞಾನವನ್ನು, ದಿಶತು=ಕೊಡಲಿ.

**ತಾತ್ಪರ್ಯ** – ಶ್ರೀ ವಾಸುದೇವಾಚಾರ್ಯರು ಸ್ವಲ್ಪ ಸಮಯದವರೆಗೆ ಆಶ್ರಮ ತೆಗೆದುಕೊಳ್ಳದೇ ಇದ್ದು ತಂದೆ ತಾಯಿಯರ ಅನುಮತಿಯನ್ನು ಪಡೆದು ಸನಕಾದಿ ಪರಂಪರೆಯಿಂದ ಬಂದಿರುವ ಯತಿವಂಶದಲ್ಲಿ ಅಚ್ಯುತ ಪ್ರೇಕ್ಷಾಚಾರ್ಯರಿಂದ ಸನ್ಯಾಸಾಶ್ರಮವನ್ನು ಪಡೆದು ಪೂರ್ಣಪ್ರಜ್ಞಾಚಾರ್ಯರು ಎಂಬ ಆಶ್ರಮನಾಮವನ್ನು ಹೊಂದಿದರು. ಆಮೇಲೆ ತನ್ನ ಆಶ್ರಮಕ್ಕೆ ಉಚಿತವಾದ ಆಚಾರಗಳನ್ನು ಸ್ವಲ್ಪವೂ ಬಿಡದೆ ನಡೆಸುತ್ತಾ ತನಗೆ ಆಚಾರ ವಿಶೇಷವನ್ನು ತಿಳಿಸಲು ಬಂದ ಗುರುಗಳಿಗೂ ಆಶ್ಚರ್ಯವನ್ನುಂಟು ಮಾಡಿದರು. ಸನ್ಯಾಸಾಶ್ರಮ ಸ್ವೀಕರಿಸಿದ ಅನಂತರ ತನ್ನ ~~ಗುರುಗಳಾದ ಅಚ್ಯುತ ಪ್ರೇಕ್ಷಾಚಾರ್ಯರ ಸಂಗಡ ರಜತಪೀಠಪುರಕ್ಕೆ ಹೋಗಿ ಅಲ್ಲಿ ತನ್ನ ಸ್ವಾಮಿಗೆ ನಮಸ್ಕಾರ~~ ಮಾಡಿದರು. ಆಗ ಆ ಅನಂತಾಸನಸ್ವಾಮಿಯು, ಅಲ್ಲಿದ್ದ ಒಬ್ಬ ಮನುಷ್ಯನಲ್ಲಿ ಆವಿಷ್ಟನಾಗಿ, ಶ್ರೀ ಪೂರ್ಣಪ್ರಜ್ಞಾಚಾರ್ಯರ ಕೈಹಿಡಿದು, ಕರೆದುಕೊಂಡು ಬಂದು, ಆಚಾರ್ಯರ ಕೈಯನ್ನು ಅಚ್ಯುತಪ್ರೇಕ್ಷಾಚಾರ್ಯರ ಕೈಯಲ್ಲಿಟ್ಟು ಹೀಗೆ ಹೇಳಿದರು. ತತ್ತ್ವವನ್ನು ತಿಳಿಯಲು ಬಹುಕಾಲ ನನ್ನನ್ನು ಸೇವೆ ಮಾಡಿರುವ ನಿನಗೆ ಅದರ ಫಲಸ್ವರೂಪರಾದ ಈ ಪೂರ್ಣಪ್ರಜ್ಞಾಚಾರ್ಯರನ್ನು ಕೊಟ್ಟಿದ್ದೇನೆ. ಇವರಿಂದ ತತ್ವವನ್ನು ತಿಳಿದು ಉದ್ಧಾರಹೊಂದು ಎಂದು ಹೇಳಿ ಆಚಾರ್ಯರನ್ನು ಅಚ್ಯುತ ಪ್ರೇಕ್ಷರಿಗೆ ಕೊಟ್ಟರು. ಶ್ರೀಮದಾಚಾರ್ಯರು ಸನ್ಯಾಸ ಸ್ವೀಕಾರ ಮಾಡಿದ ಕೆಲವು ದಿವಸಗಳನಂತರ ತಾನು ಸ್ನಾನಕ್ಕಾಗಿ ಗಂಗೆಯಿದ್ದಲ್ಲಿಗೆ, ಉತ್ತರ ಪ್ರದೇಶಕ್ಕೆ ಹೋಗಬೇಕೆಂದು ಬಯಸಿದರು. ಅದಕ್ಕಾಗಿ ಗುರುಗಳಾದ ಅಚ್ಯುತಪ್ರೇಕ್ಷರ ಅನುಜ್ಞೆಯನ್ನು ಬೇಡಿದರು. ಆಗತಾನೆ ಸ್ವೀಕರಿಸಿದ ಶಿಷ್ಯನ ವಿಯೋಗದಿಂದ ಭೀತರಾದ ಅಚ್ಯುತಪ್ರೇಕ್ಷರು ಅನಂತಾಸನ ಸ್ವಾಮಿಯನ್ನೇ ಪ್ರಾರ್ಥಿಸಿ, ತನ್ನ ಶಿಷ್ಯನು ತನ್ನನ್ನು ಬಿಟ್ಟು ದೂರಹೋಗದಂತೆ ಮಾಡಬೇಕೆಂದು ಕೇಳಿಕೊಂಡರು. ಆಗ ರೂಪ್ಯ ಪೀಠಾಧಿಪತಿಯಾದ ಅನಂತಾಸನ ಸ್ವಾಮಿಯು ಯಾವನೋ ಒಬ್ಬ ಪುರುಷನಲ್ಲಿ ಆವೇಶಹೊಂದಿ ಎಲೈ ಪೂರ್ಣಪ್ರಜ್ಞನೇ! ನಮ್ಮ ಸರೋವರಕ್ಕೆ ಈ ದಿನದಿಂದ ಮೂರನೆ ದಿನದಲ್ಲಿ ಗಂಗೆಯು ಬರಲಿದ್ದಾಳೆ. ಆದ್ದರಿಂದ ನೀನು ಗಂಗಾಸ್ನಾನಕ್ಕಾಗಿ ಹೊರಡಬೇಕಾಗಿಲ್ಲ, ಎಂದು ಪೂರ್ಣಪ್ರಜ್ಞರಿಗೆ ಅಪ್ಪಣೆ ಮಾಡಿದರು. ಅನಂತಾಸನಸ್ವಾಮಿಯ ಅಪ್ಪಣೆಯಂತೆ ಮೂರನೆಯ ದಿವಸ ಬಂದ ಗಂಗೆಯಲ್ಲಿ ಎಲ್ಲಾ ಭಕ್ತರೂ ಸ್ನಾನ ಮಾಡಿದರು. ಶ್ರೀ ಪೂರ್ಣಪ್ರಜ್ಞರು ಆಶ್ರಮ ಸ್ವೀಕಾರಮಾಡಿ ನಲವತ್ತು ದಿವಸಗಳು ಕಳೆದಾಗ ವಾಸುದೇವ ಪಂಡಿತ ಮುಂತಾದ ಅನೇಕ ವಾದಿಗಳು ವಾದಕ್ಕಾಗಿ ಬಂದರು. ಅವರೆಲ್ಲರನ್ನು ಆಚಾರ್ಯರು ಸೋಲಿಸಿ ಅವರಿಂದ ಜಯಪತ್ರಿಕೆಗಳನ್ನು ಪಡೆದರು.

ಇಷ್ಟೊಂದು ಕುಶಲನಾದ ಶಿಷ್ಯನನ್ನು ಮತ್ತೂ ವಾಗ್ಮಿಯನ್ನಾಗಿ ಮಾಡಬೇಕೆಂಬ ಮಹೋದ್ದೇಶ ಮತ್ತು ಮಹೋತ್ಸಾಹದಿಂದ ಅಚ್ಯುತಪ್ರೇಕ್ಷರು ಪೂರ್ಣಪ್ರಜ್ಞರಿಗೆ ಇಷ್ಟಸಿದ್ಧಿ ಎಂಬ ಗ್ರಂಥವನ್ನು ಪಾಠ ಹೇಳಲಾರಂಭಿಸಿದರು. ಆಗ ಪೂರ್ಣಪ್ರಜ್ಞರು ಆ ಗ್ರಂಥದ ಮೊದಲನೆಯ ಪದ್ಯದಲ್ಲಿ ಮೂವತ್ತ ಎರಡು ದೋಷಗಳಿವೆ ಎಂದು ಪ್ರತಿಪಾದಿಸಿ ಅದನ್ನು ಖಂಡಿಸಿದರು. ಆ ದೋಷಗಳನ್ನು ಪರಿಹರಿಸಲು ಅಚ್ಯುತ ಪ್ರೇಕ್ಷರಿಗೆ ಸಾಧ್ಯವಾಗಲಿಲ್ಲ, ಗುರುಶಿಷ್ಯರ ಈ ವಾದವನ್ನು ಕಂಡು ಕೇಳಿ ಜನರು 'ಪೂರ್ಣಪ್ರಜ್ಞರೇ' ನೀವೇ ಸ್ವತಃ ವ್ಯಾಖ್ಯಾನ ಕುಶಲರಿದ್ದೀರಿ. ಆದ್ದರಿಂದ ನೀವೆ ಈ ಗ್ರಂಥದ ಪ್ರವಚನ ಮಾಡಿರೆಂದೂ ಪ್ರಾರ್ಥಿಸಿದರು. ಆಚಾರ್ಯರು ಸಂಪ್ರದಾಯಾನುಸಾರವಾಗಿ ಇಷ್ಟಸಿದ್ಧಿಗ್ರಂಥವನ್ನು ಅದರಲ್ಲಿರುವ ದೋಷಗಳನ್ನು ಎತ್ತಿ ತೋರಿಸಿ ವ್ಯಾಖ್ಯಾನಿಸುತ್ತಾ ಪಂಡಿತ ಪ್ರಪಂಚದಲ್ಲಿ ಅತ್ಯಂತ ಪ್ರವಚನ ಚತುರರೆಂಬ ಕೀರ್ತಿಯನ್ನು ಪಡೆದರು. ಅವರ ಪ್ರವಚನವನ್ನು ಕೇಳುವ ಕುತೂಹಲದಿಂದ ಬಂದವರಿಗೆ ಸಂತೋಷವಾಯಿತು. ಮತ್ಸರದಿಂದ ಬಂದವರಿಗೆ ಮುಖಭಂಗವಾಯಿತು.

ಅಚ್ಯುತ ಪ್ರೇಕ್ಷಾಚಾರ್ಯರ ಸನ್ನಿಧಿಯಲ್ಲಿ ನಿರ್ದೋಷವಾದ ಭಾಗವತಾದಿ ಪುರಾಣಗಳು ಮತ್ತು ಇತಿಹಾಸದ ಪ್ರವಚನವು ನಡೆಯುತ್ತಿತ್ತು. ಒಂದು ಬಾರಿ ಅವರ ಬಳಿಯಲ್ಲಿ ಐದಾರುಮಂದಿ ಬ್ರಾಹ್ಮಣರು ಭಾಗವತ ಗ್ರಂಥವನ್ನಿಟ್ಟುಕೊಂಡು ಬೇರೆ ಬೇರೆ ಪಾಠಾಂತರಗಳನ್ನು ಓದಿದರು. ಈ ಪಾಠಗಳಲ್ಲಿ ಯಾವುದು ಸರಿಯಾದುದು ಎಂಬ ಜಿಜ್ಞಾಸೆ ಬಂದಾಗ ಇದೇ ಪಾಠ ಸರಿಯೆಂದು ನಿರ್ಣಯಿಸಲಾಗಲಿಲ್ಲ, ಆಗ ಪೂರ್ಣಪ್ರಜ್ಞರು ಆ ಪಾಠಗಳಲ್ಲಿ ಒಂದನ್ನು ಸರಿಯಾದುದೆಂದೂ ಅದೇ ವ್ಯಾಸರಕೃತಿಯೆಂದೂ, ಉಳಿದುದು ಸರಿಯಲ್ಲವೆಂದೂ ಹೇಳಿದಾಗ ಗುರುಗಳಾದ ಅಚ್ಯುತಪ್ರೇಕ್ಷರು ನಿಮಗೆ ಹೇಗೆ ಗೊತ್ತು ಎಂದು ಕೇಳಿದರು. ಆಗ ಆಚಾರ್ಯರು ಭಗವಂತನ ಅನುಗ್ರಹದಿಂದ ನಾನು ಎಲ್ಲವನ್ನು ತಿಳಿದಿದ್ದೇನೆ ಎಂದಾಗ ಅಚ್ಯುತಪ್ರೇಕ್ಷರು ಹಾಗಾದರೆ ಇಲ್ಲಿಯೇ ಐದನೇಸ್ಕಂಧದ ಐದನೇ ಅಧ್ಯಾಯದ ಗದ್ಯಭಾಗವನ್ನು ಹೇಳು ಎಂದಾಗ ಆಚಾರ್ಯರು ಯಾವ ಪುಸ್ತಕವನ್ನು ನೋಡದೇ ಅನೇಕಾನೇಕ ಅಧ್ಯಾಯಗಳನ್ನು ಕಂಠಪಾಠವಾಗಿ ಹೇಳಿದರು. ಆಚಾರ್ಯರು ಹೇಳಿದ ಪಾಠವೂ ಆ ಪುಸ್ತಕಗಳಲ್ಲಿ ಒಂದರಲ್ಲಿ ಇದ್ದಿತು. ಹೀಗೆ ಆಚಾರ್ಯರು ತನ್ನ ಅನೇಕ ಜನ್ಮಾಂತರಗಳ ಸಂಸ್ಕಾರ ಬಲದಿಂದ ಸಹಸ್ರಾರು ಗ್ರಂಥಗಳ ಸ್ಮರಣೆಯನ್ನೇ ಇಟ್ಟುಕೊಂಡಿದ್ದರು. ಬ್ರಹ್ಮಪದವಿಗೆ ಯೋಗ್ಯರಾದ ಋಜುಗಳೆಂಬ ಜೀವೋತ್ತಮರಲ್ಲಿ ಈಗ ವಾಯುಪದವಿಗೆ ಬಂದಿರುವ ಈ ಋಜಯೋಗಿಶ್ರೇಷ್ಠರು ನನಗೆ ಹಾಗೂ ನನ್ನಂತಹ ಹರಿವಾಯು ಭಕ್ತರಿಗೂ ಒಳ್ಳೆಯ ಜ್ಞಾನ ದೃಷ್ಟಿಯನ್ನು ಕೊಟ್ಟು ಕಾಪಾಡಲಿ ಎಂದು ಗ್ರಂಥಕರ್ತರಾದ ಶ್ರೀಮನ್ನಾರಾಯಣ ಪಂಡಿತರು ಆಚಾರ್ಯರನ್ನು ಪ್ರಾರ್ಥಿಸಿದ್ದಾರೆ.

**ವಿಗ್ರಹ** - ಪೂರ್ಣಾ ಪ್ರಜ್ಞಾಯಸ್ಯಸಃ, ಪೂರ್ಣಪ್ರಜ್ಞಃ, ಪೂರ್ಣಪ್ರಜ್ಞಃ ಇತಿ ಆಖ್ಯಾಯಸ್ಯಸಃ ಪೂರ್ಣಪ್ರಜ್ಞಾಖ್ಯಃ ಯತೀನಾಂಕುಲಂ ಯತಿಕುಲಂ ಯತಿಕುಲಸ್ಯ ತಿಲಕಃ, ಶುಭಃ ಆಚಾರಃ ಯಸ್ಯಸಃ ಶುಭಾಚಾರಃ, ಈಶೇನ ಪ್ರತ್ತಃ ಈಶಪ್ರತ್ತಃ, ಈಶ್ವರಸ್ಯಆಜ್ಞಾ ಈಶ್ವರಾಜ್ಞಾಗತಾ ಈಶ್ವರಾಜ್ಞಯಾ ಆಗತಾ ಈಶ್ವರಾಜ್ಞಾಗತಾ ಸುರಣಾಂ, ಸರಿತ್ ಸುರಸರಿತ್, ಈಶ್ವರಾಜ್ಞಾಗತಾ ಚ ಸಾ ಸುರಸರಿತ್‌ಚ ಈಶ್ವರಾಜ್ಞಾಗತಸುರಸರಿತ್ ತಸ್ಯಾಂ, ಸ್ನಾನಂ ಕರೋತೀತಿ ಸ್ನಾನಕೃತ್, ಜೇತುಂಶೀಲಂ ಅಸ್ಯೇತಿ ಜೈತ್ರಂ ಜೈತ್ರಂ ಪತ್ರಂ ಯಸ್ಯಸಃ ಜೈತ್ರ ಪತ್ರಃ, ದುಷ್ಟಂ ಚತತ್ ಪದ್ಯಂ ಚ ದುಷ್ಟದ್ಯಂ, ದುಷ್ಟದ್ಯಂ ಛಿನತ್ತಿ ಇತಿ ದುಷ್ಟದ್ಯಚ್ಛಿತ್, ಪ್ರವಚನೇ ಚತುರಃ ಪ್ರವಚನ ಚತುರಃ.

ಸತ್ ಚ ತತ್ ಪುರಾಣಂ ಚ ಸತ್ ಪುರಾಣಂ ಸತ್ ಪುರಾಣೇನಸಹಿತಃ ಇತಿಹಾಸಃ ಸತ್ ಪುರಾಣೇತಿಹಾಸಃ, ತಸ್ಯ, ಮೇಧಾಂ ಪ್ರದರ್ಶಯತೀತಿ ಮೇಧಾಪ್ರದರ್ಶೀ, ಶುಭಾ ಚ, ಸಾ, ದೃಕ್‌ಚ ಶುಭದೃಕ್, ತಾಂ, ಋಜೂನಾಂ ಅಗ್ರಣೀಃ ಋಜ್ವಗ್ರಣೀ.ಃ

**ಕ್ರಿಯಾಪದ** - ಆಸೀತ್ ಆಸ್ತಾಂ ಆಸನ್
ಆಸೀಃ ಆಸ್ತಂ ಆಸ್ತ
ಆಸಂ ಆಸ್ವ ಆಸ್ಮ

ಅಸಂಭುವಿ, ಸತ್ತಾರ್ಥಕಾತ್ ಅಸಧಾತೋಃ ಪರಸ್ಮೈಪದನಃ ಅಕರ್ಮಕಾತ್ ಅನದ್ಯತನಭೂತೇಲಜ್ ಪ್ರ.ಪು.ಏ.

ದಿಶತು ದಿಶತಾಂ ದಿಶಂತು
ದಿಶತಾತ್
ದಿಶ ದಿಶತಂ ದಿಶತ
ದಿಶತಾತ್
ದಿಶಾನಿ ದಿಶಾವ ದಿಶಾಮ

ದಿಶಅತಿಸರ್ಜನೇ ಪರಸ್ಮೈಪದಿ ಸಕರ್ಮಕಧಾತುಃ, ಅಜ್ಞಾಯಾಂ ಲೋಟ್ ಪ್ರ.ಪು.ಏ.

**ಪ್ರಯೋಗ** - ಯಃ ಪೂರ್ಣಪ್ರಜ್ಞಾಖ್ಯಃ ಅಸೀತ್ (ಅಕರ್ಮಕಕರ್ತರಿ)
ಯೇನ ಪೂರ್ಣಪ್ರಜ್ಞಾಖ್ಯೇನ ಅಭೂಯತ (ಭಾವೇ)
ಸಃ ಋಜ್ವಗ್ರಣೀಃ ಮಹ್ಯಂ ಶುಭದೃಶಂ ದಿಶತು (ಕರ್ತರಿ)
ತೇನ ಋಜ್ವಗ್ರಣ್ಯಾ ಮಹ್ಯಂಶುಭದೃಕ್‌ದಿಶ್ಯತಾಂ (ಕರ್ಮಣಿ)

**ಗೂಢಾಭಾವಪ್ರಕಾಶಿಕಾ ವ್ಯಾಖ್ಯಾನ ಪ್ರತಿಪಾದಾರ್ಥ** - ಯಃ=ಯಾವ ವಾಸುದೇವಾಚಾರ್ಯರು, ಪೂರ್ಣ ಪ್ರಜ್ಞಾಖ್ಯಃ ಎಂದರೆ ಪೂರ್ಣಪ್ರಜ್ಞನಾಮಾಸನ್=ಪೂರ್ಣಪ್ರಜ್ಞ ಎಂಬ ಹೆಸರುಳ್ಳವರಾಗಿ, ಯತಿಕುಲತಿಲಕಃ ಯತಿಕುಲಶ್ರೇಷ್ಠಃ ಯತಿಕುಲತಿಲಕಃ ಎಂದರೆ ಯತಿವಂಶದಲ್ಲಿ ಶ್ರೇಷ್ಠರಾಗಿ, ಶುಭಚಾರಃ =ಆಶ್ರಮೋಚಿತಾನೇಕ ಧರ್ಮಶೀಲಃ=ಯತ್ಯಾಶ್ರಮಕ್ಕೆ ಉಚಿತವಾದ ಅನೇಕ ಧರ್ಮಾಚರಣೆ ಮಾಡುವ ಸ್ವಭಾವ ಉಳ್ಳವರಾಗಿ ಆಸೀತ್=ಅಭವತ್=ಆದರು. ಅಸಭುವಿಲಜ= ಆಸೀತ್ ಎಂಬಲ್ಲಿ ಅಸಧಾತು - ಅದಕ್ಕೆ ಭೂಧಾತುವುನದೇ ಅರ್ಥ, ಅಸಧಾತುವಿನ ಲಜ ಲಕಾರದಲ್ಲಿ ಆಸೀತ್ ಎಂದು ರೂಪ.

ಅಚ್ಯುತಪ್ರೇಕ್ಷಾತ್ ಆಶ್ರಮಂ ಸ್ವೀಕೃತ್ಯ=ಅಚ್ಯುತ ಪ್ರೇಕ್ಷರಿಂದ ಆಶ್ರಮವನ್ನು ಸ್ವೀಕರಿಸಿ, ಪೂರ್ಣಪ್ರಜ್ಞ ಇತಿ ನಾಮ ತತಃ ಲೇಭೆ ಪೂರ್ಣಪ್ರಜ್ಞ ಎಂಬ ಹೆಸರನ್ನು ಅನಂತರ ಪಡೆದರು. ಇತಿಭಾವಃ=ಎಂದು ಅಭಿಪ್ರಾಯವು ಅಸ್ಮೈ ಅಚ್ಯುತ ಪ್ರೇಕ್ಷಾಯ' ಅಸ್ಮೈ ಅಂದರೆ ಈ ಅಚ್ಯುತಪ್ರೇಕ್ಷರಿಗೆ, ಈಶಪ್ರತ್ತ=ಅಂದರೆ ಈಸನಾದ ರೂಪ್ಯ ಪೀಠಸ್ವಾಮಿಯಾದ ನಾರಾಯಣನಿಂದ ಕೊಡಲ್ಪಟ್ಟ.

ಆಶ್ರಮಾನಂತರಂ ಸ್ವಗುರುಣಾ ಅಚ್ಯುತ ಪ್ರೇಕ್ಷೇಣ ಸಹ ರೂಪ್ಯ ಪೀಠಂಗತ್ವಾ= ಆಶ್ರಮವಾದ ಅನಂತರ ತನ್ನ ಗುರುವಾದ ಅಚ್ಯುತಪ್ರೇಕ್ಷರೊಂದಿಗೆ ರಜತಪೀಠಪುರಕ್ಕೆ ಹೋಗಿ, ತತ್ರತ್ಯ ಸ್ವಾಮಿನಂ ಪ್ರಣಾಮ=ಅಲ್ಲಿರುವ ಸ್ವಾಮಿಯಾದ ನಾರಾಯಣನನ್ನು ನಮಸ್ಕರಿಸಿದರು. ತದಾ ಈಶಃ= ಆಗ ಸ್ವಾಮಿಯಾದ ಅನಂತಾಸನ ದೇವರು, ಕಂಚನ ಪುರುಷಂ ಆವಿಶ್ಯ=ಯಾವನೋ ಒಬ್ಬ ಪುರುಷನನ್ನು ಆವೇಶಿಸಿ (ಪುರುಷನಲ್ಲಿ ಪ್ರವೇಶಿಸಿ) ಪೂರ್ಣಪ್ರಜ್ಞ ಹಸ್ತಂ ಗೃಹಿತ್ವಾ= ಶ್ರೀ ಪೂರ್ಣವಪ್ರಜ್ಞಾಚಾರ್ಯರ ಕೈಯನ್ನು ಹಿಡಿದುಕೊಂಡು, ಅಚ್ಯುತ ಪ್ರೇಕ್ಷಹಸ್ತೇ=ಶ್ರೀಮದಚ್ಯುತ ಪ್ರೇಕ್ಷ ತೀರ್ಥರ ಕೈಯಲ್ಲಿ, ತತ್ತ್ವಬುಭುತ್ಸಯಾ=ತತ್ವವನ್ನು ತಿಳಿಯುವ ಅಪೇಕ್ಷೆಯಿಂದ, ಚಿರೇಣ=ಬಹಳ ಕಾಲದಿಂದಲೂ, ತ್ವಯಾ=ನಿನ್ನಿಂದತಪಃ ಚೀರ್ಣಂ=ತಪಸ್ಸು ಆಚರಿಸಲ್ಪಟ್ಟಿತು. ತತ್ ಫಲಂ ಇದಂ=ಅದರ ಫಲವಾದ ಇದನ್ನು ದದಾಮಿ=ಕೊಡುತ್ತೇನೆ, ಇತಿಉಕ್ತ್ವಾ=ಹೀಗೆಂದು ಹೇಳಿ, ದತ್ತವಾನ್ ಇತಿಭಾವಃ=ಕೊಟ್ಟರು ಎಂದು ಅಭಿಪ್ರಾಯ. **ಈಶ್ವರಾಜ್ಞಾಗತಸುರಸರಿತಿ=ಈ ಸಮಸ್ತ ಪದಕ್ಕೆ ವ್ಯಾಖ್ಯಾನ ಮಾಡುತ್ತಾರೆ. 'ಈಶ್ವರಸ್ಯ ಅಂದರೆ ರೂಪ್ಯಪೀಠಕ್ಕೆ ಸ್ವಾಮಿಯಾದ ವಿಷ್ಣುವಿನ ಎಂದು ಅರ್ಥ, 'ಆಗತ' ಎಂಬುದಕ್ಕೆ ಅರ್ಥ ಬರೆಯುತ್ತಾರೆ. 'ಆಚ್ಛಗತಿ' ಇತ್ಯನು ಶಾಸನಾತ್** ಆಗತಾಯಾಂ, ಇಲ್ಲಿರುವ ಸರೋವರಕ್ಕೆ ಬಾ ಎಂಬ **ಅಪ್ಪಣೆಯಿಂದ ಬಂದಿರುವ, ಸುರಸರಿತಿ ಗಂಗಾಯಾಂ**=ಸುಸರಿತಿ ಎಂದರೆ ಗಂಗೆಯಲ್ಲಿ ಸ್ನಾನಕೃತ್ ಸ್ನಾನಂ ಕುರ್ವಾಣಃ **= 'ಸ್ನಾನಕೃತ್' ಎಂದರೆ** ಸ್ನಾನವನ್ನು ಮಾಡುತ್ತಿರುವ (ಮಾಡಿದ)

ಯದಾಪೂರ್ಣಬೋಧಃ=ಯಾವಾಗ ಶ್ರೀ ಪೂರ್ಣಬೋಧರು, ಗಂಗಾಂಗತುಂ ಉದ್ಯತಃ ಸನ್=ಗಂಗೆಗೆ ಹೋಗಲು ಸನ್ನದ್ಧರಾಗಿ, ಸ್ವಗುರುಂ ಆಜ್ಞಾಂ ಅಯಾಚತ=ತನ್ನ ಗುರುಗಳಲ್ಲಿ ಅಪ್ಪಣೆಯನ್ನು ಕೇಳಿದರೋ, ತದಾ ಅಸೌ ಅಚ್ಯುತ ಪ್ರೇಕ್ಷಃ=ಆಗ ಅಚ್ಯುತಪ್ರೇಕ್ಷರು, ವಿಯೋಗಭೀರುಃ=ಶಿಷ್ಯನ ಅಗಲುವಿಕೆಯಿಂದ ಹೆದರಿದವರಾಗಿ, ಸ್ವಸ್ವಾಮಿನಂಯಯಾಚೆ= ತನ್ನ ಸ್ವಾಮಿಯಾದ ಅನಂತಾಸನದೇವರನ್ನು ಬೇಡಿದರು. ಸ್ವಾಮೀಚ=ಸ್ವಾಮಿಯಾದ ಅನಂತಾಸನ ದೇವರಾದರೋ, ಕಂಚನ ಪುರುಷಂ ಆವಶ್ಯ ಯಾವನೋ ಒಬ್ಬ ಮನುಷ್ಯನನ್ನು ಆವೇಶಿಸಿ ಇತಃಇತಿಯ ತೃತೀಯೇ ದಿವಸೇ= ಇಂದಿನಿಂದ ಮೂರನೆಯ ದಿನದಲ್ಲಿ, ಗಂಗಾ=ಗಂಗೆಯು, ತ್ವದರ್ಥಂ=ನಿನಗೋಸ್ಕರ, ಅಸ್ಮತ್ತಟಾಕಂ ಆಗಮಿಷ್ಯತಿ=ನಮ್ಮ ಸರೋವರಕ್ಕೆ (ಅನಂತಸರಸ್ಸಿಗೆ) ಬರುವಳು, ಅತಃ ತ್ವಂ ಮಾಗಚ್ಛ= ಆದ್ದರಿಂದ ನೀನು ಹೋಗಬೇಡ, ಇತಿ ಪೂರ್ಣಬೋಧಂ ಅವದತ್=ಎಂದು ಶ್ರೀ ಪೂರ್ಣಬೋಧ ತೀರ್ಥರಿಗೆ ಹೇಳಿದರು. ತದಾಜ್ಞಾಗತಗಂಗಾಯಾಂ=ಶ್ರೀಅನಂತಾಸನ ದೇವರ ಅಪ್ಪಣೆಯಿಂದ ಬಂದ ಗಂಗೆಯಲ್ಲಿ (ಆಚಾರ್ಯಃ =ಆಚಾರ್ಯರು) ಜನ್ಯೈಃ ಸಹ ಸಸನ್ನೌ ಇತಿಭಾವಃ=ಜನರೊಡನೆ ಸ್ನಾನ ಮಾಡಿದರು ಎಂದು ಅಭಿಪ್ರಾಯವು.

ಜೈತ್ರಪತ್ರಃ=ಜೈತ್ರಂ=ಜಯಶೀಲಂ ಪತ್ರಂ ಯಸ್ಯಸಃ ತಥೋಕ್ತಃ=ಜೈತ್ರಪತ್ರಃ ಎಂಬಲ್ಲಿ ಜೈತ್ರಂ ಜಯಶೀಲಂ ಪತ್ರಂ ಯಸ್ಯಸಃ ಎಂದು ವಿಗ್ರಹ, ಜಯಸೂಚಕವಾಗಿ ವಾದಿಗಳು ಕೊಟ್ಟ ಪತ್ರ ಉಳ್ಳವರು ಎಂದು ಅರ್ಥ. ಸನ್ಯಾಸಾನಂತರಂ= ಆಚಾರ್ಯರು ಸನ್ಯಾಸಸ್ವೀಕಾರಮಾಡಿದ ಮೇಲೆ ಚತ್ವಾರಿಂಶದ್ದಿವಸಾಪಗಮೇಸತಿ=ನಲವತ್ತು ದಿವಸಗಳು ಕಳೆದ ಮೇಲೆ, ತತ್ರ=ಅಲ್ಲಿ ಪತ್ರಲಂಬನಂ ಕೃತ್ವಾ=ವಾದಾಹ್ವಾನದ ಪತ್ರವನ್ನು ತೂಗು ಹಾಕಿ, ಬಹೂನ್ ಜಿಗಾಯ=ಅನೇಕರನ್ನು ಜಯಿಸಿದರು. ಇತಿ ಭಾವಃ=ಎಂದು ಅಭಿಪ್ರಾಯ. ಆಚಾರ್ಯರು ಸನ್ಯಾಸ ಸ್ವೀಕಾರ ಮಾಡಿ ನಲವತ್ತು ದಿವಸಗಳಾದಾಗ ವಾಸುದೇವ ಪಂಡಿತ ಮುಂತಾದ ಅನೇಕ ಶಾಸ್ತ್ರಪಂಡಿತರು ಅಲ್ಲಿಗೆ ಬಂದರು. ಆಚಾರ್ಯರು 'ನಿಮ್ಮಲ್ಲಿ ಯಾರು ಬೇಕಾದರೂ ವಾದಕ್ಕೆ ಬರಬಹುದು ಎಂದು ಪತ್ರವನ್ನು ಬರೆದು ತೂಗುಹಾಕಿ, ಆಗ ವಾದಕ್ಕೆ ಬಂದ ವಾಸುದೇವ ಪಂಡಿತ ಮುಂತಾದ ವಾದಿಗಳನ್ನು ಸೋಲಿಸಿದರು ಎಂದು ತಾತ್ಪರ್ಯ.

ದುಷ್ಪದ್ಯಚ್ಛಿತ್, ಈ ಪದಕ್ಕೆ ವ್ಯಾಖ್ಯಾನ ಮಾಡುತ್ತಾರೆ, ದುಷ್ಪದ್ಯಂ=ಇಷ್ಟಸಿದ್ಧ್ಯಾಖ್ಯ ಮಾಯಾವಾದಿ ಗ್ರಂಥಸ್ಥಾದ್ಯಪದ್ಯಂ= ~~ದುಷ್ಪದ್ಯ ಎಂದರೆ ಇಷ್ಟಸಿದ್ಧಿ ಎಂಬ ಮಾಯಾವಾದಿಗಳ ಗ್ರಂಥದಲ್ಲಿರುವ ಮೊದಲನೆಯ ಪದ್ಯ ಎಂದು (ಅರ್ಥ)~~ ಛಿನತ್ತೀತಿ ಸಃ (ದುಷ್ಪದ್ಯಚ್ಛಿತ್) ಆ ಪದ್ಯವನ್ನು ಖಂಡಿಸುತ್ತಾರೆ ಎಂಬ ವ್ಯುತ್ಪತ್ತಿಯಿಂದ 'ಆಚಾರ್ಯರಿಗೆ ದುಷ್ಪದ್ಯಚಿತ್' ಎಂಬ ವಿಶೇಷಣವು.

ಈ ವಿಶೇಷಣದಿಂದ ಸೂಚಿತವಾದ ತಾತ್ಪರ್ಯಾರ್ಥವನ್ನು ಹೇಳುತ್ತಾರೆ. ಯದಾ=ಯಾವಾಗ, ಪೂರ್ಣಬೋಧಂ =ಶ್ರೀ ಪೂರ್ಣಬೋಧತೀರ್ಥರನ್ನು, (ಶ್ರೀ ಮಧ್ವಾಚಾರ್ಯರನ್ನು) ವಾಗ್ಮಿನಂ ಚಿಕೀರ್ಷುಃ=ವ್ಯಾಖ್ಯಾನ ಕುಶಲನನ್ನಾಗಿ ಮಾಡುವ ಇಚ್ಛೆಯುಳ್ಳ, ಅಚ್ಯುತಪ್ರೇಕ್ಷಃ=ಅಚ್ಯುತ ಪ್ರೇಕ್ಷಾಚಾರ್ಯರು, ತಸ್ಮೈ=ಶಿಷ್ಯರಾದ ಆ ಪೂರ್ಣಬೋಧತೀರ್ಥರಿಗೆ, ಇಷ್ಟ ಸಿದ್ಧ್ಯಾಖ್ಯಂ, ಗ್ರಂಥಂ=ಇಷ್ಟಸಿದ್ಧಿ ಎಂಬ ಗ್ರಂಥವನ್ನು ವ್ಯಾಚಖ್ಯೌ=ಪ್ರವಚನ ಮಾಡಿದರೋ, ತದಾ=ಆಗ, ಸಃ= ಅಪೂರ್ಣಭೋಧತೀರ್ಥರು, ತದಾದ್ಯಶ್ಲೋಕೇ=ಆ ಇಷ್ಟಸಿದ್ಧಿ ಎಂಬ ಗ್ರಂಥದ ಮೊದಲನೆಯ ಮಂಗಳ ಪದ್ಯದಲ್ಲಿ, ದ್ವಾತ್ರಿಂಶತ್=ಮೂವತ್ತ ಎರಡು, ದೂಷಣಾನಿ=ದೋಷಗಳನ್ನು, ಉವಾಚ - ಹೇಳಿದರು. ಇತಿಭಾವಃ ವೆಂದು ಅಭಿಪ್ರಾಯ.

ಚ ಲೋಕೇ ಪ್ರವಚನ ಚತುರಃ=ಎಂಬ ಮೂಲಕ್ಕೆ ಅರ್ಥ ಹೇಳುತ್ತಾರೆ. ಪ್ರವಚನೇ ಇಷ್ಟಸಿದ್ಧ್ಯಾಖ್ಯ ಗ್ರಂಥವ್ಯಾಖ್ಯಾನೇ=ಪ್ರವಚನೇ ಎಂದರೆ ಇಷ್ಟಸಿದ್ಧಿ ಎಂಬ ಗ್ರಂಥದ ವ್ಯಾಖ್ಯಾನದಲ್ಲಿ ಎಂದು ಅರ್ಥ, ಕುಶಲಃ=ಚತುರಃ ಕುಶಲರಾದ, ಇದರಿಂದ ಸೂಚಿತವಾದ ಭಾವವನ್ನು ಹೇಳುತ್ತಾರೆ ಅಚ್ಯುತಪ್ರೇಕ್ಷೇ=ಅಚ್ಯುತ ಪ್ರೇಕ್ಷರು ಇಷ್ಟಸಿದ್ಧಾಖ್ಯಗ್ರಂಥಂ= **ಇಷ್ಟಸಿದ್ಧಿ** ಎಂಬ ಗ್ರಂಥವನ್ನು ವ್ಯಾಕುರ್ವತಿಸಿ=ವ್ಯಾಖ್ಯಾನ ಮಾಡುತ್ತಿರಲಾಗಿ, ತದ್ದೂಷಕಂ=ಆ ಗ್ರಂಥದಲ್ಲಿ ದೋಷವನ್ನು **ಹೇಳುತ್ತಿರುವ**, ಪೂರ್ಣಬೋಧಂ=ಶ್ರೀಪೂರ್ಣಪ್ರಜ್ಞಾಚಾರ್ಯರನ್ನು ದೃಷ್ಟ್ವಾ=ನೋಡಿ, ಜನಾಃ=ಜನರು ತರ್ಹಿ=ಹಾಗಾದರೆ, **ತ್ವಂ ಏವ=ನೀನೇ, ಪ್ರಾಜ್ಞತ್ವಾತ್**=ಸರಿಯಾಗಿ ತಿಳಿದ ಪಂಡಿತನಾದುದರಿಂದ ವ್ಯಾಕುರು= (ಗ್ರಂಥದ) ಪ್ರವಚನ ಮಾಡು

ಅವದನ್=ಹೀಗೆಂದು ಹೇಳಿದಾಗ ತದಾ=ಆಗ, ಸಸಂಪ್ರದಾಯಂ=ಸಂಪ್ರದಾಯಾನುಸಾರವಾಗಿ, ಇಷ್ಟಸಿದ್ಧ್ಯಾಖ್ಯಗ್ರಂಥಂ= ಇಷ್ಟಸಿದ್ಧಿ ಎಂಬ ಹೆಸರುಳ್ಳ ಗ್ರಂಥವನ್ನು, ಜನಸಂಸದಿ=ಜನರ ಸಭೆಯಲ್ಲಿ ವ್ಯಾಖ್ಯಾತವಾನ್=ಪ್ರವಚನ ಮಾಡಿದರು, ಇತಿಭಾವಃ=ಎಂದು ಅಭಿಪ್ರಾಯವು.

ಒಂದು ಬಾರಿ ಶ್ರೀ ಪೂರ್ಣಪ್ರಜ್ಞರನ್ನು ಎದುರಿನಲ್ಲಿ ಕೂಡಿಸಿಕೊಂಡ ಶ್ರೀ ಅಚ್ಯುತಪ್ರೇಕ್ಷರು ಇಷ್ಟಸಿದ್ಧಿ ಎಂಬ ಗ್ರಂಥದ ಪ್ರವಚನ ಮಾಡುತ್ತಿದ್ದರು. ಆದರೆ ಆಚಾರ್ಯರು ಆ ಗ್ರಂಥದಲ್ಲಿ ಮಂಗಳ ಶ್ಲೋಕದಲ್ಲೇ ಅನೇಕ ದೋಷಗಳನ್ನು ಹೇಳಿದರು. ಆಗ ಜನರು 'ಹಾಗಾದರೆ ಪ್ರಾಜ್ಞರಾದ ನೀವೇ ಈ ಗ್ರಂಥದ ಪ್ರವಚನ ಮಾಡಿರಿ' ಎಂದು ಹೇಳಿದರು. ಆಗ ಸಂಪ್ರದಾಯಾನುಸಾರವಾಗಿ ಆಚಾರ್ಯರು ತತ್ತ್ವಾರ್ಥಗಳಿಂದ ಗರ್ಭಿತವಾದ ಪ್ರವಚನವನ್ನು ಮಾಡಿದರು ಎಂದು ಅಭಿಪ್ರಾಯ.

ಸತ್ಪುರಾಣೇತಿಹಾಸಸ್ಯ=ನಿರ್ದೋಷವಾದ ಪುರಾಣ ಮತ್ತು ಇತಿಹಾಸಗಳ, ಸಚ್ಚತತ್ ಪುರಾಣಂ ಚ='ಸತ್ಪುರಾಣ' ಎಂಬಲ್ಲಿ ಮೊದಲು ಸಚ್ಚತತ್ ಪುರಾಣಂ ಚ ಎಂದು ವಿಶೇಷಣ ಪೂರ್ವಪದಕರ್ಮಧಾರಯ, ಭಾಗವತಾದಿ 'ಸತ್ಪುರಾಣ' ಎಂಬಲ್ಲಿ ಪುರಾಣಪದದಿಂದ ಭಾಗವತಾದಿ ಪುರಾಣವನ್ನು ಇಟ್ಟುಕೊಳ್ಳಬೇಕು. ತೇನಸಹಿತಃ ಇತಿಹಾಸಃ ಭಾರತಂ='ಸತ್ಪುರಾಣ' ನಿರ್ದೋಷವಾದ ಭಾಗವತಾದಿ ಪುರಾಣಸಹಿತವಾದ ಇತಿಹಾಸ ಅಂದರೆ ಭಾರತವು, ತಸ್ಯಉಕ್ತೌ ಅಭಿಧಾನೇ=ಅದರ ಉಕ್ತಿ ಎಂದರೆ ಹೇಳುವ ವಿಷಯದಲ್ಲಿ ಮೇಧಾಪ್ರದರ್ಶೀ=ಮೇಧಾಂ=ಬುದ್ಧಿಂ='ಮೇಧಾಂ' ಎಂದರೆ ಬುದ್ಧಿಯನ್ನು, ಪ್ರದರ್ಶಯತೀತಿ ಸಃ=ತೋರಿಸುತ್ತಾನೆ ಯಾವನೋ ಅವನು (ಮೇಧಾ ಪ್ರದರ್ಶಿಯು) ಇದರ ಭಾವ.

ಕದಾಚಿತ್=ಒಂದಾನೊಂದು ಸಮಯದಲ್ಲಿ ಅಚ್ಯುತಪ್ರೇಕ್ಷಸಮೀಪೇ= ಅಚ್ಯುತ ಪ್ರೇಕ್ಷರ ಸಮೀಪದಲ್ಲಿ ಪಂಚಷೈರ್ದ್ವಿಜೈಃ= ಐದಾರು ಮಂದಿ ಬ್ರಾಹ್ಮಣರಿಂದ, ಭಾಗವತೇ=ಭಾಗವತ ಗ್ರಂಥವು, ಪ್ರಕಾರಾಂತೇಣ=ಬೇರೆ ರೀತಿಯಿಂದ (ಪಾಠಭೇದದಿಂದ) ವಾಚ್ಯಮಾನೇಸತಿ ಓದಲ್ಪಡುತ್ತಿರುವಾಗ, ತದಾ=ಆಗ, ಸ್ವಯಂ=ಶ್ರೀಪೂರ್ಣಪ್ರಜ್ಞರು ಸ್ವತಃ ತಾನು ನ ಇಯಂ ವ್ಯಾಸಕೃತಿಃ= ಇದು ವ್ಯಾಸರ ಕೃತಿಯಲ್ಲ, (ಇದು ವ್ಯಾಸರಿಗೆ ಸಮ್ಮತವಾದ ಪಾಠವಲ್ಲ) ಕಿಂತು=ಆದರೆ, ಅನ್ಯಾಏವ= (ವ್ಯಾಸರಕೃತಿಯು) ~~ಬೇರೆಯೇ ಆಗಿದೆ (ವ್ಯಾಸರಿಗೆ ಸಮ್ಮತವಾದ ಪಾಠವು ಬೇರೆಯೇ ಇದೆ) ಇತಿ=ಎಂದು, ಪ್ರಕಾರಾಂತರೇಣ ಕಥಿತೇಸತಿ=ಬೇರೊಂದು~~ ರೀತಿಯಿಂದ ಹೇಳಲ್ಪಟ್ಟಾಗ, 'ಯದಿ=ಒಂದು ವೇಳೆ ತ್ವಂ=ನೀನು, ವ್ಯಾಸಕೃತಿಂ=ಶ್ರೀವೇದ ವ್ಯಾಸರ ಗ್ರಂಥವನ್ನು (ಶ್ರೀ ವೇದವ್ಯಾಸರು ರಚಿಸಿದ ಭಾಗವತದ ಸರಿಯಾದ ಪಾಠವನ್ನು) ವೇತ್ಥ=ತಿಳಿದಿದ್ದೀಯೇ ಆದರೆ, ತದಾ=ಆಗ, ಅತ್ರ ಏವ=ಈ ಭಾಗವತದಲ್ಲಿಯೇ, ಪಂಚಮೇ=ಐದನೆಯ, ಅಧ್ಯಾಯೇ=ಅಧ್ಯಾಯದಲ್ಲಿ (ಸ್ಕಂಧೇ=ಸ್ಕಂಧದಲ್ಲಿ) ಕಿಂಚಿದ್ವದ=ಸ್ವಲ್ಪ ಹೇಳು ಇತಿ=ಎಂದು, ಸಾಕ್ಷೇಪಂ=ಅಕ್ಷೇಪಪೂರ್ವಕವಾಗಿ ಸ್ವಗುರುಣಾ= ಅಚ್ಯುತಪ್ರೇಕ್ಷರಿಂದ ಉಕ್ತೇಸತಿ= ಹೇಳಲ್ಪಡಲಾಗಿ, ತಂ ಅಧ್ಯಾಯಂ ಪಂಚಮಸ್ಕಂಧದ ಆ ಅಧ್ಯಾಯವನ್ನು, ಸರ್ವಂ= ಸಂಪೂರ್ಣವನ್ನೂ, ಉಕ್ತ್ವಾ=ಹೇಳಿ, ಸ್ವಬುದ್ಧಿಂ=ತನ್ನ ಬುದ್ಧಿಯನ್ನು, ಪ್ರಕಾಶಿತವಾನ್=ಪ್ರಕಾಶಗೊಳಿಸಿದನು. ಇತಿ ಭಾವಃ=ಎಂದು ಅಭಿಪ್ರಾಯವು.

ಒಂದಾನೊಂದುದಿನ ಶ್ರೀ ಅಚ್ಯುತಪ್ರೇಕ್ಷಾಚಾರ್ಯರ ಸಮೀಪದಲ್ಲಿ ಐದಾರು ಮಂದಿ ಬ್ರಾಹ್ಮಣರು ಭಾಗವತವನ್ನು ಓದುತ್ತಿದ್ದಾಗ ಬೇರೆಬೇರೆ ಪಾಠಾಂತರಗಳನ್ನು ಓದಿದರು. ಆಗ ಶ್ರೀ ಪೂರ್ಣಪ್ರಜ್ಞಾಚಾರ್ಯರು ವೇದವ್ಯಾಸರಿಗೆ ಸಮ್ಮತವಾದ ಪಾಠವು ಹೀಗಿದೆ ಎಂದು ಹೇಳಿ ಆ ರೀತಿಯಾಗಿಯೇ ಶ್ಲೋಕವನ್ನು ಹೇಳಿದರು. ಆಗ ಅಚ್ಯುತಪ್ರೇಕ್ಷರು ನಿಮಗೆ ಜಗದ್ಗುರುಗಳಾದ ವೇದವ್ಯಾಸರ ಗ್ರಂಥ ಹೀಗೆಯೇ ಇದೆ ಎಂದು ತಿಳಿದಿದ್ದರೆ ಈ ಭಾಗವತ ಗ್ರಂಥದಲ್ಲಿಯೇ ಐದನೆಯ ಸ್ಕಂಧದ ಗದ್ಯಭಾಗವನ್ನು ಹೇಳಿರಿ ಎಂದಾಗ ಆಚಾರ್ಯರು ಯಾವ **ಪುಸ್ತಕಾಪೇಕ್ಷೆಯೂ ಇಲ್ಲದೆ** ಪಂಚಮಸ್ಕಂಧದ ಅಧ್ಯಾಯ ಸಮೂಹವನ್ನೇ ಕಂಠಪಾಠವಾಗಿ ಹೇಳಿದರು. ಅಲ್ಲಿದ್ದ **ಐದಾರು ಪುಸ್ತಕಗಳಲ್ಲಿ ಒಂದು** ಪುಸ್ತಕದ ಪಾಠಕ್ಕೆ ಅನುಗುಣವಾಗಿ ಆಚಾರ್ಯರು ಭಾಗವತದ ಅನೇಕ ಅಧ್ಯಾಯಗಳನ್ನೇ **ಹೇಳಿ ತಮ್ಮ** ಗುರುಗಳಿಗೂ ಅಲ್ಲಿ ಸೇರಿದ್ದ ಬ್ರಾಹ್ಮಣರಿಗೂ ತಮ್ಮ ಬುದ್ಧಿ ವೈಭವವನ್ನು ಪ್ರಕಾಶಗೊಳಿಸಿದರು. **(ಶ್ರೀ ಶುಕ ಉವಾಚ ಬಾಢಮುಕ್ತಂ** ಭಗವತ ಉತ್ತಮ ಶ್ಲೋಕಸ್ಯ ಶ್ರೀ ಮಚ್ಚರಣಾರವಿಂದ **ಮಕರಂದರಸೇ ಆದಿತಆವೇಶಿತಚೇತಸಃ ಇತ್ಯಾದಿ ಗದ್ಯಭಾಗ ಪಂ.**

ಸ್ಕಂಧ ಅಧ್ಯಾಯ ೧)

ಸಃ=ಅಂತಹ, ಋಜಗ್ರಣೀಃ=ಋಜವಃ=ಬ್ರಹ್ಮತ್ವಯೋಗ್ಯಾಜೀವಾಃ=ಋಜುಗಳೆಂದರೆ ಬ್ರಹ್ಮಪದವಿಗೆ ಯೋಗ್ಯರಾದ ಜೀವರು ತೇಷಾಂ=ಅವರಿಗೆ, ಅಗ್ರಣೀಃ=ಆದ್ಯಃ, ಅಗ್ರಣೀ ಎಂದರೆ ಆದ್ಯ ಮೊದಲನೆಯವನು ಎಂದು ಅರ್ಥ. ಮುಖ್ಯವಾಯುಃ ಇತಿಭಾವಃಮುಖ್ಯವಾಯು ಎಂದು ಅಭಿಪ್ರಾಯವು.

ಮಹ್ಯಂ=ನನಗೆ, ಶುಭದೃಶಂ=ಸಮೀಚೀನ ಜ್ಞಾನಂ=ಶುಭದೃಶ್ಯಂ ಎಂದರೆ ಒಳ್ಳೆಯ ಜ್ಞಾನವನ್ನು, ದಿಶತು= ದದಾತು=ಕೊಡಲಿ.

ದಿಶತು ಎಂಬಲ್ಲಿ ದಿಶಅತಿಸರ್ಜನೇ, ಅತಿಸರ್ಜನ (ಕೊಡುವುದು) ಎಂಬ ಅರ್ಥವುಳ್ಳ - ದಿಶ್ ಧಾತುವು. ಆಶಿಷಿಲೋಟ್ 'ಆಶಿಸ್' ಅಂದರೆ ನಮ್ಮ ಇಚ್ಛೆಯ ಪ್ರಕಟನೆಯಲ್ಲಿ ಲೋಟ್ ಲಕಾರ ಬಂದಿದೆ.

**ಅವತರಣಿಕಾ** - ಸುಮಧ್ವ ವಿಜಯದ ಐದನೆಯ ಸರ್ಗದ ೨೯ನೇಯ ಶ್ಲೋಕದವರೆಗಿನ ಅರ್ಥವನ್ನು ಈಗ ಒಂಭತ್ತನೆಯ ಶ್ಲೋಕದಿಂದ ಸಂಗ್ರಹಿಸಿ ಆಚಾರ್ಯರನ್ನು ಸ್ತೋತ್ರ ಮಾಡುತ್ತಾರೆ.

**ಸಾಕ್ಷಾದಾನಂದತೀರ್ಥೋಽನು ಮಿತಿಭಿರುರುಜಿದ್ಯೋಽನುಮಾತೀರ್ಥನಾಮಾ**
**ವಿದ್ಯಾಬ್ಧಿಂವಾದಿಸಿಂಹಂ ಸಪದಿ ವಿಜಿತವಾನ್ ದುಷ್ಟಭಾಷ್ಯಾಪನೋದೀ॥**
**ಅಚ್ಛೇದ್ಯೋಕ್ತಿಃ ಪ್ರಮೋದಂ ಪಿತುರಪಿಕೃತವಾನ್ ನರ್ಮಗರ್ಭಂ ಗುರೂಕ್ತ್ಯೋ,**
**ಭಾಷ್ಯಂಕರ್ತುಂಹ್ಯವೋಚತ್ ಪ್ರಿಯಸಖಯುತಯೋಃ ಸೂತ್ರಭಾವಂಸಮಾವ್ಯಾತ್ ॥೯॥**

**ಗೂಢಾಭಾವಪ್ರಕಾಶಿಕಾ ವ್ಯಾಖ್ಯಾ** – ಸಾಕ್ಷದಿತಿ। ಯಃ ಸಾಕ್ಷಾತ್ ಮುಖ್ಯತಯಾ, ಆನಂದತೀರ್ಥನಾಮಾ। ಅಯಂಭಾವಃ=ಅಚ್ಯುತಪ್ರೇಕ್ಷಃ ವೇದಾಂತ ವಿದ್ಯಾ ಸಾಮ್ರಾಜ್ಯಪಾಲನಾಯ ಏನಂ ವಾರಿಭಿಃ ಅಭಿಷಿಚ್ಯ ಆನಂದತೀರ್ಥೇತಿ ಸನ್ನಾಮ ಚಕಾರ ತನ್ನಾಮ ತಸ್ಯ ಅನ್ವರ್ಥಮಾಸೀತ್ । ತಥಾಹಿ - ಆನಂದಸ್ಯ ಪರಮಾತ್ಮನಃ ತೀರ್ಥಂ ಪಾತ್ರಂ. ~~ಆಶ್ರಯಃ ಇತಿಯಾವತ್.~~

**ಪುಣ್ಯಕ್ಷೇತ್ರ ತಥಾ ಪಾತ್ರೇ ತೀರ್ಥಂಸ್ಯಾತ್ ಪಟ್ಟನೇಽಪಿ ಚ' ಇತ್ಯಭಿಧಾನಾತ್,**
**ಆಸಮ್ಯಕ್ ಆನಂದಃ ಸುಖಂ ಯಸ್ಮಾತ್ ಸಃ ಇತಿ (ವಾ) ಆನಂದತೀರ್ಥಃ ಇತಿ.**
**ತೀರ್ಥಂ ಶಾಸ್ತ್ರಧ್ವರ ಕ್ಷೇತ್ರೋಪಾಯೋಪಾಧ್ಯಾಯಮಂತ್ರಿಷು' ಇತ್ಯಭಿಧಾನಾತ್,**

ಅನುಮಿತಿಭಿಃ ಅನುಮಾನೈಃ, ಉರುಜಿತ್, ಉರೂನ್ ಉದ್ಧತಾನ್ ಜಯತೇತಿ ಉರುಜಿತ್, ಅನುಮಾ ತೀರ್ಥನಾಮ ಅನುಮಾತೀರ್ಥಇತಿ ನಾಮಾ ಯಸ್ಯಸಃ ತಥೋಕ್ತಃ

ಕದಾಚಿದಚ್ಯುತ ಪ್ರೇಕ್ಷಸ್ಯ ಸಖಾ ಕಶ್ಚಿದ್ಯತಿಃ ತರ್ಕಕೋವಿದೈಃ ಬಹುಭಿಃ ಶಿಷ್ಯೈಃ ಪರಿವೃತಃ ಅಚ್ಯುತಪ್ರೇಕ್ಷ ಸಮೀಪಮಾಜಗಾಮ। ತಚ್ಛಿಷ್ಯಾಃ ಉದ್ಧತಾಃ ಸಂತಃ ಬಹೂನಿ ಅನುಮಾನಾನಿಪ್ರಯುಜ್ಯ ಪೂರ್ಣಬೋಧಂ ಜೇತುಂ ಐಚ್ಛನ್। ಪೂರ್ಣಪ್ರಜ್ಞಶ್ಚ ತಾನಿ ಅನುಮಾನಾನಿ ಪ್ರತ್ಯನುಮಾನೈರ್ನಿರಸ್ಯ ತಾನ್ ಸರ್ವಾನ್ ಜಿಗಾಯ॥ ತದಾ ಸರ್ವೇಜನಾಃ ಪೂರ್ಣಬೋಧಂ ಅನುಮಾತೀರ್ಥಮಾಹುರಿ ಭಾವಃ। ಕಿಂಚ ವಿದ್ಯಾಬ್ಧಿಂ ವಿದ್ಯಾಸಾಗರಾಖ್ಯಂ ವಾದಿಸಿಂಹಂ ವಾದಿಸಿಂಹನಾಮಾನಂಚ ಏತೌಪ್ರಚಂಡಕೋವಿದಾವಪಿ ಸಪದಿತತ್ ಕ್ಷಣಏವ ಜಿತವಾನ್। ಅಚ್ಛೇ ದ್ಯೋಕ್ತಿ ಅಚ್ಛೇದ್ಯಾಕೇನಾಪ್ಯದೂಷ್ಯೋಕ್ತಿಃ ಯಸ್ಯಸಃ ತಥಾಸನ್। ದುಷ್ಟಭಾಷ್ಯಾಪನೋದೀ। ದುಷ್ಟಸ್ಯಸಂಕರಸ್ಯ ಭಾಷ್ಯಂ ದುಷ್ಟಂಚತತ್ ಭಾಷ್ಯಂಚೇತಿವಾ। ತದಪನುದತೀತಿತಥೋಕ್ತಃ। ಕದಾಚಿತ್ ಸಂಸದಿ ಸಂಕರ ಭಾಷ್ಯಂ ವ್ಯಾಕುರ್ವನ್ ಭಾಷ್ಯಸ್ಯಸೂತ್ರಾಂಣಾಂಚ ಪರಸ್ಪರಾ ಸಂಬಂಧಂ ಪ್ರದರ್ಶ್ಯ ಬಹೂನಿದೂಷಣಾನ್ಯುಕ್ತ್ವಾ ಸ್ವಯಂ ಪ್ರಕಾರಾಂತರೇಣ ಸೂತ್ರಾರ್ಥಂ ವರ್ಣಯಾಮಾಸೇತಿ ಭಾವಃ। ಪಿತುರಪಿ ಸ್ವತಾತಸ್ಯ ಮಧ್ಯಗೇಹಭಟ್ಟಸ್ಯ ಕದಾಚಿತ್ ದ್ರಷ್ಟುಮಾಗತಸ್ಯ, ಪ್ರಮೋದಂ ಸಲ್ಲಾಪೈಃ ಸಂತೋಷಂ ಕೃತವಾನ್ ಇತಿಭಾವಃ

ನರ್ಮಗರ್ಭಂ ಲೀಲಾಗರ್ಭಂ ಯಥಾಸ್ಯಾತ್ ತಥಾ, (ಭಾಷ್ಯಂ) ಸೂತ್ರಭಾಷ್ಯಂ ಕರ್ತುಂ, ಗುರೂಕ್ತಃ ಗುರುಣಾ ಅಚ್ಯುತಪ್ರೇಕ್ಷಣ ಉಕ್ತಃ ಸೂತ್ರಾರ್ಥವಿಚ್ಛೇತ್ 'ಕುರುಭಾಷ್ಯಮಂಜಸಾ' ಇತ್ಯಾದಿ ಪ್ರಕಾರೇಣ ಉಕ್ತಃ

ಕದಾಚಿತ್ ಗುರುಣಾ ಸಹ ಲೀಲಾವಿವಾದೇಸತಿ ಪರಾಜಿತೇನ ತೇನ ಸಾಕ್ಷೇಪಂ ಶಕ್ತಶ್ಚೇತ್ ಸೂತ್ರ ಭಾಷ್ಯಂ ಕುರು ಇತ್ಯುಕ್ತಃ ಸನ್, ಗುರೂಕ್ತವಾಕ್ಯೇ ಆಕ್ಷೇಪಂ ಉಪೇಕ್ಷ್ಯ, 'ಕುರು' ಇತಿವಿಧಾನ ಮಾತ್ರಂ ಅಂಗೀಚಕಾರ ಇತಿಭಾವಃ

ಯಃ ಪ್ರಿಯಸಖಯತಯೇ, ಪ್ರಿಯಶ್ಚಾಸೌ ಸಖಾಚ ಪ್ರಿಯಸಖಃ ಸಚಾಸೌಯತಿಶ್ಚತಸ್ಮೈ, ಸೂತ್ರಭಾವಂ ಸೂತ್ರಾಣಾಂ ಬ್ರಹ್ಮಸೂತ್ರಾಣಾಂ ವೇದವ್ಯಾಸಾಭಿಮತ ಭಾವಂ, ಅಭಿಪ್ರಾಯಂ ಇತಿಯಾವತ್, ಅವೋಚತ್ ಉಕ್ತವಾನ್, ವಚಪರಿಭಾಷಣೇ ಲುಙ, ವಚಉಮ್ (7-4-20) ಇತಿ ಉಮಾಗಮಃ.

ಕದಾಚಿತ್ ಅಚ್ಯುತಪ್ರೇಕ್ಷಸ್ಯ ಶಿಷ್ಯಾಯ ಸ್ವಜ್ಯೇಷ್ಠಾಯ 'ಸೂತ್ರಭಾವಂ ತತ್ತ್ವತಃ ಮಹ್ಯಂಪ್ರದಿಶ' ಇತಿ ಸೌಹಾರ್ದೇನ ಯಾಚಮಾನಾಯ ಯತಯೇ ಸೂತ್ರಭಾವಂ ವರ್ಣಿತವಾನ್ ಇತಿಭಾವಃ.

ಸಃಪೂರ್ಣಭೋಧ ಮಾ, ಮಾಂ, 'ತ್ವಾಮೌ ದ್ವಿತೀಯಾಯಾಃ '8-1-23 ಇತಿ ಅಸ್ಮದೋ ಮಾದೇಶಃ, ಅವ್ಯಾತ್, ಅವತಾತ್ ಆಸಿಷಿಲಿಙ್ ॥೯॥

**ಪದಚ್ಛೇದ** – ಸಾಕ್ಷಾತ್, ಆನಂದತೀರ್ಥಃ, ಅನುಮಿತಿಭಿಃ, ಉರುಜಿತ್, ಯಃ ಅನುಮಾತೀರ್ಥ ನಾಮಾ, ವಿದ್ಯಾಬ್ಧಿ, ವಾದಿಸಿಂಹಂ, ಸಪದಿ, ವಿಜಿತವಾನ್, ದುಷ್ಟಭಾಷ್ಯಾಪನೋದೀ, ಅಚ್ಛೇದ್ಯೋಕ್ತಿಃ, ಪ್ರಮೋದಂ, ಪಿತುಃ, ಅಪಿ, ಕೃತವಾನ್, ನರ್ಮಗರ್ಭಂ, ಗುರೂಕ್ತಃ, ಭಾಷ್ಯಂ, ಕರ್ತುಂ, ಹಿ, ಅವೋಚತ್, ಸಃ ಮಾ ಅವ್ಯಾತ್.

**ಅನ್ವಯ** - ಯಃ ಸಾಕ್ಷಾತ್ ಆನಂದತೀರ್ಥನಾಮಾ, ಅನುಮುತಿಭಿಃ ಉರುಜಿತ್ ಅನುಮಾತೀರ್ಥನಾಮಾ, ವಿದ್ಯಾಬ್ಧಿಂ ವಾದಿಸಿಂಹಂ ಸಪದಿ ವಿಜಿತವಾನ್, ಅಚ್ಛೇದ್ಯೋಕ್ತಿಃಸನ್ ದುಷ್ಟಭಾಷ್ಯಾಪನೋದೀ, ಪಿತುರಪಿ ಪ್ರಮೋದಂ ಕೃತವಾನ್, ನರ್ಮಗರ್ಭಂ ಭಾಷ್ಯಂ ಕರ್ತುಂ ಗುರೂಕ್ತಃ ಪ್ರಿಯಸಖಯತಯೇ ಸೂತ್ರಭಾವಂ ಅವೋಚತ್ ಹಿ, ಸಃ ಮಾ ಅವ್ಯಾತ್.

**ಅನ್ವಯಾರ್ಥ** - ಯಃ=ಯಾರು ಸಾಕ್ಷಾತ್=ಮುಖ್ಯವಾಗಿ, ಆನಂದತೀರ್ಥ, ನಾಮಾ=ಆನಂದತೀರ್ಥರೆಂಬ ಹೆಸರು ಉಳ್ಳವರೋ, ಅನುಮಿತಿಭಿಃ=ಅನುಮಾನಗಳಿಂದ, ಉರುಜಿತ್=ಬಹಳ ಸಂಖ್ಯೆಯುಳ್ಳ ಉದ್ಧತರಾದ ತಾರ್ಕಿಕರನ್ನು ಜಯಿಸಿದವರಾಗಿ, ಅನುಮಾನತೀರ್ಥನಾಮಾ=ಅನುಮಾನತೀರ್ಥ ಎಂಬ ಹೆಸರುಳ್ಳವರಾಗಿ, ವಿದ್ಯಾಬ್ಧಿಂ=ಬುದ್ಧಿಸಾಗರನೆಂಬ ಪಂಡಿತನನ್ನೂ, ವಾದಿಸಿಂಹಂ=ವಾದಿಸಿಂಹನೆಂಬ ಪಂಡಿತನನ್ನು, ಸಪದಿ=ತತ್‌ಕ್ಷಣದಲ್ಲಿಯೇ, ವಿಜಿತವಾನ್=ಜಯಿಸಿದವರಾದರೋ, ಅಚ್ಛೇದ್ಯೋಕ್ತಃ (ಸನ್)=ಯಾರಿಂದಲೂ ಖಂಡಿಸಲು ಸಾಧ್ಯವಿಲ್ಲದ ಮಾತುಳ್ಳವರಾಗಿ, ದುಷ್ಟ =ದೋಷಪೂರ್ಣವಾದ (ಸಂಕರನ) ಭಾಷ್ಯಂ=ಭಾಷ್ಯವನ್ನು, ಅಪನೋದೀ=ಖಂಡಿಸಿ, ತಿರಸ್ಕರಿಸಿದವರಾಗಿ, ಪಿತುಃ ಅಪಿ=ತಂದೆಯಾದ ಮಧ್ಯಗೇಹಭಟ್ಟರಿಗೂ ಕೂಡ, ಪ್ರಮೋದಂ=ಸಂತೋಷವನ್ನು, ಕೃತವಾನ್=ವುಂಟುಮಾಡಿರುವ, ನರ್ಮಗರ್ಭಂ=ಆಕ್ಷೇಪ ಸಹಿತವಾಗಿ, ಭಾಷ್ಯಂ=ಸೂತ್ರ ಭಾಷ್ಯವನ್ನು ಕರ್ತುಂ=ಮಾಡುವುದಕ್ಕೆ ಗುರೂಕ್ತಃ=ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಂದ ಹೇಳಲ್ಪಟ್ಟವರಾಗಿ ಪ್ರಿಯಸಖಯತಯೇ=ಪ್ರೀತಿಯ ಸ್ನೇಹಿತನಾದ ಸನ್ಯಾಸಿಗೋಸ್ಕರ, ಸೂತ್ರಭಾವಂ=ಬ್ರಹ್ಮಸೂತ್ರಗಳ ಸರಿಯಾದ ತಾತ್ಪರ್ಯವನ್ನು ಅವೋಚತ್ ಹಿ=ಹೇಳಿದರಷ್ಟೇ. ಸ=ಇಂತಹ ಶ್ರೀಮದಾನಂದತೀರ್ಥರು, ಮಾ=ನನ್ನನ್ನು ಅವ್ಯಾತ್=ಕಾಪಾಡಲಿ.

**ತಾತ್ಪರ್ಯ** – ಶ್ರೀ ಪೂರ್ಣಪ್ರಜ್ಞರ ಪ್ರತಿಭಾವಿಶೇಷವನ್ನು ಕಂಡು ಆಶ್ಚರ್ಯಾನಂದಭರಿತರಾದ ಅಚ್ಯುತಪ್ರೇಕ್ಷರು ವೇದಾಂತ ಸಾಮ್ರಾಜ್ಯಸಿಂಹಾಸನವನ್ನು ಏರಲು, ಇವರೇ ಅರ್ಹರೆಂದು ನಿಶ್ಚಯಿಸಿ ಆನಂದತೀರ್ಥ ಎಂಬ ಸಾರ್ಥಕವಾದ ಹೆಸರನ್ನಿಟ್ಟು ಶಂಖದಲ್ಲಿ ನೀರನ್ನು ತುಂಬಿ ತಮ್ಮ ಆರಾಧ್ಯದೇವರು ಶಾಲಿಗ್ರಾಮಾದಿಗಳನ್ನೂ ಅವರ ತಲೆಯ ಮೇಲಿಟ್ಟು ಪಟ್ಟಾಭಿಷೇಕ ಮಾಡಿದರು. ಆನಂದರೂಪಿಯಾದ ಪರಮಾತ್ಮನಿಗೆ ಆಶ್ರಯರಾದುದರಿಂದ ಅಂದರೆ ಪರಮಾತ್ಮನ

ಸನ್ನಿಧಾನಪಾತ್ರರಾದುದರಿಂದ ಆ ಹೆಸರು ಸಾರ್ಥಕವಾಗಿತ್ತು, ಆನಂದಕರವಾದ ಶಾಸ್ತ್ರವನ್ನು ಹೇಳುತ್ತಿದ್ದರಿಂದಲೂ, ರಚನೆ ಮಾಡುವುದರಿಂದಲೂ ಆ ಹೆಸರು ಸಾರ್ಥಕವಾಗಿತ್ತು.

ಶ್ರೀಮದಾನಂದತೀರ್ಥರಿಗೆ ಆಶ್ರಮವಾದ ಸ್ವಲ್ಪ ಸಮಯದ ಅನಂತರ, ಒಂದುದಿನ ಅಚ್ಯುತಪ್ರೇಕ್ಷರ ಸ್ನೇಹಿತರಾದ ಒಬ್ಬ ಯತಿಗಳು ಅನೇಕ ಶಿಷ್ಯಸಹಿತರಾಗಿ ಅಲ್ಲಿಗೆ ಬಂದರು. ಆ ಯತಿಗಳ ಶಿಷ್ಯರು ತರ್ಕಶಾಸ್ತ್ರದಲ್ಲಿ ಕುಶಲರಾಗಿದ್ದರು. ಅವರು ಅಹಂಕಾರದಿಂದ ಅನೇಕ ಅನುಮಾನಗಳನ್ನು ಪ್ರಯೋಗಿಸಿ ಶ್ರೀ ಪೂರ್ಣಬೋಧಾಚಾರ್ಯರನ್ನು ಜಯಿಸಲು ಬಯಸಿದರು. ಶ್ರೀ ಪೂರ್ಣಪ್ರಜ್ಞಾಚಾರ್ಯರು ಆ ಅನುಮಾನಗಳನ್ನು ಪ್ರತ್ಯನುಮಾನಗಳಿಂದ ನಿರಾಕರಿಸಿ ಅವರೆಲ್ಲರನ್ನು ಜಯಿಸಿದರು. ಆಗ ಎಲ್ಲರೂ ಶ್ರೀ ಪೂರ್ಣಬೋಧರನ್ನು ಅನುಮಾನತೀರ್ಥರು ಎಂದು ಹೇಳಿ ಗೌರವಿಸಿದರು.

ಕೆಲವು ಸಮಯದ ನಂತರ ವಿದ್ಯಾಸಾಗರ ಮತ್ತು ವಾದಿಸಿಂಹ ಎಂಬ ಇಬ್ಬರು ಪ್ರಚಂಡ ಪಂಡಿತರು ಪ್ರಪಂಚದಲ್ಲಿರುವ ಎಲ್ಲಾ ಪಂಡಿತರನ್ನು ಜಯಿಸಿ, ಶ್ರೀ ಪೂರ್ಣಪ್ರಜ್ಞರ ಕೀರ್ತಿಯನ್ನು ಕೇಳಿ ಅವರನ್ನೂ ಜಯಿಸಬೇಕೆಂದು ಉಡುಪಿಗೆ ಬಂದರು. ಶ್ರೀ ಪೂರ್ಣಪ್ರಜ್ಞರು ಅವರಿಬ್ಬರನ್ನು ಕೂಡಲೇ ಜಯಿಸಿದರು. ಆಚಾರ್ಯರ ಮಾತುಗಳನ್ನು ಅವರಿಬ್ಬರೂ ಸ್ವಲ್ಪವೂ ಖಂಡಿಸಲಾರದೆ, ಅಲ್ಲಿಂದ ಪಲಾಯನ ಮಾಡಿದರು.

ಒಂದಾನೊಂದು ದಿನ ಪಂಡಿತರ ಸಭೆಯಲ್ಲಿ ಸಂಕರಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಾ, ಸೂತ್ರಗಳಿಗೂ ಭಾಷ್ಯಕ್ಕೂ ಪರಸ್ಪರ ಸಂಬಂಧವಿಲ್ಲ, ಮತ್ತು ಅನೇಕ ವಿರೋಧಗಳಿವೆ ಎಂದು ತೋರಿಸಿ ಅನೇಕ ದೋಷಗಳನ್ನು ಹೇಳಿದರು. ಅಷ್ಟೇ ಅಲ್ಲ ತಾವು ಸ್ವತಃ ಸೂತ್ರಗಳಿಗೆ ಸರಿಯಾದ ಅರ್ಥವನ್ನು ಹೇಳಿದರು.

ಒಂದಾನೊಂದು ದಿನ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೂ, ಆನಂದತೀರ್ಥರಿಗೂ ಸೂತ್ರಾರ್ಥ ವಿಚಾರದಲ್ಲಿ ವಿನೋದದ ವಿವಾದವು ಪ್ರಾರಂಭವಾಯಿತು. ಅಚ್ಯುತಪ್ರೇಕ್ಷಾಚಾರ್ಯರು ವಿವಾದದಲ್ಲಿ ಸೋತು ಹೋದಾಗ 'ನೀನು ಸರಿಯಾಗಿ ಸೂತ್ರಾರ್ಥವನ್ನು ಬಲ್ಲವನಾದರೆ ಸೂತ್ರಗಳಿಗೆ ಭಾಷ್ಯವನ್ನು ಬರೆ' ಎಂದು ಆಕ್ಷೇಪ ಪೂರ್ವಕವಾಗಿ ಹೇಳಿದರು. ಆಚಾರ್ಯರು ಗುರುಗಳ ಮಾತಿನಲ್ಲಿರುವ (ಬಲ್ಲವನಾದರೆ ಎಂಬ) ಆಕ್ಷೇಪಾಂಶವನ್ನು ಬಿಟ್ಟು 'ಸೂತ್ರ ಭಾಷ್ಯವನ್ನು ಮಾಡು' ಎಂಬ ವಿಧಿಯನ್ನು ಮಾತ್ರ ಅಂಗೀಕರಿಸಿ ಸೂತ್ರಗಳಿಗೆ ತನ್ನದೇ ಆದ ರೀತಿಯಿಂದ ಅರ್ಥ ಹೇಳುತ್ತಾ ಮುಖತಃ ಭಾಷ್ಯರಚನೆಯನ್ನೇ ಮಾಡುತ್ತಿದ್ದರು.

ಅಚ್ಯುತಪ್ರೇಕ್ಷರಿಗೆ ಆಚಾರ್ಯರಿಗಿಂತಲೂ ಹಿರಿಯರಾದ ಒಬ್ಬರು ಶಿಷ್ಯರಿದ್ದರು. ಅವರನ್ನು ಜ್ಯೇಷ್ಠಯತಿಗಳೆಂದೇ ಎಲ್ಲರೂ ಕರೆಯುತ್ತಿದ್ದರು. ಅವರು ಆಚಾರ್ಯರಲ್ಲಿ ಪ್ರೀತಿಸೌಹಾರ್ದದಿಂದ ಸೂತ್ರಗಳ ಸರಿಯಾದ ಅರ್ಥವನ್ನು ನನಗೆ ಹೇಳಿರಿ ಎಂದು ಆಚಾರ್ಯರನ್ನು ಕೇಳಿದಾಗ ಅವರು ಸೂತ್ರಭಾವವನ್ನು ಸರಿಯಾಗಿ ಅವರಿಗೆ ವಿವರಿಸಿ ಹೇಳಿದರು ಇಂತಹ ಪೂರ್ಣಬೋಧರು ನನ್ನನ್ನು ಕಾಪಾಡಲಿ ಎಂದು ಶ್ಲೋಕ ತಾತ್ಪರ್ಯ.

**ವಿಗ್ರಹ** – ಆನಂದಸ್ಯ (ಪರಮಾತ್ಮನಃ) ತೀರ್ಥಂ ಯಸ್ಮಾತ್‌ಸಃ ಆನಂದತೀರ್ಥಃ, ಆಸಮಂತಾತ್ ಆನಂದಃ ಯಸ್ಮಾತ್ ತತ್ ಆನಂದಂ, ಆನಂದಂ ತೀರ್ಥಂ ಯಸ್ಮಾತ್‌ಸಃ ಆನಂದತೀರ್ಥಃ, ಊರುನ್ ಜಯತೀತಿ ಉರುಜಿತ್, ಅನುಮಾತೀರ್ಥ ಇತಿನಾಮ ಯಸ್ಯ ಸಃ ಅನುಮಾತೀರ್ಥನಾಮಾ, ದುಷ್ಟಂ ಚ ತತ್ ಭಾಷ್ಯಂ ಚ ದುಷ್ಟಭಾಷ್ಯಂ, ದುಷ್ಟಭಾಷ್ಯಂ ಅಪನುದತೀತಿ ದುಷ್ಟಭಾಷ್ಯಾಪನೋದಿ, ಚೇತ್ತುಂ ಯೋಗ್ಯಾ ಛೇದ್ಯಾ, ನಛೇದ್ಯಾ ಅಚ್ಛೇದ್ಯಾ, ಅಚ್ಛೇದ್ಯಾ ಉಕ್ತಿಃ ಯಸ್ಯಸಃ ಅಚ್ಛೇದ್ಯೋಕ್ತಿಃ, ನರ್ಮಗರ್ಭೇಯಸ್ಮಿನ್ ಕರ್ಮಣಿ ತದ್ಯಥಾಸ್ಯಾತ್ ತಥಾ ನರ್ಮಗರ್ಭಂ, ಗುರುಣಾ ಉಕ್ತಃಗುರೂಕ್ತಃ, ಪ್ರಿಯಶ್ಚಾಸೌ ಸಖಾ ಚ ಪ್ರಿಯಸಖಃ, ಪ್ರಿಯಸಖಶ್ಚಾಸೌ ಯತಿಶ್ಚ ಪ್ರಿಯಸಖಯತಿಃ ತಸ್ಮೈ, ಸೂತ್ರಾಣಾಂಭಾವಃ ಸೂತ್ರಭಾವಃ ತಂ, ಮಾ ಎಂಬಲ್ಲಿ ತ್ವಾಮೌ ದ್ವಿತೀಯಾಯಾಃ ಎಂಬ ಸೂತ್ರಿದಿಂದ 'ಮಾ' ಆದೇಶ.

**ಕ್ರಿಯಾಪದ** – ಅವೋಚತ್ ಅವೋಚತಾಂ ಅವೋಚನ್.

ಅವೋಚತಃ ಅವೋಚತಂ ಅವೋಚತ
ಅವೋಚಂ ಅವೋಚಾವ ಅವೋಚಾಮ

ಬ್ರೂಞ್ ವ್ಯಕ್ತಾಯಾಂವಾಚಿ ವ್ಯಕ್ತಿವಾಗರ್ಥಕಾತ್ ಬ್ರೂಧಾತೋಃ ಸಕರ್ಮಕಾತ್ ಕರ್ತರಿ ಭೂತೇ ಲುಙ'ಬ್ರುವೋವಚಿಃ" ಇತಿ ವಚ್ ಆದೇಶಃ 'ವಚ್ ಉಮ್' ಇತಿ ಉಮಾಗಮಃ, ಅವ್ಯಾತ್ ಅವ್ಯಾಸ್ತಾಂ ಅವ್ಯಾಸುಃ

ಅವರಕ್ಷಣ ಗತಿಕಾಂತಿ ಪ್ರೀತಿ ತೃಪ್ತಿ ಅವಗಮ ಪ್ರವೇಶ ಶ್ರವಣ ಸ್ವಾಮ್ಯರ್ಥ ಯಾಚನಕ್ರಿಯಾ ಇಚ್ಛಾ ದೀಪ್ತಿ ಅವಾಪ್ತಿ-ಆಲಿಂಗನ-ಹಿಂಸಾದಾನ-ಭಾಗ-ವೃದ್ಧಿಷು (18 ಅರ್ಥಗಳು) ರಕ್ಷಣಾರ್ಥಕಾತ್ ಅವಧಾತೋಃ ಸಕರ್ಮಕಾತ್ ಆಶೀರ್ಲಿಙ್‌ಪ್ರಥಮ ಪುರುಷ ಏಕವಚನೇ ಅವ್ಯಾತ್ ಇತಿರೂಪಂ.

**ಪ್ರಯೋಗ** - ಆನಂದತೀರ್ಥಃ ಪ್ರಿಯಸಖಿಯತಯೇ ಸೂತ್ರಭಾವಂ ಅವೋಚತ್ (ಕರ್ತರಿ)
ಆನಂದತೀರ್ಥೇನ ಪ್ರಿಯಸಖಿಯತಯೇ ಸೂತ್ರಭಾವಃ ಅವಾಚಿ (ಕರ್ಮಣಿ)
ಸಃ ಮಾ ಅವ್ಯಾತ್ (ಕರ್ತರಿ) ತೇನ ಅಹಂ ಅವಿಷೀಯ (ಕರ್ಮಣಿ)

**ಯಾಮ್ಯಾಶಾಂಯಾನ್ ಪ್ರಭೋಕ್ತ್ರಾ, ಬಹುಫಲಸಮಿತೇಃ ಕ್ಷೀರಿಣೀಂ ಪ್ರೇಕ್ಷ್ಯಯಾಂತೀಂ,**
**ಸ್ಯಾನಂದೋರೇ ಚ ದೈತ್ಯಂ ಸಪದಿವಿಜಿತವಾನ್ ಫಾಲ್ಗುನಂ ತೀರ್ಥಮಾಪ್ತಃ।।**
**ಸೇತು ಚಾತ್ರಾಪಹಾಸ್ಯಂ, ಖಲಮಧಕೃತವಾನ್ ಸರ್ವಜಿದ್ರಂಗನಾಥಂ**
**ನತ್ವಾಯಾನ್ ವಿಶ್ವವಂದ್ಯೋ, ಹ್ಯುಪನದಿ ವಿಬುಧೌ ಕಸ್ಯವೇನ್ಮಾಂ ಸಧನ್ಯಃ ।।೧೦।।**

## ಗೂಢಭಾವಪ್ರಕಾಶಿಕಾ

ಯಾಮ್ಯಾಶಾ ಮಿತಿ (ಯಾಮ್ಯಾಂ ಆಶಾಂ) ಯಮಸಂಬಂಧಿನೀಂ ದಿಶಂ ದಕ್ಷಿಣ ದಿಶಂ ಪ್ರತಿ ಇತ್ಯರ್ಥಃ, ~~ಯಾನ್ ಗಚ್ಛನ್, ಬಹುಫಲಸಮಿತೇಃ ಬಹೂನಾಂ ಕದಲಿಫಲನಾಂ ಸಮಿತೇಃ ಸಮೂಹಸ್ಯ, (ಸಮೀತೇ ಇತಿ)~~ ಕರ್ಮಣಿಷಷ್ಠೀ, ಪ್ರಭೋಕ್ತಾ ಭಕ್ಷಕಃ ವಿಷ್ಣುಮಂಗಲಕ್ಷೇತ್ರೇ ಭಿಕ್ಷಾವಸನಾಕಾಲೇ, ಭಿಕ್ಷಾಪ್ರದಾತ್ರಾ ಪರೀಕ್ಷಕೇಣ ದತ್ತಾನಿ ದ್ವಿಶತಾಧಿಕಾನಿ ಕದಲೀಫಲಾನಿ ಭಕ್ಷಿತವಾನ್ ಇತಿಭಾವಃ ಯಾಂತೀ ಶೀಘ್ರಂ ಪ್ರವಹಂತೀಂ, ಕ್ಷೀರಿಣಿಂ ಪಯಸ್ವಿನೀಂ ನದೀಂ ಪ್ರೇಕ್ಷ್ಯ ದುಷ್ಟ್ವಾ, ಸ್ಯಾನಂದೋರೇ ಅನಂತಶಯನೇ, ದೈತ್ಯಂ ಕುದ್ಯಪುಸ್ತೂರಾಖ್ಯ ಕುಲೇ ಪುನರುತ್ಪನ್ನಂ ಸಂಕರಂ, ಸಪದಿ ತತ್‌ಕ್ಷಣೇಏವ ಜಿತವಾನ್, ಪಾಲ್ಗುನಂ ಫಲ್ಗುನೇನ ಅರ್ಜುನೇನ ಕೃತಂ ತೀರ್ಥಂ, ಕನ್ಯಾಕುಮಾರ್ಯಾಖ್ಯಂ ತೀರ್ಥಂ ಸೇತುಂ ಚ (ಆಪ್ತಃ, ಪ್ರಾಪ್ತಃ, ಸೇತ್ವಾದಿಕಂ ಪ್ರಾಪ್ತಃ, ತತ್ರ ತತ್ರ ತೀರ್ಥೇಷು ಸ್ನಾತಃ ಇತಿಭಾವಃ, ಅತ್ರಸೇತೌ ಖಲಂದುಷ್ಟಂ ತಮೇವ ಸಂಕರಂ ಅಪಹಾಸ್ಯಂ ಅಪಹಾಸವಿಷಯಂ ಕೃತವಾನ್. ಶ್ರೀಮದ್ಭಂವೇದಾದಿಕಂ ಸತ್ಯಜಗತ್ಕರ್ತೃತ್ವೇನ ಸರ್ವಜಿವೋತ್ತಮತ್ವೇನ (ಚ) ವಿಷ್ಣುಪರತಯಾ ವ್ಯಾಕುರ್ವಾಣಂ ದೃಷ್ಟ್ವಾ, ಕೋಪೇನ ಅಸ್ಯದಂಡಂ ಖಂಡಯಾಮಿ ಇತಿ ಬ್ರುವಂತಂ ಉಪಲಭ್ಯ, ದಂಡಂಖಂಡಯ ಇತ್ಯುಕ್ತ್ವಾ, ಖಂಡನೇ ಅಸಮರ್ಥಂ ತಂ ಸರ್ವಜನಾಪಹಾಸ್ಯಂ ವಿಧಾಯ ಜಿತವಾನ್ ಇತಿಭಾವಃ । ಸರ್ವಜಿತ್ ಪುನಃ ಅನ್ಯಾನ್ ಬಹೂನ್ ಜಯತೀತಿ । **ಅಥ ಸೇತೌ** ಚಾತುರ್ಮಾಸ್ಯ ಸಂಕಲ್ಪಾನಂತರಂ । ರಂಗನಾಥಂ ಶ್ರೀರಂಗ ಕ್ಷೇತ್ರಾಧಿಪತಿಂ ನತ್ವಾ, ವಿಶ್ವವಂದ್ಯಃ (ಸರ್ವೈಃ **ವಂದ್ಯಃಸ್ತುತ್ಯಃ** ಅಭಿವಾದ್ಯಶ್ಚ) ಸಃ ತು ಯಾನ್, ಉತ್ತರಾಂ ದಿಶಂ ಪ್ರತಿ ಗಚ್ಛನ್, ಯಃ ಶ್ರೀ ಮಧ್ವಃ ಉಪನದಿ ನದ್ಯಾಃ ಪಯಸ್ವಿನ್ಯಾಃ ಸಮೀಪೇ ಇತಿ ಭಾವಃ ಅವ್ಯಯಂ ವಿಭಕ್ತಿ - ಇತ್ಯಾದಿನಾ ಸಾಮಿಪ್ಯಾರ್ಥೇ ಅವ್ಯಯೀಭಾವಃ ನದೀ ಪೌರ್ಣಮಾಸ್ಯಾಗ್ರಹಾಯಣೀಭ್ಯಃ ಇತಿ ಸಮಾಂಸಾಂತಸ್ಯ ವಿಭಾಷಿತತ್ವಾತ್ ಉಪನದಿ ಇತಿ ಸಾಧು. ವಿಭುಧೌಕಸಿ ವಿಭುಧಸ್ಯ ದೇವಸ್ಯ ಓಕಸಿ ಆಲಯೆ, ಪಯಸ್ವಿನೀ ನದೀ ಸಮೀಪಸ್ಥೇ ಕಸ್ಮಿಂಶ್ಚಿದ್ದೇವಾಲಯೇ ತಸ್ಥಾವಿತಿ ಶೇಷಃ । ತಂ ಪ್ರಾಪ್ಯ ತತ್ರ ಅವಸತ್ ಇತಿಭಾವಃ (ಧನ್ಯಃ) ಸಮಧ್ವಃ ಮಾಂ ಅವತು (ರಕ್ಷತು) ಅವರಕ್ಷಣೇ ಲೋಟ್ ।।೧೦।।

**ಪದಚ್ಛೇದ** – ಯಾಮ್ಯಾಶಾಂ, ಯಾನ್, ಪ್ರಭೋಕ್ತಾ, ಬಹುಫಲಸಮಿತೇಃ, ಕ್ಷೀರಿಣೀಂ, ಪ್ರೇಕ್ಷ್ಯ,ಯಾಂತೀಂ, ಸ್ಯಾನಂದೋರೇ, ಚ, ದೈತ್ಯಂ ಸಪದಿ, ವಿಜಿತವಾನ್, ಫಾಲ್ಗುನಂ, ತೀರ್ಥಂ, ಆಪ್ತಃ, ಸೇತುಂ, ಚ ಅತ್ರ ಅಪಹಾಸ್ಯಂ ಖಲಂ, ಅಥ, ಕೃತವಾನ್, ಸರ್ವಜಿತ್, ರಂಗನಾಥಂ, ನತ್ವಾ, ಯಾನ್, ವಿಶ್ವವಂಧ್ಯಃ ಹಿ, ಉಪನದಿ, ವಿಬುಧೌಕಸಿ, ಅವೇತ್, ಮಾಂ, ಸಃ, ಧನ್ಯಃ.

**ಅನ್ವಯ** - ಯಾಮ್ಯಾಶಾಂ ಯಾನ್ ಬಹುಫಲಸಮಿತೇಃ ಪ್ರಭೋಕ್ತಾ. ಯಾಂತೀಂ ಕ್ಷೀರಿಣೀಂ ಪ್ರೇಕ್ಷ್ಯ, ಚ ಸ್ಯಾನಂದೋರೇ ದೈತ್ಯಂ ಸಪದಿ ವಿಜಿತವಾನ್ ಫಾಲ್ಗುನಂ ತೀರ್ಥಂ ಸೇತುಂಚ ಆಪ್ತಃ, ಅತ್ರ ಖಲಂ ಅಪಹಾಸ್ಯಂ ಕೃತವಾನ್, ಸರ್ವಜಿತ್, ಅಥ ರಂಗನಾಥಂ ನತ್ವಾ ವಿಶ್ವವಂದ್ಯಃ ಸತುವಾನ್ ಯಃ ಉಪನದಿ ವಿಭುಧೌಕಸಿ (ತಸ್ಥೌ) ಧನ್ಯಃ ಸಃ (ಮಧ್ವಃ) ಮಾಂ ಅವೇತ್.

**ಅನ್ವಯಾರ್ಥ** - ಯಾಮ್ಯಾಶಾಂ=ದಕ್ಷಿಣ ದಿಕ್ಕನ್ನು ಕುರಿತು, ಯಾನ್=ಹೋಗುತ್ತಿರುವ, ಬಹುಫಲಸಮಿತೇಃ= ಬಹು=ಅನೇಕವಾದ, ಫಲ=ಬಾಳೆಹಣ್ಣುಗಳ, ಸಮೀತೇಃ=ಸಮೂಹದ, ಪ್ರಭೋಕ್ತಾ=ಊಟ ಮಾಡುವವರಾದ, ಯಾಂತೀಂ= ವೇಗವಾಗಿ ಹರಿಯುತ್ತಿರುವ, ಕ್ಷೀರಿಣೀಂ=ಪಯಸ್ವಿನೀ ನದಿಯನ್ನು, ಪ್ರೇಕ್ಷ್ಯ=ನೋಡಿ, ಚ=ಮತ್ತು, ಸ್ಯಾನಂದೋರೇ= ಅನಂತಶಯನದಲ್ಲಿ, ದೈತ್ಯಂ=ಅಸುರನಾದ ಸಂಕರನನ್ನು, ಸಪದಿ=ಕೂಡಲೇ, ವಿಜಿತವಾನ್=ಜಯಿಸಿದ, ಫಾಲ್ಗುನಂತೀರ್ಥಂ= ಕನ್ಯಾಕುಮಾರೀ ತೀರ್ಥವನ್ನು ಸೇತುಂ ಚ=ರಾಮ ಸೇತುವನ್ನು, ಆಪ್ತಃ=ಹೊಂದಿದ, ಅತ್ರ=ಈ ರಾಮ ಸೇತುವಿನಲ್ಲಿ, ಖಲಂ=ದುರ್ಜನನಾದ ಸಂಕರನನ್ನು, ಅಪಹಾಸ್ಯಂ=ಅಪಹಾಸಕ್ಕೆ ಗುರಿಯದವನನ್ನಾಗಿ, ಕೃತವಾನ್=ಮಾಡಿರುವ, ಸರ್ವಜಿತ್=ಎಲ್ಲರನ್ನು ಜಯಿಸಿರುವ, ಅಥ=ಅನಂತರ, ರಂಗನಾಥಂ=ಶ್ರೀರಂಗನಾಥಸ್ವಾಮಿಯನ್ನು, ನತ್ವಾ=ನಮಸ್ಕರಿಸಿ, ವಿಶ್ವವಂದ್ಯಃ=ಎಲ್ಲರಿಂದಲೂ ಸ್ತೋತ್ರ ಮಾಡಿಸಿಕೊಳ್ಳಲು, ಮತ್ತು ನಮಸ್ಕಾರ ಮಾಡಿಸಿಕೊಳ್ಳಲು ಯೋಗ್ಯರಾದ, (ಸತು) ಯಾನ್=ಆ ಮಧ್ವಾಚಾರ್ಯರು ಉತ್ತರ ದಿಕ್ಕಿಗೆ ಹೋಗುವವರಾಗಿ, ಯಃ=ಯಾವ ಮಧ್ವಾಚಾರ್ಯರು, ಉಪನದಿ=(ಪಯಸ್ವಿನೀ) ನದಿಯ ಸಮೀಪದಲ್ಲಿ, ವಿಭುಧೌಕಸಿ=ದೇವಾಲಯದಲ್ಲಿ (ತಸ್ಥೌ=ವಾಸಿಸಿದರೋ) ಧನ್ಯಃ=ಧನ್ಯರಾದ, ಸ [ಮಧ್ವಃ]=ಆ ಶ್ರೀಮಧ್ವಾಚಾರ್ಯರು, ಮಾಂ=ನನ್ನನ್ನು, ಅವೇತ್=ರಕ್ಷಿಸಲಿ.

---

**ತಾತ್ಪರ್ಯ**–– ಶ್ರೀ ಮಧ್ವಾಚಾರ್ಯರು ತಮ್ಮ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರ ಜೊತೆಗೆ ಉಡುಪಿಯಿಂದ ದಕ್ಷಿಣ ದಿಕ್ಕಿಗೆ, ದಿಗ್ವಿಜಯ ಯಾತ್ರೆಗಾಗಿ ಹೊರಟರು. ಅಲ್ಲಿ ವಿಷ್ಣು ಮಂಗಲಕ್ಷೇತ್ರದಲ್ಲಿ ಅವರು ವಾಸ ಮಾಡುತ್ತಿದ್ದಾಗ ಒಬ್ಬ ಗೃಹಸ್ಥನು ಅವರಿಗೆ ಭಿಕ್ಷೆ ಮಾಡಿಸಿದನು. ಶ್ರೀ ಮಧ್ವಾಚಾರ್ಯರು ಬಹಳ ಭೋಜನ ಶಕ್ತಿಯುಳ್ಳವರೆಂದು ಕೇಳಿ ತಿಳಿದಿದ್ದ ಗೃಹಸ್ಥನು, ಆಚಾರ್ಯರ ಭಿಕ್ಷೆಯ ಕೊನೆಯಲ್ಲಿ ಅವರಿಗೆ ದೊಡ್ಡದಾದ ಅನೇಕ ಬಾಳೆಹಣ್ಣುಗಳನ್ನು ಅರ್ಪಿಸಿದರು. ಇನ್ನೂರಕ್ಕಿಂತಲೂ ಹೆಚ್ಚಾಗಿದ್ದ ಆ ಬಾಳೆಹಣ್ಣುಗಳನ್ನು ಆಚಾರ್ಯರು ಅನಾಯಾಸವಾಗಿ ಸ್ವೀಕರಿಸಿದರು. ಅವರ ಉದರದಲ್ಲಿ ಯಾವ ವೃದ್ಧಿಯೂ ಕಾಣಿಸಲಿಲ್ಲ. ಅವರಿಗೆ ಯಾವ ತೊಂದರೆಯೂ ಆಗಲಿಲ್ಲ. ಶ್ರೀ ಅಚ್ಯುತ ಪ್ರೇಕ್ಷಾಚಾರ್ಯರು ಏಕಾಂತದಲ್ಲಿ ನೀವು ಈ ರೀತಿ ಅಮಾನುಷವಾದ ಭೋಜನವನ್ನು ಹೇಗೆ ಮಾಡುತ್ತೀರಿ ಸತ್ಯವಾಗಿ ಹೇಳಿರೆಂದು ಕೇಳಿದಾಗ ಆಚಾರ್ಯರು ನನ್ನ ಉದರದಲ್ಲಿ ನನ್ನ ಹೆಬ್ಬೆಟ್ಟಿನ ಗಾತ್ರದ ಜಠರಾಗ್ನಿ.ಯಿದೆ. ಅದರ ಬಲದಿಂದ ನಾನು ಈ ರೀತಿ ಆಹಾರವನ್ನು ಸ್ವೀಕರಿಸುತ್ತೇನೆ ಎಂದರು.

ವಿಷ್ಣುಮಂಗಲ ಕ್ಷೇತ್ರದಿಂದ ಮುಂದೆ ಆಚಾರ್ಯರು ಒಬ್ಬರೇ ಮುಂದೆ ದಿಗ್ವಿಜಯ ಯಾತ್ರೆ ಮಾಡುತ್ತಾ ಹೊರಟರು. ದಾರಿಯಲ್ಲಿ ಎದುರಾದ ಪಯಸ್ವಿನೀ ನದಿಯನ್ನು ನೋಡಿ ಮುಂದೆ ಅಲ್ಲಿ ಅವತಾರ ಮಾಡಲಿರುವ ದುರ್ಗೆಯನ್ನು ಸ್ಮರಿಸಿದರು.

ಆಚಾರ್ಯರು ಅಲ್ಲಿಂದ ಮುಂದೆ ಸಂಚಾರ ಮಾಡುತ್ತಾ ಅನಂತಶಯನಕ್ಕೆ ಹೋದರು. ಅಲ್ಲಿ ಅಪ್ಪಾಂಶುನೂತನ ಕುಲದಲ್ಲಿ (ಕುದಿ ಪುಸ್ತೂರಾಯ) ಪುನಃ ಜನ್ಮ ತಾಳಿಬಂದಿರುವ ಸಂಕರನು ಆಚಾರ್ಯರನ್ನು ಎದುರಿಸಿದನು. ಆಚಾರ್ಯರು ಅವನನ್ನು ಸೋಲಿಸಿದರು. ಬ್ರಹ್ಮಸೂತ್ರಗಳ ಅರ್ಥವನ್ನು ಸಭೆಯಲ್ಲಿ ವಿವರಿಸಿ ಹೇಳಿದರು.

ಅಲ್ಲಿಂದ ಆಚಾರ್ಯರು ಕನ್ಯಾಕುಮಾರೀ ಕ್ಷೇತ್ರ ಮತ್ತು ಸೇತು ರಾಮೇಶ್ವರ ಕ್ಷೇತ್ರಕ್ಕೆ ಬಂದು ತೀರ್ಥಸ್ನಾನವನ್ನು ಮಾಡಿ ಅಲ್ಲಿಯೇ ಚಾತುರ್ಮಾಸ್ಯಕ್ಕೆ ಕುಳಿತರು. ವೇದಗಳು ಪರಮಾತ್ಮನು ಸರ್ವೋತ್ತಮನೆಂದೂ, ಸತ್ಯಜಗತ್ಕರ್ಮನೆಂದೂ, ಅನಂತಕಲ್ಯಾಣ ಗುಣಪರಿಪೂರ್ಣನೆಂದೂ ಹೇಳುತ್ತವೆ ಇತ್ಯಾದಿ ಪ್ರವಚನ ಮಾಡುತ್ತಿದ್ದ ಆಚಾರ್ಯರನ್ನು ನೋಡಿ ಆಗ ಭೂಲೋಕದಲ್ಲಿ ಕುದಿಪುಸ್ತರಾಯ ವಂಶದಲ್ಲಿ ಹುಟ್ಟಿದ್ದ ದೈತ್ಯನಾದ ಸಂಕರನು, ಆಚಾರ್ಯರ ಮಾತನ್ನು ಖಂಡಿಸಲಾರದೆ ಕೋಪದಿಂದ ನಿಮ್ಮ ದಂಡವನ್ನು ತುಂಡರಿಸುವೆನೆಂದು ಪ್ರತಿಜ್ಞೆ ಮಾಡಿದ್ದನು. ಸೇತು ರಾಮೇಶ್ವರದಲ್ಲಿ ಪುನಃ ಎದುರಾದ ಆ ದೈತ್ಯನನ್ನು ಕುರಿತು ನೀನು ಸಮರ್ಥನಾದರೆ ನಮ್ಮ ದಂಡವನ್ನು ಖಂಡಿಸು ಎಂದು ತಮ್ಮ ದಂಡವನ್ನು ತೋರಿಸುತ್ತಾ ಹೇಳಿದರು. ಅವನು ಆ ಕಾರ್ಯವನ್ನು ತಾನು ಮಾಡಲು ಧೈರ್ಯವಿಲ್ಲದೆ ತನ್ನ ಜೊತೆಗಾರರನ್ನು ಕುರಿತು ಇವರ ದಂಡವನ್ನು ಖಂಡಿಸಿರಿ ಎಂದು ಹೇಳಿದನು. ಆದರೂ ಯಾರೂ ಮುಂದೆ ಬರಲಿಲ್ಲ, ಆಗ ಯತಿಯು ಅವಮಾನಿತನಾಗಿ ಸುಮ್ಮನಾದನು, ಜನರ ಅಪಹಾಸ್ಯಕ್ಕೆ ಗುರಿಯಾದನು.

ಚಾತುರ್ಮಾಸ್ಯವ್ರತಸಮಾಪ್ತಿಯ ಅನಂತರದಲ್ಲಿ ಆಚಾರ್ಯರು ಅಲ್ಲಲ್ಲಿ ಎದುರಾದ ಎಲ್ಲಾ ವಾದಿಗಳನ್ನು ಜಯಿಸುತ್ತಾ ಶ್ರೀರಂಗಕ್ಷೇತ್ರಕ್ಕೆ ಬಂದರು. ಅಲ್ಲಿ ಶ್ರೀರಂಗನಾಥ ಸ್ವಾಮಿಯನ್ನು ನಮಸ್ಕರಿಸಿ, ಎಲ್ಲರಿಂದಲೂ ವಂದಿತರಾಗಿ ಶ್ರೀರಂಗದಿಂದ ಉತ್ತರದಿಕ್ಕಿಗೆ ಅಭಿಮುಖವಾಗಿ ಪ್ರಯಾಣ ಮಾಡುತ್ತಾ ಪುನಃ ಪಯಸ್ವಿನೀ ನದಿಯ ತೀರಕ್ಕೆ ಬಂದರು. ಅಲ್ಲಿರುವ ಒಂದು ದೇವಾಲಯದಲ್ಲಿ ಆಚಾರ್ಯರು ತಂಗಿದರು. ಹೀಗೆ ಅದ್ಭುತ ಮಹಿಮಾವಂತರಾದ ಶ್ರೀ ಮಧ್ವಾಚಾರ್ಯರು ನನ್ನಲ್ಲಿ ರಕ್ಷಿಸಲಿ.

**ವಿಗ್ರಹ**-- ಯಮಸ್ಯ ಇಯಂಯಾಮ್ಯಾ, ದಿತ್ಯದಿತ್ಯಾದಿತ್ಯ ಪತ್ಯುತ್ತರಪದಾಣ್ಣ್ಯಃ 4-1-85 ಎಂಬ ಸೂತ್ರದಲ್ಲಿರುವ 'ಯಾಮಾಚ್ಚ' ಎಂಬ ಕಾಶಿಕಾ ವಾಕ್ಯದಿಂದ 'ಣ್ಯ' ಪ್ರತ್ಯಯಃ ಯಾಮ್ಯಾಚಸಾ ಆಶಾಚಯಾಮ್ಯಾಶಾತಾಂ, ಯಾನ್ ಯಾಪ್ರಾಪಣೆ ಶತೃಪ್ರತ್ಯಯ, ಬಹೂನಿ ಚತಾನಿ ಫಲಾನಿಚ ಬಹುಫಲಾನಿ ಬಹುಫಲಾನಾಂ ಸಮಿತಿಃ ತಸ್ಯಾಃ, ಕ್ಷೀರಂ ಜಲಂ ಅಸ್ಯಾಃ ಅಸ್ತಿತಿ ಕ್ಷೀರಿಣೀ=ಪಯಸ್ವಿನೀ, ನೀರಕ್ಷಿರಾಂಬುಶಂಬರಂ, ಅಮರ, ದಿತ್ಯಾಃ ಅಪತ್ಯಂ ದೈತ್ಯಃ ದಿತ್ಯದಿತ್ಯಾದಿತ್ಯ ಪತ್ಯುತ್ತರಪದಾಣ್ಣಃ 4-1-85 ಎಂಬ ಸೂತ್ರದಿಂದ ಣ್ಯಪ್ರತ್ಯಯ. ಫಲ್ಗುನ ಸ್ಯೇದಂ ತೇನಕೃತಂ ಫಾಲ್ಗುನಂ ತೀರ್ಥಂ ಅಪಹಾಸಯಿತುಂಯೋಗ್ಯಃ ಅಪಹಾಸ್ಯಃ ತಂ ಸರ್ವಾನ್ ಜಯತೀತಿ ಸರ್ವಜಿತ್, ವಂದಿತುಂ ಯೋಗ್ಯಃ ವಂದ್ಯಃ, ವಿಶ್ವೈಃ ವಂಧ್ಯಃ, ನದ್ಯಾಃ ಸಮೀಪಂ ಉಪನದಿ ಅವ್ಯಯಂ ವಿಭಕ್ತಿ ಸಮೀಪ 2-1-6 ಇತ್ಯಾದಿ ಸೂತ್ರದಿಂದ ಅವ್ಯಯಿಭಾವ ಸಮಾಸ. ನದೀಪೌರ್ಣಮಾಸ್ಯಾಗ್ರಹಾಯಣೀಭ್ಯಃ 5-4-110 ಈ ಸೂತ್ರದಿಂದ ನದೀ ಮುಂತಾದ ಶಬ್ದಗಳಿಗೆ ವಿಕಲ್ಪದಿಂದ ಅವ್ಯಯೀಭಾವದಲ್ಲಿ ಟಚ್ ಪ್ರತ್ಯಯ ಹೇಳಿದ್ದರಿಂದ ಇಲ್ಲಿ ಉಪನದಿ ಎಂಬ ರೂಪವೂ ಸಾಧು, (ಉಪನದಂ, ಉಪಪೌರ್ಣ ಮಾಸಂ, ಉಪಪೌರ್ಣಮಾಸಿ, ಉಪಾಗ್ರಹಾಯಣಂ, ಉಪಾಗ್ರಹಾಯಣಿ) ವಿಬುಧಸ್ಯ ದೇವಸ್ಯ ಓಕಃ ವಿಬುಧೌಕಃ ದೇವಾಲಯಃ ವಿಬುಧಾನಾಂ ಓಕಃ ಆಶ್ರಯಃ ಸಭಾ ವಿಬುಧೌಕಃ ವಿದ್ವತ್ಸಭಾ, ಓಕಃ ಸದ್ಮನಿಜಾಶ್ರಯೇ ಇತಿಕ್ರೋಶಃ, ಧನಂ ಸಫಲತಾಂ ಲಬ್ಧಾ ಪ್ರಾಪ್ತಃ ಧನ್ಯಃ, ಧನಗಣಂ ಲಭ್ಧಾ 4-4-84 ಎಂಬ ಸೂತ್ರದಿಂದ ಯತ್ ಪ್ರತ್ಯಯ.

**ಕ್ರಿಯಾಪದ** - ಅವೇತ್ ಅವೇತಾಂ ಅವೇಯುಃ, ಅವೇಃ ಅವೇತಂ ಅವೇತ, ಅವೇಯಂ ಅವೇವ ಅವೇಮ ಅವರಕ್ಷಣ ಇತ್ಯಾದ್ಯರ್ಥಕಾತ್ ಧಾತೋಃ (ಪರಸ್ಮೈಪದಿನಃ) ಸಕರ್ಮಕಾತ್ ಕರ್ತರಿ ವಿಧಿಲಿಙ್ ಪ್ರ.ಪು.ಏ.

೧ ಲಟ್ ಅವತಿ, ೨ ಲಿಟ್ ಆವಅವತುಃ ಆವುಃ ೩ ಲುಟ್ ಅವಿತಾ ೪ ಅವಿಷ್ಯತಿ ೫ ಅವತು ೬ ಆವೇತ್ ೭ ಅವೇತ್ ೮ ಅವ್ಯಾತ್ ೯ಆವೀತ್ ೧೦ ಆವಿಷ್ಯತ್.

**ಪ್ರಯೋಗ** ಸಃ ಮಾಂ ಅವೇತ್ ಕರ್ತರಿ ಅಹಂ ತೇನ ಅವ್ಯೇಯ ಕರ್ಮಣಿ.

**ಶ್ಲೋಕ- ವಿಶ್ವಾದೀನಾಂ ಶತಾರ್ಥಪ್ರವಚನಚತುರೋದಾನ ಸೂಕ್ತಾರ್ಥವಾದೀ**
**ದಿವ್ಯಾಜ್ಞಾನಪ್ರಾಕಾಶೀ ಸಕಲಜಿದಖಿಲಜ್ಞಾಭಿದಃ ಪ್ರಾಪ್ತರೂಪ್ಯಃ।**

**ಭಿಮೋ ವಾ ಭೀಮಸಂಧಃ ಖಲಕುಲದಮನೇ ಗೀತಿಕಾಭಾಷ್ಯಿಕಾರೀ**
**ಗುರ್ವರ್ಚೀ ಯಾನುದೀಚೀಂ ಮಮ ಮನಸಿಲಸೇತ್ತಿರ್ಥಶೋಧಿ ಸಮುಧ್ವಃ ।।೧೧।।**

**ಗೂಢಭಾವ ಪ್ರಕಾಶಿಕಾ ವ್ಯಾಖ್ಯಾ** - ವಿಶ್ವಾದೀನಾಂ ವಿಶ್ವಂ ವಿಷ್ಣುರ್ವಷಟ್ಕಾರ ಇತ್ಯಾದಿ ಸಹಸ್ರನಾಮಗತ ವಿಶ್ವಾದಿಪಾದಾನಾಂ ಇತ್ಯರ್ಥಃ ಶತರ್ಥಾಪ್ರವಚನ ಚತುರಃ (ಶತಂ) ಶತಸಂಖ್ಯಾಕಾಃ ಯೇ ಅರ್ಥಾಃ ತೇಷಾಂ ಪ್ರವಚನೇ ವ್ಯಾಖ್ಯಾನೇ ಚತುರಃ ಕುಶಲಃ। ಇದಮಾಕೂತಮ್। ಪಯಸ್ವಿನೀಮನೀಪಸ್ಥ ದೇವಾಲಯಾವಸ್ಥಾನಸಮಯೇ ಅಧೀತಷಡಂಗವೇದಾಃ ವಿಪ್ರಾಃ ತದರ್ಥಂ ಜಿಜ್ಞಾಸವಃ ಸಂತಃ ಪೂರ್ಣಬೋಧಂ ಆಪ್ಯ ಋಕ್‌ಶಾಖಾಯಂ ಕಸ್ಯಚಿತ್ ಸೂಕ್ತಸ್ಯ ಅರ್ಥಂ ಅಪ್ರಾಕ್ಷುಃ। ತತ್ ಸೂಕ್ತಂ ಮಧ್ವೋ ವಿಷ್ಣುಪರತಯಾ ವ್ಯಾಚಖ್ಯೌ । ತತ್ ದೃಷ್ಟ್ವಾ ವಿಪ್ರಾಃ ಅನ್ಯಪರತಾಂ ಮನ್ಯಮಾನಾ ಪ್ರತ್ಯವತಸ್ಥಿರೇ.

**ಮಧ್ವಶ್ಚ** - ತ್ರಯೋರ್ಥಾಃಸರ್ವವೇದೇಷು ದಶಾರ್ಥಾಃ ಸರ್ವಭಾರತೇ। ವಿಷ್ಣೋರ್ನಾಮಸಹಸ್ರಂತು ನಿರಂತರಶತಾರ್ಥಕಂ॥ ಇತಿವತನಂ ಪಠಿತ್ವಾ ಅನ್ಯಪರತ್ವಮಪ್ಯನುಮೇನೇ। ತದಾವಿಪ್ರೈರಾಶ್ಚರ್ಯವದ್ಭಿಃ ಕಥಂ ಸಹಸ್ರನಾಮ್ನಾಂ ಶತಾರ್ಥತ್ವಂ? ತರ್ಹಿವರ್ಣಯ' ಇತ್ಯುಕ್ತೇ ಭಗವಾನ್ (ಶತಾರ್ಥತ್ವಂ) ವರ್ಣಯಾಮಾಸೇತಿ. ತತ್ಪ್ರಕಾರಶ್ಚ ಮಧ್ವವಿಜಯಟೀಕಾದಿತೋಽ ವಗಂತವ್ಯಃ । ದಾನಸೂಕ್ತಾರ್ಥವಾದೀ ಅನ್ನದಾನ ಪ್ರಸಂಸಾಕಾರಿ ಸೂಕ್ತಾರ್ಥಂ ವದತೀತಿ ಸಃ ತಥಾ । ಸ್ಥಲಾಂತರೇ ಕೈಶ್ಚಿದ್ವಿಪ್ರೈಃ ಶ್ರೀಮಧ್ವಂಪರೀಕ್ಷಮಾಣೈಃ

'ನವಾ ಉದೇವಾಃ ಕ್ಷುಧಮಿದ್ವಧಂ ದದುರುತಾಶಿತಮು ಪಗಚ್ಛಂತಿಮೃತ್ಯವಃ।' ಉತೋರಯಿಃ ಪೃಣ ತೋನೋಪದಸ್ಯತ್ಯುತಾಪೃಣನ್ಮರ್ಡಿತಾರಂ ನವಿಂದತೇ । ಋಗ್ವೇದ ಅಷ್ಟಕ ೮ ಆಧ್ಯಾಯ ೬ ವರ್ಗ ೨೨) ಇತ್ಯಾದಿ ಸೂಕ್ತಾರ್ಥೇಪೃಷ್ಟೇ ತದರ್ಥಂ ವರ್ಣಿತವಾನಿತಿಭಾವಃ

ಕಿಂಚದಾನಸೂಕ್ತಸ್ಯ ಕನ್ಯಕಾಯೈ ಇಂದ್ರಕರ್ತೃಕ ಕಾಂತಿದಾನ ಪ್ರತಿಪಾದಕ ಸೂಕ್ತಸ್ಯ ಅರ್ಥವಾದೀ (ಇತ್ಯರ್ಥಃ) ಪುನಃ ಸಭಾಂತರೇ ಕೈಶ್ಚಿದ್ವಿಪ್ರೈಃ ಕನ್ಯಾ ೩ ವಾರವಾಯತೀಸೋಮಮಪಿಸ್ರುತಾವಿದತ್ । ಅಸ್ತಂ ಭರಂತ್ಯಬ್ರವೀದಿಂದ್ರಾಯಸುನವೈತ್ವಾ ~~ಶಕ್ರಾಯ ಸುನವೈತ್ವಾ॥ (ಋಗ್ವೇದ ಅಷ್ಟಕ ೬ ಅಧ್ಯಾಯ ೬ ವರ್ಗ ೧೪ ಇತ್ಯಾದಿ ಸೂಕ್ತಾರ್ಥೇ ಪೃಷ್ಟೇ ಪೂರ್ಣಬೋಧಃ~~ ಕನ್ಯಾಯಾ ದತ್ತಂ ಸೋಮರಸಂ ಪೀತ್ವಾ ತಾಂ ಸೂರ್ಯಸದೃಶ ಕಾಂತಿಮತೀಂ ಚಕಾರ ಇತ್ಯಾದ್ಯರ್ಥಮೂಚೇ ಇತಿಭಾವಃ। ದಿವ್ಯ ಮಲೌಕಿಕಂ ಅತ್ಯಾಶ್ಚರ್ಯಕರಮಿತಿಯಾವತ್ ತಚ್ಚ ತಜ್ಞಾನಂ ಚ ಪ್ರಕಾಶಯತೀತಿ ಸಃ ತಥಾ ತಾಚ್ಛೀಲಿಕೋ, ಣಿನಿಃ । ಅಯಂ ಭಾವಃ, ಸ್ವೇನೋಕ್ತೇ ದಾನ ಸೂಕ್ತಾರ್ಥೇ ವಿಪ್ರೇಷು ವಿವದಮಾನೇಷುಸತ್ಸು 'ಅತ್ರಕಶ್ಚಿದ್ ವಿಪಶ್ಚಿದ್ ಆಯಾಸ್ಯತಿ, ತತಃ ಸಂವಾದಂ ಕುರುತ ಇತ್ಯುಕ್ತ್ವಾ ಸ್ವಯಂ ನಿರ್ಗತಃ । ಸಃ ವಿಪಶ್ಚಿದ್ ಆಗತ್ಯ ತಥೈವ ಉಕ್ತವಾನ್ । ತದಾಸರ್ವೇಮಧ್ವಸ್ಯ ಅತೀತಾ ನಾಗತ ಸರ್ವವಿಷಯ ಜ್ಞಾನಂ ಅಸ್ತಿತಿ ಮೇನಿರೇ ಇತಿ.

ಸಕಲಜಿತ್ ಸಕಲಾನ್ ವೇದಶಾಸ್ತ್ರವಿದಃ ಜಯತೀತಿ ಸಃ ತಥೋಕ್ತಃ, ಅಖಿಲಜ್ಞಾಭಿದಃ ಅಖಿಲಜ್ಞೋಽಸೇತಿ ಸರ್ವೈರುಚ್ಯಮಾನಃ ಪ್ರಾಪ್ತರೂಪ್ಯಃ ರೂಪ್ಯಪೀಠಪುರಂ ಪ್ರಾಪ್ತಃ, (ರೂಪ್ಯಂ ಪ್ರಾಪ್ತಃ) ಪ್ರಾಪ್ತರೂಪ್ಯಃ ಪ್ರಾಪ್ತವನ್ನೇ ಚೇತಿ ಸಮಾಸಃ, ತತ್ರ (ತತ್ರ) ಸಭಾಸು ಸ್ವಜ್ಞಾನಂ ಪ್ರಕಾಶ್ಯ ಸರ್ವಾನ್ ವಿಜಿತ್ಯ ಸರ್ವೈಃ ವಿಶ್ವಜ್ಞೋಽಸೇತಿ ಸ್ತೂಯಮಾನಃ ಸನ್ ಕ್ರಮೇಣ ರೂಪ್ಯಪೀಠಂ ಪ್ರಾಪ್ತವಾನ್ ಇತಿಭಾವಃ । ಖಲಕುಲದಮನೇ, ಖಲಾನಾಂ ದುರ್ವಾದೀನಾಂ ಕುಲಸ್ಯ ವೃಂದಸ್ಯ, ದಮನೇ ಪರಾಜಯೇ ಭಿಮೋವಾ ಭೀಮಸೇನಃ ಇವ, ಉಪಮಾಯಾಂ ವಿಕಲ್ಪೇವಾ ಇತ್ಯಮರಃ, ಭಿಮಸಂಧಃ, ಭೀಮಾ ಭಯಂಕರೀ ಸರ್ವಾನ್ ದುರ್ವಾದಿನಃ ಜೇಷ್ಯಾಮಿ ಇತ್ಯೇವಂರೂಪಾ, ಸಂಧಾಪ್ರತಿಜ್ಞಾಯಸ್ಯಸಃ ತಥೋಕ್ತಃ ತಾದೃಶಃ ಸನ್, ಗೀತಿಕಾಭಾಷ್ಯಕಾರೀ, ಗೀತಿಕಾಯಾಃ ಭಗವದ್ಗೀತಿಕಾಯಾಃ, ಸ್ವಾರ್ಥೇಕಃ, ಭಾಷ್ಯಂ ಕರೋಂತೀತಿ ಸಃತಥಾ, ಗುರ್ವರ್ಚೀ ಗುರುಂ ಅಚ್ಯುತಪ್ರೇಕ್ಷಂ ಅರ್ಚಯತಿ ಪೂಜಯತೀತಿ ಸಃ ತಥಾ । ಗೀತಾಭಾಷ್ಯಂಕೃತ್ವಾ **ಅಚ್ಯುತಪ್ರೇಕ್ಷಾ**ಯದತ್ವಾ ತಂ ಸಂಪೂಜ್ಯ ಬದರಿಕಾಶ್ರಮಂ ಗಮಿಷ್ಯಾಮಿ ಇತ್ಯೇವಂ ಸಂಪ್ರಾರ್ಥ್ಯ ಅನುಜ್ಞಾಂಗೃಹಿತವಾನ್

ಇತಿಭಾವಃ। ಉದೀಚಿಂ ಉತ್ತರಾಂದಿಶಂ ಪ್ರತಿ ಯಾನ್ ಗಚ್ಛನ್, ತೀರ್ಥಶೋಧೀ, ತೀರ್ಥಾನಿ ಶೋಧಯತೀತಿ ಸಃ ತಥಾ । ಮಾರ್ಗೇ ತತ್ರ ತತ್ರ ತೀರ್ಥೇಷು ಸ್ನಾತ್ವಾ, ತಾನಿ ಪವಿತ್ರೀ ಕುರ್ವಾಣಃ ಇತಿ ಭಾವಃ । ಸಃ ಏವಂ ವಿಧಚರಿತೋ ಮಧ್ವಃ ಮಮ ಮನಸಿ ಲಸೇತ್, ಲಸಕಾಂತೌ ಭಾಯತ್ ಲಸಶ್ಲೇಷಣ ಕ್ರಿಡನಯೋಃ (ಆಶಿಷಿ ಲಿಙ್೧೧)

**ಪದಚ್ಛೇದ** - ವಿಶ್ವಾದೀನಾಂ, ಶತಾರ್ಥಪ್ರವಚನಚತುರಃ ದಾನಸೂಕ್ತಾರ್ಥವಾದೀ, ದಿವ್ಯಜ್ಞಾನಪ್ರಕಾಶೀ, ಸಕಲಜಿತ್, ಅಖಿಲಜ್ಞಾಭಿದಃ, ಪ್ರಾಪ್ತರೂಪ್ಯಃ, ಭೀಮಃ ವಾ, ಭೀಮಸಂಧಃ, ಖಲಕುಲದಮನೇ ಗೀತಿಕಾಭಾಷ್ಯಕಾರೀ, ಗುರ್ವರ್ಚೀ, ಯಾನ್, ಉದೀಚೀಂ, ಮಮ, ಮನಸಿ, ಲಸೇತ್, ತೀರ್ಥಶೋಧೀ, ಸಃ ಮಧ್ವಃ,

**ಅನ್ವಯ** - ವಿಶ್ವಾದೀನಾಂ ಶತಾರ್ಥಪ್ರವಚನಚತರಃ ದಾನಸೂಕ್ತಾರ್ಥವಾದೀ, ದಿವ್ಯಜ್ಞಾನಪ್ರಕಾಶೀ ಸಕಲಜಿತ್ ಅಖಿಲಜ್ಞಾಭಿಧಃ ಪ್ರಾಪ್ತರೂಪ್ಯಃ, ಖಲಕುಲದಮನೇ, ಭಿಮೋ, ವಾ, ಭೀಮಸಂಧಃ, ಗೀತಿಕಾಭಾಷ್ಯಕಾರೀ, ಗುರ್ವರ್ಚೀ, ಉದೀಚೀಂ, ಯಾನ್, ತೀರ್ಥಶೋಧೀ, ಸಃ, ಮಧ್ವಃ, ಮಮ, ಮನಸಿ, ಲಸೇತ್,

**ಅನ್ವಯಾರ್ಥ** – ವಿಶ್ವಾದಿನಾಂ=ಶ್ರೀ ವಿಷ್ಣುಸಹಸ್ರನಾಮದಲ್ಲಿರುವ ವಿಶ್ವ ಮುಂತಾದ ಪದಗಳಿಗೆ, ಶತಾರ್ಥ ಪ್ರವಚನ ಚತುರಃ=ನೂರು ಅರ್ಥಗಳನ್ನು ವ್ಯಾಖ್ಯಾನಿಸುವುದರಲ್ಲಿ ಕುಶಲರಾದ, ದಾನಸೂಕ್ತ=ಅನ್ನದಾನ ಪ್ರಶಂಸೆಯನ್ನು ಮಾಡುವ 'ನವಾ ಉದೇವಾಃ' ಇತ್ಯಾದಿ ಸೂಕ್ತದ, ಅರ್ಥವಾದೀ=ಅರ್ಥವನ್ನು ಹೇಳಿದಂತಹ ಮತ್ತು ದಾನಸೂಕ್ತ=ಕನ್ಯಕೆಗೆ ಇಂದ್ರನು ಕಾಂತಿದಾನ ಮಾಡಿದ ಕನ್ಯಾ ॐ ವಾರವಾಯತೀ ಎಂಬ ಸೂಕ್ತದ ಅರ್ಥವನ್ನು ಹೇಳಿದಂತಹ, ದಿವ್ಯಜ್ಞಾನ= ಅಲೋಕಿಕವಾದ ಜ್ಞಾನವನ್ನು, ಪ್ರಕಾಶಿ=ಪ್ರಕಟಗೊಳಿಸಿರುವ, ಸಕಲಜಿತ್=ವೇದಶಾಸ್ತ್ರಜ್ಞರಾದ ಎಲ್ಲಾ ವಾದಿಗಳನ್ನೂ ಜಯಿಸಿದ, ಅಖಿಲಜ್ಞಾಭಿಧಃ=ನೀವು ಸರ್ವಜ್ಞರು ಎಂದು ಎಲ್ಲರಿಂದಲೂ ಹೊಗಳಿಸಿಕೊಳ್ಳಲ್ಪಟ್ಟ ಹೆಸರುಳ್ಳ, ಪ್ರಾಪ್ತರೂಪ್ಯಃ= ರಜತಪೀಠಪುರಕ್ಕೆ ಉಡುಪಿಗೆ ಹಿಂತಿರುಗಿ ಬಂದಿರುವ, ಖಲಕುಲದಮನೇ=ಖಲ=ದುರ್ವಾದಿಗಳ ಕುಲ=ಸಮೂಹದ, ದಮನೇ=ಸೋಲಿಸುವ ವಿಷಯದಲ್ಲಿ, ಭೀಮಃವಾ=ಭೀಮಸೇನದೇವರಂತೆ, ಭೀಮಸಂಧಃ=ಭಯಂಕರವಾದ ಪ್ರತಿಜ್ಞೆಯುಳ್ಳ, ಗೀತಿಕಾಭಾಷ್ಯಕಾರೀ =ಭಗವದ್ಗೀತೆಗೆ ಭಾಷ್ಯವನ್ನು ಮಾಡಿರುವ, ಗುರ್ವರ್ಚೀ=ಗುರುಗಳಾದ ಅಚ್ಯುತ ಪ್ರೇಕ್ಷಾಚಾರ್ಯರನ್ನು ಪೂಜಿಸಿರುವ, ಉದೀಚೀಂ ಉತ್ತರ ದಿಕ್ಕನ್ನು ಕುರಿತು, ಯಾನ್=ಹೋಗುತ್ತಿದ್ದ ತೀರ್ಥೋಶೋಧೀ= ತನ್ನ ಸ್ನಾನದಿಂದ ತೀರ್ಥಕ್ಷೇತ್ರಗಳನ್ನು ಪವಿತ್ರವಾಗಿ ಮಾಡಿದ, ಸ=ಮಧ್ವಃ= ಅಂತಹ ಶ್ರೀ ಮಧ್ವಾಚಾರ್ಯರು, ಮಮ ನನ್ನ, ಮನೆಸಿ=ಮನಸಿನಲ್ಲಿ ಲಸೇತ್=ಶೋಭಿಸಲಿ.

**ತಾತ್ಪರ್ಯ** - ಶ್ರೀ ಮಧ್ವಾಚಾರ್ಯರು ದಕ್ಷಿಣ ದೇಶದ ದಿಗ್ವಿಜಯವನ್ನು ಪೂರೈಸಿ ರಜತಪೀಠ ಪುರದ ಕಡೆಗೆ ಉತ್ತರ ದಿಕ್ಕಿಗೆ ಅಭಿಮುಖವಾಗಿ ಬರುತ್ತಾ ಪಯಸ್ವಿನೀ ನದಿಯ ತೀರದಲ್ಲಿರುವ ಒಂದು ದೇವಾಲಯದಲ್ಲಿ ಸ್ವಲ್ಪ ಸಮಯ ತಂಗಿದರು. ಆಗ ಮಹಾಪುರುಷ ಲಕ್ಷಣ ಸಂಪನ್ನರಾದ, ಅಲೌಕಿಕಪ್ರತಿಭಾಪೂರ್ಣರಾದ ಆಚಾರ್ಯರನ್ನು ನೋಡಲು ಅನೇಕ ಜನರು ಬಂದು ಸೇರಿದರು. ಆಗ ಸಾಂಗ ವೇದಾಧ್ಯಯನ ಮಾಡಿರುವ ಶಾಸ್ತ್ರಜ್ಞರಾದ ಅನೇಕ ಮಂದಿ ಬ್ರಾಹ್ಮಣರೂ ಅಲ್ಲಿ ಬಂದು ಸೇರಿದ್ದರು. ಅವರಲ್ಲಿ ಶ್ರೇಷ್ಠನಾದ ಒಬ್ಬ ವಿದ್ವಾಂಸನು, ಉಳಿದೆಲ್ಲ ಪಂಡಿತರ ಸಮ್ಮತಿಯಿಂದ ಋಕ್‌ಶಾಖೆಯ ಐತರೇಯದಲ್ಲಿರುವ ಒಂದು ಸೂಕ್ತವಾದ ಅರ್ಥವನ್ನು ಕೇಳಿದನು. ಆಚಾರ್ಯರು ಆ ಸೂಕ್ತವನ್ನು ಲಕ್ಷಣಶಾಸ್ತ್ರವನ್ನು ಅನುಸರಿಸಿ ಸ್ಫುಟವಾಗಿ ಹೇಳಿ ಅದಕ್ಕೆ ವಿಷ್ಣುಪರವಾದ ಅರ್ಥವನ್ನು ಹೇಳಿದರು.

ಆದರೆ ಅಲ್ಲಿದ್ದ ವಿದ್ವಾಂಸರು ಈ ಸೂಕ್ತಕ್ಕೆ ನೀವು ಹೇಳಿದ ಅರ್ಥವಲ್ಲ, ಬೇರೆ ಅರ್ಥವಿದೆ, ಎಂದು ವಾದಿಸುತ್ತಾ ಆ ಸೂಕ್ತಕ್ಕೆ ಬೇರೊಂದು ಅರ್ಥವನ್ನು ಹೇಳಿದರು. ಶ್ರೀಮಧ್ವಾಚಾರ್ಯರು **"ಎಲ್ಲಾ ವೇದಗಳಿಗೂ ಮೂರು ಅರ್ಥಗಳಿವೆ. ಭಾರತದ ಪ್ರತಿಯೊಂದು ಶ್ಲೋಕಕ್ಕೂ ಹತ್ತು ಅರ್ಥಗಳಿವೆ. ಭಾರತಾಂತರ್ಗತವಾದ ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರದ ಪ್ರತಿಯೊಂದು ಶಬ್ದಕ್ಕೂ ಒಂದು ನೂರು ಅರ್ಥಗಳಿವೆ"** ಎಂದು ಹೇಳಿದರು. **"ತ್ರಯೋರ್ಥಾಃಸರ್ವವೇದೇಷು ದಶಾರ್ಥಾಃ ಸರ್ವಭಾರತೇ । ವಿಷ್ಣೋರ್ನಾಮಸಹಸ್ರಂತು ನಿರಂತರ ಶತಾರ್ಥಕಂ"**

ಎಂಬ ಮಾತನ್ನೂ ಅದರ ಅರ್ಥವನ್ನೂ ಆಚಾರ್ಯರು ಹೇಳಿ ಈ ಕಾರಣದಿಂದ ನಾನು ಪಠಿಸಿದ ಸೂಕ್ತಕ್ಕೆ ನಾನು ಹೇಳಿದ ಅರ್ಥವೂ ನೀವು ಹೇಳಿದ ಅರ್ಥವೂ ಕೂಡುತ್ತದೆ. ಎಂದು ಹೇಳಿದಾಗ, ಅಲ್ಲಿದ್ದ ಮಹಾ ಪಂಡಿತರಾದ ಬ್ರಾಹ್ಮಣರು ಆಶ್ಚರ್ಯಪಟ್ಟು, 'ಸಹಸ್ರನಾಮದ ಪ್ರತಿಯೊಂದು ನಾಮಕ್ಕೂ ನೂರು ಅರ್ಥಗಳಿರುವುದಾದರೆ ನೀವು ವಿಶ್ವಾದಿನಾಮಗಳಿಗೆ ಕೆಲವಕ್ಕಾದರೂ ನೂರು ಅರ್ಥಗಳನ್ನು ಹೇಳಿರಿ ಎಂದು ಕೇಳಿಕೊಂಡರು. ಆಚಾರ್ಯರು 'ವಿಶ್ವ' ಎಂಬ ಮೊದಲನೆಯ ನಾಮಕ್ಕೆ ನೂರು ಅರ್ಥಗಳನ್ನು ಹೇಳಿ ಅವರನ್ನು ಆಶ್ಚರ್ಯಗೊಳಿಸಿದರು. ಹೀಗೆ ವಿಶ್ವ ವಿಷ್ಣುವಷಟ್ಕಾರ, ಇತ್ಯಾದಿ ಸಹಸ್ರ ನಾಮಗಳಿಗೂ ನೂರು ಅರ್ಥಗಳನ್ನು ಹೇಳುವುದರಲ್ಲಿ ಆಚಾರ್ಯರು ಅತ್ಯಂತ ಚತುರರಾಗಿದ್ದರು.

ಪಯಸ್ವಿನೀ ನದಿಯ ತೀರದ ಆ ದೇವಾಲಯದಿಂದ ಆಚಾರ್ಯರು ಕೇರಳ ದೇಶದಲ್ಲಿಯೇ ಇರುವ ಮತ್ತೊಂದು ದೇವಾಲಯಕ್ಕೆ ಬಂದರು. ಅಲ್ಲಿ ಸೇರಿದ್ದ ಮಹಾವಿದ್ವಾಂಸರಾದ ಬ್ರಾಹ್ಮಣರು ಋಗ್ವೇದದಲ್ಲಿರುವ ದಾನಸೂಕ್ತದ ಅರ್ಥವನ್ನು ಕೇಳಿದರು.

ಋಗ್ವೇದ ೮ನೇ ಅಧ್ಯಾಯದ ೨೨, ೨೩ ನೇ ವರ್ಗಗಳಲ್ಲಿ ಒಂಭತ್ತು (೯) ಋಕ್ಕುಗಳಲ್ಲಿ ದಾಸಸೂಕ್ತ ಎಂಬ ಸೂಕ್ತವಿದೆ. ನವಾ ಉ ದೇವಾಃಕ್ಷುಧ ಮಿದ್ವಧಂ ದದುರುತಾಶಿತ ಮುಪಗಚ್ಛಂತಿ ಮೃತ್ಯವಃ । ಉತೋರಯಿಃ ಪೃಣತೋ ನೋಪದಸ್ಯತ್ಯುತಾಪೃಣನ್ ಮರ್ಡಿತಾರಂ ನ ವಿಂದತೆ (ಎಂದು ಮೊದಲನೆಯ ಋಕ್ಕು)

ಮತ್ತೊಂದು ಸಭೆಯಲ್ಲಿ ಪಂಡಿತರು ಇಂದ್ರನು ಒಬ್ಬಳು ಕನ್ನಿಕೆಗೆ ಕಾಂತಿಯನ್ನು ಕೊಟ್ಟನು ಎಂಬ ಅರ್ಥ ಬರುವ ಕನ್ಯಾಸೂಕ್ತದ ಅರ್ಥವನ್ನು ಕೇಳಿದರು. ಆಚಾರ್ಯರು ಆ ಸೂಕ್ತಕ್ಕೂ ಸರಿಯಾದ ಅರ್ಥವನ್ನು ಹೇಳಿದರು.

(ಋಗ್ವೇದ ಅಷ್ಟಕ ೬ ಅಧ್ಯಾಯ ೬ ವರ್ಗ ೧೪ರಲ್ಲಿ ೭ ಋಕ್ಕುಗಳುಳ್ಳ ಕನ್ಯಾಸೂಕ್ತ ಎಂಬ ಸೂಕ್ತವಿದೆ. ಅದರ ಮೊದಲನೆಯ ಋಕ್ಕು ಹೀಗಿದೆ. ಕನ್ಯಾ ೩ ವಾರವಾಯತೀ ಸೋಮಮಪಿಸುತಾವಿದತ್ । ಅಸ್ತಂ ಭರಂತ್ಯ ಬ್ರವೀಂದಿಂದ್ರಾಯಸುನವೈತ್ವಾ ಶಕ್ರಾಯಸುವವೈತ್ವಾ ॥ ) ಈ ಸೂಕ್ತದ ಅರ್ಥವನ್ನು ಪಂಡಿತರು ಕೇಳಿದಾಗ ಶ್ರೀಮಧ್ವಾಚಾರ್ಯರು ಇಂದ್ರನು ಕನ್ಯೆಯು ಕೊಟ್ಟ ಸೋಮರಸವನ್ನು ಕುಡಿದು ಅವಳಿಗೆ ಸೂರ್ಯನಿಗೆ ಸಮಾನರಾದ ಕಾಂತಿಯನ್ನು ಕೊಟ್ಟನು ಇತ್ಯಾದಿ ಅರ್ಥವನ್ನು ಹೇಳಿದರು.

ಅಪಾಲಾಮಿಂದ್ರಃ ತ್ರಿಷ್ಪೂತ್ವೀ ಅಕೃಣೋತ್ ಸೂರ್ಯತ್ವಚಂ (ಇಂದ್ರನು ಕನ್ಯೆಗೆ ಕಾಂತಿದಾನ ಮಾಡಿದ ಸೂಕ್ತ) ಇತ್ಯಾದಿಯಾಗಿರುವ ಆ ದಾನಸೂಕ್ತದಲ್ಲಿರುವ ಅಪಾಲಾ ಶಬ್ದಕ್ಕೆ ಆಚಾರ್ಯರು 'ಅತಿತರುಣಿ' ಎಂದು ಅರ್ಥವನ್ನು ಹೇಳಿದರು. ಆಗ ಅಲ್ಲಿಯ ಬಾಹ್ಮಣರು ಅಪಾಲಾಶಬ್ದಕ್ಕೆ ಕುಷ್ಟರೋಗವುಳ್ಳವಳು ಎಂದು ಅರ್ಥ. ನೀವು ಹೇಳಿದ ಅರ್ಥವಲ್ಲ ಎಂದು ಪ್ರಮಾಣವಿಲ್ಲದೆ ವಿವಾದಮಾಡಲಾರಂಭಿಸಿದರು. ಆಚಾರ್ಯರು ಇಲ್ಲಿಗೆ ಒಬ್ಬ ವಿದ್ವಾಂಸನು ಸ್ವಲ್ಪ ಹೊತ್ತಿನಲ್ಲಿಯೇ ಬರುವನು. ನೀವು ಅವರನ್ನು ಕೇಳಿ ನಾವು ಹೇಳಿದ ಅರ್ಥಕ್ಕೆ ಪ್ರಮಾಣ ಸಂಮ್ಮತಿ ಇದೆಯೋ ಇಲ್ಲವೋ ಎಂದು ತಿಳಿದುಕೊಳ್ಳಿರಿ ಎಂದು ಹೇಳಿ ತಾವು ಬೇರೆ ಸ್ಥಳಕ್ಕೆ ಹೊರಟು ಹೋದರು. ಸ್ವಲ್ಪ ಹೊತ್ತಿನಲ್ಲಿಯೇ ಆ ಸ್ಥಳಕ್ಕೆ ಆಚಾರ್ಯರು ಹೇಳಿದ ಲಕ್ಷಣವುಳ್ಳ ವಿದ್ವಾಂಸನು ಬಂದು 'ಅಪಾಲಾ' ಎಂಬ ಶಬ್ದಕ್ಕೆ ಆಚಾರ್ಯರು ಹೇಳಿದ ಅರ್ಥವನ್ನೇ ಹೇಳಿದನು. ಆಗ ಎಲ್ಲಾ ಪಂಡಿತರೂ ಕೂಡ 'ಶ್ರೀ ಮಧ್ವಾಚಾರ್ಯರಿಗೆ ಭೂತ ಭವಿಷ್ಯತ್‌ಗಳ ಎಲ್ಲಾ ವಿಷಯಗಳ ಜ್ಞಾನವಿದೆ. ಇವರು ಸರ್ವಜ್ಞರು ಎಂದು ತಿಳಿದರು.

ಹೀಗೆ ಆಚಾರ್ಯರು ಅಲ್ಲಲ್ಲಿ ಅನೇಕಾನೇಕ ಪ್ರಸಿದ್ಧ ವಿದ್ವಾಂಸರು ಸೇರಿರುವ ಸಭೆಗಳಿಗೆ ಹೋಗಿ ಅಲ್ಲಿ ತಮ್ಮ ದಿವ್ಯಜ್ಞಾನವನ್ನು ಪ್ರಕಾಶಗೊಳಿಸಿ, ಅಲ್ಲಿದ್ದ ಪಂಡಿತರನ್ನೆಲ್ಲಾ ಜಯಿಸಿ 'ನೀವು ಸರ್ವಜ್ಞರು ನಿಮಗೆ ಸಮಾನರಾದ ಪಂಡಿತರೇವಣ್ಯಾರಿಲ್ಲ, ಎಂದು ಹೊಗಳಿಸಿಕೊಂಡರು. ಹೀಗೆ ದಿಗ್ವಿಜಯ ಮಾಡುತ್ತಾ ಆಚಾರ್ಯರು ಪುನಃ ರಜತಪೀಠಪುರಕ್ಕೆ ಹಿಂತಿರುಗಿದರು.

'ದ್ರೌಪದೀದೇವಿಯರಿಗೆ ಅವಮಾನ ಮಾಡಿದ ದುಶ್ಶಾಸನ ದುರ್ಯೋಧನಾದಿಗಳನ್ನು ದಂಡಿಸುತ್ತೇನೆ' ಎಂದು ಭೀಮಸೇನದೇವರು ಪ್ರತಿಜ್ಞೆ ಮಾಡಿದಂತೆ, ಬ್ರಹ್ಮಸೂತ್ರ, ಉಪನಿಷತ್ತು, ಭಗವದ್ಗೀತಾ ಮುಂತಾದ ಸಚ್ಛಾಸ್ತ್ರಗಳಿಗೆ ಅಪಾರ್ಥ ಮಾಡಿದ ದುರ್ವಾದಿಗಳನ್ನು ಜಯಿಸುವೆನು. ಅವರು ಮಾಡಿರುವ ಅರ್ಥಗಳನ್ನು ಖಂಡಿಸಿ ಬ್ರಹ್ಮಸೂತ್ರಾದಿಗಳಿಗೆ ಸರಿಯಾದ ಅರ್ಥವನ್ನು ಬರೆದು ಪ್ರಕಾಶಗೊಳಿಸುವೆನು' ಎಂದು ಆಚಾರ್ಯರು ಇತರರಿಗೆ ಅಸಾಧ್ಯವಾದ ಭಯಂಕರವಾದ ಪ್ರತಿಜ್ಞೆಯನ್ನು ಮಾಡಿದರು. ಅನಂತರ ಆಚಾರ್ಯರು ಉಡುಪಿನಲ್ಲಿಯೇ ಶ್ರೀಮದ್ಭಗವದ್ಗೀತೆಗೆ ಶ್ರೇಷ್ಠವಾದ ಭಾಷ್ಯವನ್ನು ಬರೆದರು. ನಾನು ದೇವತೆಗಳ ಪ್ರೀತಿಗಾಗಿ, ಭಗವಂತನ ಅಪ್ಪಣೆಯಂತೆ, ಅಲೌಕಿಕವಾದ ಕಾರ್ಯವನ್ನು ಸಾಧಿಸುವುದಕ್ಕಾಗಿ ಬದರಿಕಾಶ್ರಮಕ್ಕೆ ತೆರಳುವೆನು ಎಂದು ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೆ ತಿಳಿಸಿ ಅವರಿಗೆ ಭಗವದ್ಗೀತಾ ಭಾಷ್ಯದ ಒಂದು ಪ್ರತಿಯನ್ನು ಕೊಟ್ಟು ಇದರ ಅರ್ಥವನ್ನು ಮನನ ಮಾಡುತ್ತಾ ನಾನು ಹಿಂದಿರುಗಿ ಬರುವವರೆಗೆ ನನ್ನ ವಿರಹ ದುಃಖವನ್ನು ನೀವು ಸಹಿಸಿಕೊಂಡಿರಬೇಕು ಎಂದು ಅವರನ್ನು ಪ್ರಾರ್ಥಿಸಿ, ಗೌರವಿಸಿ ಅವರಿಂದ ಬದರಿಕಾಶ್ರಮಕ್ಕೆ ತೆರಳುವುದಕ್ಕೆ ಮತ್ತು ಉತ್ತರದೇಶದ ದಿಗ್ವಿಜಯಕ್ಕೆ ಅಪ್ಪಣೆಯನ್ನು ಪಡೆದರು. ಅನಂತರ ದಾರಿಯಲ್ಲಿ ಸಿಕ್ಕುವ ದಿವ್ಯತೀರ್ಥಗಳಲ್ಲಿ ಸ್ನಾನ ಮಾಡುತ್ತಾ ಆ ತೀರ್ಥಗಳಿಗೂ ಪಾವಿತ್ರ್ಯವನ್ನುಂಟು ಮಾಡುತ್ತಾ ಉತ್ತರದೇಶದ ದಿಗ್ವಿಜಯಮಾಡುತ್ತಾ ಬದರಿಕಾಶ್ರಮದ ಕಡೆಗೆ ಹೊರಟರು.

'ಹೀಗೆ ಪವಿತ್ರವಾದ ಅದ್ಭುತ ಚರಿತ್ರವುಳ್ಳ ಶ್ರೀ ಮಧ್ವಾಚಾರ್ಯರು ನನ್ನ ಮನಸ್ಸಿನಲ್ಲಿ ಯಾವಾಗಲೂ ಪ್ರಕಾಶಿಸಿಕೊಂಡಿರಲಿ' ಎಂದು ಗ್ರಂಥಕಾರರಾದ ಶ್ರೀ ನಾರಾಯಣ ಪಂಡಿತಾಚಾರ್ಯರು ಪ್ರಾರ್ಥಿಸುತ್ತಿದ್ದಾರೆ.

**ವಿಗ್ರಹ** - 'ವಿಶ್ವಂ' ಆದಿ ಯೇಷಾಂ ತಾನಿ ವಿಶ್ವಾದೀನಿ ತೇಷಾಂ ಶತಂ ಚ ತೇ ಅರ್ಥಾಶ್ಚ ಶತಾರ್ಥಃ, ಶತಾರ್ಥಾನಾಂ ಪ್ರವಚನಂ ಶತಾರ್ಥಪ್ರವಚನಂ, ಶತಾರ್ಥಪ್ರವಚನೇ ಚತುರಃ ಶತಾರ್ಥಪ್ರವಚನ ಚತುರಃ ದಾನಸ್ಯ ಸೂಕ್ತಂ ದಾನಸೂಕ್ತಂ, ದಾನಸೂಕ್ತಸ್ಯ ಅರ್ಥಃ ಧಾನಸೂಕ್ತಾರ್ಥಃ, ದಾನಸೂಕ್ತಾರ್ಥಂ ವದತೀತಿ ದಾನಸೂಕ್ತರ್ಥವಾದೀ, ದಿವಿ ಭವಂ ದಿವ್ಯಂ, ದಿವ್ಯಂ ಚ ತತ್ ಜ್ಞಾನಂ ಚ ದಿವ್ಯಜ್ಞಾನಂ ದಿವ್ಯಜ್ಞಾನಂ ಪ್ರಕಾಶಯತೀತಿ ದಿವ್ಯಜ್ಞಾನಪ್ರಕಾಶೀ, ಸಕಲಾನ್ ಜಯತೀತಿ ಸಕಲಜಿತ್. ಅಖಿಲಂ ಜಾನಾತೀತಿ ಅಖಿಲಜ್ಞಃ, ಅಖಿಲಜ್ಞಃ ಇತಿ ಅಭಿಧಾಯಸ್ಯಸಃ ಅಖಿಲಜ್ಞಾಭಿಧಃ, ~~ರೂಪ್ಯಂಪ್ರಾಪ್ತಃ ಪ್ರಾಪ್ತರೂಪ್ಯಃ 'ಪ್ರಾಪ್ತಾಪನ್ನೇ ಚ ದ್ವಿತೀಯಯಾ (2-2-4) ಪ್ರಾಪ್ತ ಮತ್ತು ಆಪನ್ನ ಎಂಬ ಎರಡು~~ ಶಬ್ದಗಳು ದ್ವಿತೀಯಾಂತ ಪದದೊಡನೆ ಸಮಾಸವನ್ನು ಹೊಂದುತ್ತವೆ. ಇಲ್ಲಿ ಚಕಾರ ಸಮಾಸವಿರುವುದರಿಂದ ದ್ವಿತೀಯಾಶ್ರಿ ತಾತೀತಪತಿತಗತ್ಯಾತ್ಯಸ್ತಪ್ರಾಪ್ತಪನ್ನೈಃ (2-1-24) ಎಂಬ ಸೂತ್ರದಿಂದ ದ್ವಿತೀಯಾ ಸಮಾಸವೂ ಇದೆ. ಈ ಸೂತ್ರದಿಂದ ಸಮಾಸಬಂದಾಗ, ಪ್ರಾಪ್ತ ಮತ್ತು ಅಪನ್ನ ಶಬ್ದಗಳಿಗೆ ಪೂರ್ವನಿಪಾತವು ಬರುತ್ತದೆ. 'ಪ್ರಾಪ್ತರೂಪ್ಯಃ ಎಂದು ರೂಪ. ಅಪನ್ನಃ ಜೀವಿಕಾಂ ಅಪನ್ನ ಜೀವಿಕಃ ಎಂದು ರೂಪ. ದ್ವಿತೀಯಾಶ್ರಿತಾತೀತ ಎಂಬ ಸೂತ್ರದಿಂದ ಸಮಾಸ ಬಂದರೆ 'ರೂಪ್ಯಂ ಪ್ರಾಪ್ತಃ ಜೀವಿಕಾಂ ಆಪನ್ನಃ ಜೀವಿಕಾಪನ್ನಃ ಎಂದೂ ರೂಪ.

ಭೀಮಾ ಸಂಧಾ ಯಸ್ಯಸಃ ಭೀಮಸಂದಃ, ಖಲನಾಂ ಕುಲಂ ಖುಲಕುಲಂ, ಖುಲಕುಲಸ್ಯ ದಮನಂ ಖುಲುಕುಲದಮನಂ, ತಸ್ಮಿನ್, ಗೀತಾಏವ ಗೀತಿಕಾ 'ಸ್ವಾರ್ಥೇಕ ಪ್ರತ್ಯಯಃ' ಗೀತಿಕಾಯಾಃ ಭಾಷ್ಯಂ ಗೀತಿಕಾಭಾಷ್ಯಂ, ಗೀತಿಕಾಭಾಷ್ಯಂಕರೋತೀತಿ ಗೀತಿಕಾಭಾಷ್ಯಕಾರೀ, ಗುರುಂ ಅರ್ಚಯತೀತಿ ಗುರ್ವರ್ಚೀ, ತೀರ್ಥಾನಿ ಶೋಧಯತೀತಿ ತೀರ್ಥಶೋಧೀ.

**ಧಾತರೂಪ** - ಲಸೇತ್ ಲಸೇತಾನ ಲಸೇಯುಃ, ಲಸೇಃ ಲಸೇತಂ, ಲಸೇತ, ಲಸೇಯಂ ಲಸೇವ ಲಸೇಮ. ಲಸಶ್ಲೇಷಣಕ್ರಿಯನಯೋಃ (**ಲಷ-ಲಸ-ಕಾಂತೌ**) ಎಂಬ ಧಾತುವಿನ **ಆಶೀರ್ಲಿಙ್, ಪರಸ್ಮೈಪದಿ ಪ್ರ.ಪು.ಏ**. (ಧಾತುಗಳಿಗೆ ಅನೇಕಾರ್ಥವಿರುವುದರಿಂದ **ಮತ್ತು ಷಸಗಳಿಗೆ ಕೆಲವು ಕಡೆ ಅಭೇದವಿರುವುದರಿಂದ ಲಸ್** ಪ್ರಕಾಶಿಸುವುದು ಎಂದು ಅರ್ಥ)

**ಪ್ರಯೋಗ** - ಮಧ್ವಃ ಮಮ ಮನಸಿ ಲಸೇತ್ (ಕರ್ತರಿ)
ಮಧ್ವೇನಮಮ ಮನಸಿ ಲಸ್ಯೇತ (ಭಾವೇ)

**ಗೂಢಾಭಾವಪ್ರಕಾಶಿಕಾಸಂಸ್ಕೃತವ್ಯಾಖ್ಯಾನದ ಕನ್ನಡ ಅನುವಾದ** - ವಿಶ್ವಾದೀನಾಂ=ವಿಶ್ವಂ ವಿಷ್ಣುಃ ವಷಟ್ಕಾರಃ ಇತ್ಯಾದಿ ಸಹಸ್ರನಾಮಗತ ವಿಶ್ವಾದಿಪದಾನಾಂ ಇತ್ಯರ್ಥಃ='ವಿಶಾದೀನಾಂ' ಎಂಬ ಮೂಲ ಪದ್ಯದ ಪದಕ್ಕೆ 'ವಿಶ್ವಂ ವಿಷ್ಣುಃ ವಷಟ್ಕಾರ ಇದೇ ಮೊದಲಾದ ಸಹಸ್ರನಾಮದಲ್ಲಿರುವ ವಿಶ್ವಾದಿಪದಗಳಿಗೆ ಎಂದು ಅರ್ಥ. ಶತಾರ್ಥ ಪ್ರವಚನ ಚತುರಃ=ಶತಸಂಖ್ಯಾಕಾಃ ಯೇ ಅರ್ಥಾಃ ತೇಷಾಂ ಪ್ರವಚನೇ ವ್ಯಾಖ್ಯಾನೇ ಚತುರಃ ಕುಶಲಃ, ಶತಾರ್ಥ ಪ್ರವಚನ ಚತುರಃ ಎಂದರೆ ನೂರು ಅರ್ಥಗಳನ್ನು ಹೇಳುವುದರಲ್ಲಿ ಕುಶಲರು ಎಂದು ಅರ್ಥ.

ಇದಮಾಕೂತಂ=ಇಲ್ಲಿಯ ಅಭಿಪ್ರಾಯ ಹೀಗಿದೆ. ಪಯಸ್ವಿನೀ ಸಮೀಪಸ್ಥದೇವಾಲಯಾವಸ್ಥಾನಸಮಯೇ=ಪಯಸ್ವಿನೀ ನದಿಯ ದಡದಲ್ಲಿರುವ (ಸಮೀಪದಲ್ಲಿರುವ) ದೇವಾಲಯದಲ್ಲಿ ಇರುವಾಗ ಅಧಿತಷಡಂಗ ವೇದಾಃ=ಶಿಕ್ಷಾದಿಷಡಂಗ ಸಹಿತವಾಗಿ ವೈದಾಧ್ಯಯನ ಮಾಡಿರುವ, ವಿಪ್ರಾಃ=ಬ್ರಾಹ್ಮಣರು, ತದರ್ಥಂ=ತಾವು) ಓದಿರುವ ವೇದದ ಅರ್ಥವನ್ನು, ಜಿಜ್ಞಾಸವ ಸಂತಃ=ತಿಳಿಯುವ ಇಚ್ಛೆಯುಳ್ಳವರಾಗಿ, ಪೂರ್ಣಭೋಧಂ ಅಪ್ಯ=ಶ್ರೀಪೂರ್ಣಪ್ರಜ್ಞರನ್ನು ಹೊಂದಿ, ಋಕ್ ಶಾಖಾಯಾಂ=ಋಕ್ ಶಾಖೆಯಲ್ಲಿ ಕಸ್ಯಚಿತ್ ಸೂಕ್ತಸ್ಯ ಅರ್ಥಂ=ಯಾವುದೋ ಒಂದು ಸೂಕ್ತದ ಅರ್ಥವನ್ನು, ಅಪ್ರಾಕ್ಷುಃ =ಕೇಳಿದರು. ತತ್ಸೂಕ್ತಂ=ಆಸೂಕ್ತವನ್ನು, ಮಧ್ವಃ=ಶ್ರೀ ಮಧ್ವಾಚಾರ್ಯರು, ವಿಷ್ಣುಪರತಯಾ=ನಾರಾಯಣಪರವಾಗಿ, ವ್ಯಾಚಖ್ಯೌ=ವ್ಯಾಖ್ಯಾನ ಮಾಡಿದರು. ತತ್‌ದೃಷ್ಟ್ವಾ= ಅದನ್ನು ನೋಡಿ, ವಿಪ್ರಾಃ=ಬ್ರಾಹ್ಮಣರು, ಅನ್ಯಪರತಾಂ=ಸೂಕ್ತಕ್ಕೆ ಬೇರೆ ತಾತ್ಪರ್ಯವನ್ನು, ಮನ್ಯಮಾನಾಃ=ತಿಳಿಯತಕ್ಕವರಾಗಿ, ಪ್ರತ್ಯವತಸ್ಥಿರೇ = ನೀವು ಹೇಳಿದ ಅರ್ಥವಲ್ಲಿ, ಬೇರೊಂದು ಅರ್ಥವಿದೆ ಎಂದು ಶ್ರೀ ಮಧ್ವರನ್ನು ವಿರೋಧಿಸಿದರು. ಮಧ್ವಶ್ಚ=ಶ್ರೀಮಧ್ವಾಚಾರ್ಯರಾದರೋ,

**ತ್ರಯೋऽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ।**
**ವಿಷ್ಣೋರ್ನಾಮಸಹಸ್ರಂತು ನಿರಂತರಶತಾರ್ಥಕಂ ॥**

~~ಸರ್ವವೇದೇಷು=ಎಲ್ಲಾ ವೇದಗಳಲ್ಲಿ, ತ್ರಯಃ ಅರ್ಥಾಃ=ಮೂರು ಅರ್ಥಗಳು, (ಸಂತಿ) ಇವೆ. ಸರ್ವಭಾರತೇ=ಸಮಗ್ರ~~ ಭಾರತದಲ್ಲಿ, ದಶ ಅರ್ಥಾಃ (ಸಂತಿ) =ಹತ್ತು ಅರ್ಥಗಳು ಇವೆ. ವಿಷ್ಣೋಃ=ವಿಷ್ಣುವಿನ, ನಾಮಸಹಸ್ರಂತು=ಸಹಸ್ರನಾಮವಾದರೋ, ನಿರಂತರಶತಾರ್ಥಕಂ (ಭವತಿ)=ಎಡೆಬಿಡದೆ (ಒಂದು ನಾಮವನ್ನೂ ಬಿಡದೆ) (ನೂರು ಅರ್ಥವುಳ್ಳದ್ದು ಆಗುತ್ತದೆ), ಇತಿ ವಚನಂ ಪಠಿತ್ವಾ=ಎಂಬ ವಚನವನ್ನು ಪಠಿಸಿ, ಅನ್ಯಪರತ್ವಂ ಅಪಿ=ಬೇರೊಂದು ಅರ್ಥದಲ್ಲಿ ತಾತ್ಪರ್ಯವನ್ನೂ ಅನುಮೇನೆ=ಒಪ್ಪಿದರು. ತದಾ=ಆಗ, ಆಶ್ಚರ್ಯವದ್ಭಿಃ=ಆಶ್ಚರ್ಯಪಟ್ಟ ವಿಪ್ರೈಃ ಬ್ರಾಹ್ಮಣರಿಂದ, ತರ್ಹಿ=ಹಾಗಾದರೆ, ಸಹಸ್ರನಾಮ್ನಾಂ =ವಿಷ್ಣುವಿನ ಸಹಸ್ರನಾಮಗಳಿಗೆ (ಪ್ರತಿಯೊಂದಕ್ಕೂ) ಶಥಾರ್ಥತ್ವಂ=ನೂರು ಅರ್ಥಗಳು, ಕಥಂ ಹೇಗೆ? ವರ್ಣಯ=ವರ್ಣಿಸಿರಿ, (ಪ್ರತಿ ಪಾದಿಸಿರಿ) ಇತ್ಯುಕ್ತೇ (ಸತಿ)=ಹೀಗೆ ಹೇಳಿದಾಗ, ಭಗವಾನ್=ಶ್ರೀಮಧ್ವಾಚಾರ್ಯರು, ವರ್ಣಯಾಮಾಸ=ವಿಷ್ಣುಸಹಸ್ರನಾಮದ 'ವಿಶ್ವ' ಮುಂತಾದ ಒಂದೊಂದು ಪದಕ್ಕೂ ನೂರು ಅರ್ಥ ಹೀಗೆಂದು ವರ್ಣಿಸಿದರು. ಇತಿ=ಈ ರೀತಿಯಾಗಿ (ಅಭಿಪ್ರಾಯವು) ತತ್ಪ್ರಕಾರಶ್ಚ=ನೂರು ಅರ್ಥಗಳು ಹೇಗೆ ಎಂಬ ಪ್ರಕಾರವು (ರೀತಿಯು) ಮಧ್ವವಿಜಯಟೀಕಾದಿತಃ= ಶ್ರೀಸುಮಧ್ವವಿಜಯಟೀಕಾ ಮುಂತಾದವುಗಳಿಂದ, ಅವಂಗತವ್ಯಃ=ತಿಳಿಯಲ್ಪಡಬೇಕು.

ದಾನಸೂಕ್ತಾರ್ಥವಾದೀ='ಮುಂದೆ' ದಾನ ಸೂಕ್ತಾರ್ಥವಾದೀ ಎಂಬ ಪದದ ಅರ್ಥವನ್ನು ಹೇಳುತ್ತಾರೆ, ಅನ್ನದಾನ ಪ್ರಶಂಸಾಕಾರಿ ಸೂಕ್ತಾರ್ಥಂ ವದತೀತಿಸಃತಥಾಷ=ಅನ್ನದಾನಪ್ರಶಂಸೆಯನ್ನು ಮಾಡುವ ಸೂಕ್ತದ ಅರ್ಥವನ್ನು ಯಾವನು ಹೇಳುತ್ತಾನೋ ಅವನು, 'ದಾನಸೂಕ್ತಾರ್ಥವಾದೀ' ಎಂದು ಹೆಸರುಳ್ಳವನು, (ಶ್ರೀಮಧ್ವರು) ಸ್ಥಲಾಂತರೇ=ಬೇರೊಂದು ಸ್ಥಳದಲ್ಲಿ, ಶ್ರೀಮಧ್ವಂ=ಶ್ರೀಮಧ್ವಾಚಾರ್ಯರನ್ನು, ಪರೀಕ್ಷಮಾಣೈಃ=ಪರೀಕ್ಷೆ ಮಾಡುವವರಾದ, ಕೈಶ್ಚಿದ್ ವಿಪ್ರೈಃ=ಕೆಲವು ಮಂದಿ ಬ್ರಾಹ್ಮಣರಿಂದ.

'ನವಾ ಉದೇವಾಃ ಕ್ಷುಧಮಿದ್ವಧಂದದುರುತಾಶಿತಮುಪಗಚ್ಛಂತಿ ಮೃತ್ಯವೇ' ಇತ್ಯಾದಿ ಸೂಕ್ತಾರ್ಥೇಪೃಷ್ಟೇ=ಇದೇ ಮೊದಲಾದ ಸೂಕ್ತದ ಅರ್ಥವನ್ನು ಕೇಳಿದಾಗ, ತದರ್ಥಂ ವರ್ಣಿತವಾನ್ - ಈ ಸೂಕ್ತದ ಅರ್ಥವನ್ನು ವರ್ಣಿಸಿದರು, ಇತಿಭಾವಃ - ಎಂದು ಅಭಿಪ್ರಾಯವು ಕಿಂಚ='ದಾನಸೂಕ್ತಾರ್ಥವಾದೀ' ಎಂಬ ವಿಶೇಷಣಕ್ಕೆ ಇನ್ನೊಂದು ಅರ್ಥವನ್ನು ಹೇಳುತ್ತೇವೆ. ದಾನಸೂಕ್ತಸ್ಯ- ದಾನಸೂಕ್ತಕ್ಕೆ, ಅಂದರೆ, ಕನ್ಯಕಾಯೈ ಇಂದ್ರಕರ್ತೃಕ ಕಾಂತಿದಾನ ಪ್ರತಿಪಾದಕ ಸೂಕ್ತಸ್ಯ -ಕನ್ಯಕೆಗೆ ಇಂದ್ರನು ಕಾಂತಿಯನ್ನು ಕೊಟ್ಟನು ಎಂಬ ಅರ್ಥವನ್ನು ಹೇಳುವ ಸೂಕ್ತದ, ಅರ್ಥವಾದೀ ಇತ್ಯರ್ಥಃ ಅರ್ಥವನ್ನು ಹೇಳಿದವರು ಎಂದು 'ದಾನಸೂಕಾರ್ಥವಾದೀ' ಎಂಬ ವಿಶೇಷಣಕ್ಕೆ ಇನ್ನೊಂದು ಅರ್ಥ. ಇಲ್ಲಿಯ ಅಭಿಪ್ರಾಯವನ್ನು ವಿವರಿಸುತ್ತಾರೆ, ಪುನಃ ಸಭಾಂತರೇ=ತಿರುಗಿ ಮತ್ತೊಂದು ಸಭೆಯಲ್ಲಿ, ಕೈಶ್ಚಿದ್ ವಿಪ್ರೈಃ= ಕೆಲವು ಮಂದಿ ಬ್ರಾಹ್ಮಣರಿಂದ, ಕನ್ಯಾ ೩ ವಾಯವಾಯತೀ ಸೋಮಮುಪಿಸ್ರುತಾವಿದತ್, 'ಅಸ್ತಂಭರತ್ಯಬ್ರವೀದಿಂದ್ರಾಯ ಸುನವೈತ್ವಾ ಶಕ್ರಾಯ ಸುನವೈತ್ವಾ ಇತ್ಯಾದಿ ಸೂಕ್ತಾರ್ಥೆ ಪೃಷ್ಟೇ=ಕನ್ಯಾ ವಾರವಾಯುತೀ ಇತ್ಯಾದಿ ಸೂಕ್ತದ ಅರ್ಥವನ್ನು ಕೇಳಿದಾಗ, ಪೂರ್ಣಭೋಧಃ- ಶ್ರೀಮಧ್ವಾಚಾರ್ಯರು, ಇಂದ್ರಃ=ಇಂದ್ರನು, ಕನ್ಯಯಾದತ್ತಂ=ಕನ್ಯೆಯಿಂದ ಕೊಡಲ್ಪಟ್ಟ, ತಂ ಸೋಮರಸಂ ಪೀತ್ವಾ=ಆ ಸೋಮರಸವನ್ನು ಕುಡಿದು, ತಾಂ=ಆ ಕನ್ಯೆಯನ್ನು ಸೂರ್ಯಸದೃಶಕಾಂತಿಮತೀ=ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವವಳನ್ನಾಗಿ, ಚಕಾರ=ಮಾಡಿದನು. ಇತ್ಯಾದ್ಯರ್ಥಂ ಇದೇ ಮೊದಲಾದ ಅರ್ಥವನ್ನು ಊಚೇ=ಹೇಳಿದರು. ಇತಿಭಾವಃ ಎಂದು ಅಭಿಪ್ರಾಯವು. ದಿವ್ಯಜ್ಞಾನ ಪ್ರಕಾಶೀ ಎಂಬ ವಿಶೇಷಣದ ಅರ್ಥವನ್ನು ಹೇಳುತ್ತಾರೆ. ದಿವ್ಯಂ ಅಲೌಕಿಕಂ ಅತ್ಯಾಶ್ಚರ್ಯಕರಂ ಇತಿಯಾವತ್, ದಿವ್ಯ ಎಂದರೆ ಅಲೌಕಿಕ, ಅಂದರೆ ಅತ್ಯಾಶ್ಚರ್ಯಕರವಾದುದು ಎಂದು ಅಭಿಪ್ರಾಯ. ತಚ್ಚ ತಜ್ಜ್ಞಾನಂ ಪ್ರಕಾಶಯತೀತಿ ಸಃ ತಥಾ, ಅಂತಹ ದಿವ್ಯ ಜ್ಞಾನವನ್ನು ಪ್ರಕಾಶಗೊಳಿಸುವ ಮಧ್ವರು ಎಂಬ ವಿಶೇಷಣದಿಂದ ಕೂಡಿದ್ದಾರೆ. ದಿವ್ಯಜ್ಞಾನಪ್ರಕಾಶೀ ಎಂಬಲ್ಲಿ ತಾಚ್ಛೀಲಿಕಣಿನಿಪ್ರತ್ಯಯ. ಅಯಂಭಾವ=ಇಲ್ಲಿ ಅಭಿಪ್ರಾಯವು ಇದು. ಸ್ವೇನ ಉಕ್ತೇದಾನಸೂಕ್ತಾರ್ಥೇವಿಪ್ರೇಷು ವಿವದಮಾನೇಷು ಸತ್ಸು=ತಾನು ಹೇಳಿದ ದಾನ ಸೂಕ್ತದ ಅರ್ಥದ ವಿಷಯದಲ್ಲಿ ಬ್ರಾಹ್ಮಣರು ವಿವಾದ ಮಾಡುತ್ತಿರಲಾಗಿ, ಅತ್ರ ಕಶ್ಚಿದ್ ವಿಪಶ್ಚಿದ್ ಆಯಸ್ಯಾತಿ=ಇಲ್ಲಿಗೆ ಒಬ್ಬ ಪಂಡಿತನು ಬರುವನು, ತತಃಸಂವಾದಂ ಕುರುತ = ಅವನ ಮೂಲಕ ನಾವು ಹೇಳಿದ ಅರ್ಥವನ್ನು ತಿಳಿಯಿರಿ, ಇತಿಉಕ್ತ್ವಾಸ್ವಯಂನಿರ್ಗತಃ=ಹೀಗೆಂದು ಹೇಳಿ ತಾವು ಹೊರಟುಹೋದರು.

~~ಸಃ ವಿಪಶ್ಚಿತ್ ಅಗತ್ಯ=ಆ ವಿದ್ವಾಂಸನು ಬಂದು ಹಾಗೆಯೇ ಮಧ್ವರು ಹೇಳಿದಂತೆಯೇ, ಉಕ್ತವಾನ್=~~ ಅರ್ಥವನ್ನು ಹೇಳಿದನು. ತದಾ=ಆಗ, ಸರ್ವೇ=ಎಲ್ಲರೂ, ಮಧ್ವಸ್ಯ=ಶ್ರೀಮಧ್ವಾಚಾರ್ಯರಿಗೆ, ಅತೀತಾನಾಗತಸರ್ವ ವಿಷಯಕಜ್ಞಾನಂ=ಭೂತ ಭವಿಷ್ಯತ್ ಕಾಲದ ಎಲ್ಲಾ ವಿಷಯಗಳ ಜ್ಞಾನವು, ಅಸ್ತಿ ಇತಿ=ಇದೆಯೆಂದು, ಮೇನಿರೇ (ಇತಿ)=ತಿಳಿದರು (ಎಂದು) ಸಕಲಜಿತ್ ಎಂಬ ವಿಶೇಷಣದ ಅರ್ಥವನ್ನು ಹೇಳುತ್ತಾರೆ. ಸಕಲಾನ್ ವೇದಶಾಸ್ತ್ರವಿದಃ=ಎಲ್ಲಾ ವೇದಶಾಸ್ತ್ರಗಳನ್ನು ಬಲ್ಲ ಪಂಡಿತರನ್ನು ಜಯತೀತಿ=ಜಯಿಸುತ್ತಾರೆ ಎಂದು ಸಃ=ಆ ಮಧ್ವರು ತಥಾಉಕ್ತಃ=ಸಕಲಜಿತ್ ಎಂಬ ವಿಶೇಷಣದಿಂದ ಕೂಡಿದವರಾಗಿ ಹೇಳಲ್ಪಟ್ಟಿದ್ದಾರೆ. ಅಖಿಲಜ್ಞಾಭಿಧಃ, ಎಂಬ ವಿಶೇಷಣದ ಅರ್ಥವನ್ನು ಹೇಳುತ್ತಾರೆ, ಅಖಿಲಜ್ಞಃ ಅಸಿಇತಿಸರ್ವೈಃ ಉಚ್ಯಮಾನಃ=ಸರ್ವಜ್ಞರಾಗಿದ್ದೀರಿ ಎಂದು ಎಲ್ಲರಿಂದಲೂ ಹೇಳಲ್ಪಡುತ್ತಿರುವ, ಪ್ರಾಪ್ತರೂಪ್ಯಃ ಎಂದರೆ ರೂಪ್ಯಪೀಠಪುರಂ ಪ್ರಾಪ್ತಃ ರಜತಪೀಠಪುರವನ್ನು (ಉಡುಪಿಯನ್ನು) ಹೊಂದಿದವರು ಪ್ರಾಪ್ತರೂಪ್ಯಃ ಎಂಬ ವಿಶೇಷಣದಿಂದ ಕೂಡಿರುತ್ತಾರೆ "ಪ್ರಾಪ್ತರೂಪ್ಯಃ" ಎಂಬಲ್ಲಿ ಪ್ರಾಪ್ತಾಪನ್ನೇ ಚ.....ಇತಿ ಸಮಾಸಃ= ಪ್ರಾಪ್ತಾಪನ್ನೇ ಚ ದ್ವಿತೀಯಯಾ ಎಂಬ ಸೂತ್ರದಿಂದ ಸಮಾಸ, ಸಕಲಜಿತ್ ಅಖಿಲಜ್ಞಾಭಿಧಃ ಪ್ರಾಪ್ತರೂಪ್ಯಃ ಎಂಬ ಮೂರುವಿಶೇಷಣಗಳ ಅಭಿಪ್ರಾಯವನ್ನು ಹೇಳುತ್ತಾರೆ, ತತ್ರ (ತತ್ರ) ಸಭಾಸು=ಅಲ್ಲಲ್ಲಿ ಸಭೆಗಳಲ್ಲಿ, ಸ್ವಜ್ಞಾನಂ=ತನ್ನ ಜ್ಞಾನವನ್ನು, ಪ್ರಕಾಶ್ಯ=ಪ್ರಕಟಗೊಳಿಸಿ, ಸರ್ವಾನ್ ವಿಜಿತ್ಯ ಎಲ್ಲರನ್ನೂ=ಜಯಿಸಿ, ಸರ್ವೈಃ=ಎಲ್ಲರಿಂದಲೂ, ವಿಶ್ವಜ್ಞಃ ಅಸಿ=ಸರ್ವಜ್ಞರಾಗಿದ್ದೀರಿ, ಇತಿ ಸ್ತೂಯಮಾನಃ ಸನ್ ಎಂದು ಹೊಗಳಿಸಿಕೊಳ್ಳಲ್ಪಡುತ್ತಾ ಕ್ರಮೇಣ=ಕ್ರಮವಾಗಿ ರೂಪ್ಯಪೀಠಂಪ್ರಾಪ್ತಃ=ರಜತಪೀಠಪುರಕ್ಕೆ ಬಂದರು. ಇತಿಭಾವಃ=ಎಂದು ಭಾವಃ=ಎಂದು ಅಭಿಪ್ರಾಯ. ಖಲಕುಲದಮನೇ=ಖಲಾನಾಂ= ದುರ್ವಾದಿನಾಂ, ಖಲಕುಲದಮನೇ ಎಂಬಲ್ಲಿ (ಖಲಾನಾ)=ಖಲಾನಾಂ ಎಂದರೆ ದುರ್ವಾದಿಗಳ, ಕುಲಸ್ಯವೃಂದಸ್ಯ=ಸಮೂಹದ, ದಮನೇ=ಪರಾಜಯೇ, ಸೋಲಿಸುವ ವಿಷಯದಲ್ಲಿ ಭೀಮಃ ವಾ=ಭೀಮಸೇನಃ ಇವ, ಭೀಮಸೇನ ದೇವರಂತೆ, ವೋಪಮಾಯಾಂ ವಿಕಲ್ಪೇಚ

ಇತ್ಯಮರಃ, ವಾ ಎಂಬುದಕ್ಕೆ ಹೋಲಿಕೆ, ಮತ್ತು ವಿಕಲ್ಪ ಅರ್ಥಗಳು ಎಂದು ಅಮರಕೋಶ, ಭೀಮಸಂಧಃ=ಭೀಮಾ ಭಯಂಕರೀ ಸರ್ವಾನ್ ದುರ್ವಾದಿನಃ ಜೇಷ್ಯಾಮಿ ಇತ್ಯೇವಂರೂಪಾ=ಭೀಮಾ ಎಂದರೆ ಭಯಂಕರವಾದ, ಎಲ್ಲಾ ದುರ್ವಾದಿಗಳನ್ನೂ ಜಯಿಸುವೆನು ಎಂಬುದಾಗಿ ಈ ರೀತಿಯಾಗಿರುವ, ಸಂಧಾ=ಪ್ರತಿಜ್ಞಾ ಸಂಧಾ ಎಂದರೆ ಪ್ರತಿಜ್ಞೆಯು, ಯಸ್ಯಸಃ ತಥಾ ಉಕ್ತ=ಯಾವನಿಗೆ ಇದೆಯೋ, ಅವನು ಹಾಗೆ ಎಂದರೆ 'ಭೀಮಸಂಧಃ' ಎಂಬ ವಿಶೇಷಣವುಳ್ಳವನಾಗಿ, ಉಕ್ತ=ಹೇಳಲ್ಪಡುತ್ತಾನೆ. ಹೀಗೆ ಆಚಾರ್ಯರಿಗೆ "ಭೀಮಸಂಧ" ಎಂಬ ವಿಶೇಷಣ ಬಂದಿದೆ. ತಾದೃಶಃಸನ್=ಭೀಮಸಂಧರಾಗಿ, ಭಯಂಕರ ಪ್ರತಿಜ್ಞೆ ಉಳ್ಳವರಾಗಿ, ಗೀತಿಕಾಭಾಷ್ಯಕಾರೀ=ಗೀತಿಕಾಯಾಃ= ಭಗವದ್ಗೀತಿಕಾಯಾಃಗೀತಿಕಾ ಎಂದರೆ ಭಗವದ್ಗೀತಿಕೆಗೆ, ಸ್ವಾರ್ಥೇಕಃ="ಗೀತಿಕಾ" ಎಂಬಲ್ಲಿ "ಗೀತಾ" ಎಂದೇ ಅರ್ಥ ಅದೇ ಅರ್ಥವನ್ನು ಹೇಳುವುದಕ್ಕೆ ಕ ಎಂಬ ಪ್ರತ್ಯೇಯವನ್ನು ಸೇರಿಸಿ ಗೀತಿಕಾ ಎಂದು ಹೇಳಿದ್ದಾರೆ. ಭಾಷ್ಯಂಕರೋತಿ ಇತಿ ಸಃ ತಥಾ - (ಗೀತಿಕೆಯ) ಭಾಷ್ಯವನ್ನು ಮಾಡುತ್ತಾರೆ ಎಂದು ಸಃ=ಆಭಾಷ್ಯ ಮಾಡಿದವರು ತಥಾ=ಗೀತಿಕಾಭಾಷ್ಯಕಾರೀ ಎಂಬ ವಿಶೇಷಣದಿಂದ ಹೇಳಲ್ಪಡುತ್ತಾರೆ, ಗುರ್ವರ್ಚೀ=ಗುರ್ವರ್ಚೀ ಎಂದರೆ ಗುರುಂ=ಅಚ್ಯುತಪ್ರೇಕ್ಷಂ ಗುರು ಎಂದರೆ ಅಚ್ಯುತಪ್ರೇಕ್ಷರನ್ನು ಅರ್ಚತಿ ಇತಿ ಪೂಜಯತಿ ಇತಿ=ಅರ್ಚತಿ ಎಂದರೆ ಪೂಜಯತಿ ಪೂಜಿಸುತ್ತಾರೆ ಎಂದು ಸಃ=ಆ ಪೂಜಿಸಿದ ಶ್ರೀಮಧ್ವಾಚಾರ್ಯರು ತಥಾ=ಗುರ್ವರ್ಚಿ ಎಂಬ ವಿಶೇಷಣವುಳ್ಳವರಾಗಿದ್ದಾರೆ. ಇಲ್ಲಿಯ ಅಭಿಪ್ರಾಯವನ್ನು ಹೇಳುತ್ತಾರೆ. ಗೀತಾಭಾಷ್ಯಂಕೃತ್ವಾ= ಗೀತಾಭಾಷ್ಯವನ್ನು ಮಾಡಿ, ಅಚ್ಯುತಪ್ರೇಕ್ಷಾಯ ದತ್ವಾ=ಅಚ್ಯುತಪ್ರೇಕ್ಷಾಚಾರ್ಯರಿಗೆ ಕೊಟ್ಟು ತಂಸಂಪೂಜ್ಯ=ಅವರನ್ನು ಚೆನ್ನಾಗಿ ಪೂಜಿಸಿ ಬದರಿಕಾಶ್ರಮಂ ಗಮಿಷ್ಯಾಮಿ=ಬದರಿಕಾಶ್ರಮಕ್ಕೆ ಹೋಗುವೆನು. ಇತಿ ಏವಂ ಸಂಪ್ರಾರ್ಥ್ಯ=ಈ ರೀತಿಯಾಗಿ ಚೆನ್ನಾಗಿ ಪ್ರಾರ್ಥಿಸಿ, ಅನುಜ್ಞಾಂ ಗೃಹೀತವಾನ್ ಇತಿಭಾವಃ=ಅಪ್ಪಣೆಯನ್ನು ಸ್ವೀಕರಿಸಿದರು ಎಂದು ಅಭಿಪ್ರಾಯವು.

ಉದೀಚೀಂ ಉತ್ತರಾಂ ದಿಶಂ ಪ್ರತಿ=ಉದೀಚಿಂ ಎಂದರೆ ಉತ್ತರದಿಕ್ಕನ್ನು ಕುರಿತು=ಯಾನ್=ಗಚ್ಛನ್=ಹೋಗುತ್ತಿರುವ, ತೀರ್ಥಶೋಧೀ ತೀರ್ಥಾನಿಶೋಧಯೆತಿ ಇತಿ ಸಃ ತಥಾ=ತೀರ್ಥಶೋಧೀ ಎಂದರೆ ತೀರ್ಥಗಳನ್ನು ಪವಿತ್ರೀಕರಿಸುತ್ತಾನೆ ಎಂದು ಆ ಶ್ರೀ ಮಧ್ವಾಚಾರ್ಯರು 'ತೀರ್ಥಶೋಧೀ' ಎಂಬ ವಿಶೇಷಣ ಉಳ್ಳವರಾಗಿದ್ದಾರೆ. ಇಲ್ಲಿಯ ಅಭಿಪ್ರಾಯವನ್ನು ಹೇಳುತ್ತಾರೆ, ಮಾರ್ಗೇ ತತ್ರ ತತ್ರ ತೀರ್ಥೇಷು ಸ್ನಾತ್ವಾ=ದಾರಿಯಲ್ಲಿ ಅಲ್ಲಲ್ಲಿ ತೀರ್ಥಗಳಲ್ಲಿ ಸ್ನಾನ ಮಾಡಿ, ತಾನಿ=ಆ ತೀರ್ಥಗಳನ್ನು, ಪವಿತ್ರೀಕುರ್ವಾಣಃ ಇತಿ ಭಾವಃ=ಪವಿತ್ರಗಳನ್ನಾಗಿ ಮಾಡುತ್ತಿರುವವರು ಎಂದು "ತೀರ್ಥಶೋಧೀ" ಎಂಬ ವಿಶೇಷಣದ ಅಭಿಪ್ರಾಯವು. ಸಃ=ಏವಂವಿಧಚರಿತಃ ಮಧ್ವಃ, ಸಃ ಎಂದರೆ ಇಂತಹ ಚರಿತ್ರೆಯುಳ್ಳ ಶ್ರೀ ಮಧ್ವರು, ಮಮ=ನನ್ನ, ಮನಸಿ=ಮನಸ್ಸಿನಲ್ಲಿ ಲಸೇತ್=ಭಾಯಾತ್=ಪ್ರಕಾಶಿಸಲಿ, ಲಸೇತ್ ಎಂಬಲ್ಲಿ ಲಸ (ಲಷ) ಕಾಂತೌ=ಲಸ, ಅಥವಾ ಲಷ, ಷಸಯೋರಭೇದಃ ಎಂಬುದಾಗಿರುವುದರಿಂದ ಲಸ ಎಂಬ ಧಾತುವು ಕಾಂತಿ ಎಂಬ ಅರ್ಥದಲ್ಲಿದೆ, ಅದರ ಮೇಲೆ, ಆಶಿಷಿ=ಆಶೀರ್ವಾದ ಅಂದರೆ ಇಚ್ಛೆ ಎಂಬ ಅರ್ಥದಲ್ಲಿ ಲಿಙ್=ವಿಧಿಲಿಙ್ ಲಕಾರವು।।೧೧।।

**ಗಂಗಾತಾರೀ ಸುಕರ್ಮೋಽಪಗತಬದರಿಕಾಂತೋಽತ್ರನಾರಾಯಣಂಯೋ**
**ನತ್ವೈಕಾಂತೇ ಸಮುದ್ಯತ್ಪ್ರವಚನಕೃದಥೋ ಸತ್ತಪಾಃ ಕೃಷ್ಣನುನ್ನಃ ।**
**ಆಪ್ತೇಭ್ಯಃ ಕಾರ್ಯಲೇಶೀ ಸ್ವಮನುಗತನಿಜಪ್ರೇರಕಃ ಪಾಣಿಮಾತ್ರಾ**
**ನ್ಮಾರುತ್ಯಾಭಃ ಪ್ರಪಶ್ಯನ್ ಹರಿಮಪಿ ಗಿರಿಣಾ ಸಾರ್ಧಮೃದ್ಧ್ಯೈ ಸ ಮೇ ಸ್ಯಾತ್ ।।೧೨।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾ** – ಗಂಗೇತಿ। ಯಃ ಗಂಗಾತಾರೀ, ಗಂಗಾಂ ತರತೀತಿ ಸಃ ತಥಾ, ಸುಕರ್ಮಾ, ತತ್ರ ತತ್ರ ಶೋಭನಚರಿತಃ ಸನ್, ಉಪಗತಬದರಿಕಾಂತಃ, ಉಪಗತಃ ಪ್ರಾಪ್ತಃ ಬದರಿಕಾಯಾಃ ಅಂತಃ ಸಮೀಪಂ ಯೇನ ಸಃ ತಥಾ, ಅತ್ರ ಬದರಿಕಾಶ್ರಮೇ ನಾರಾಯಣಂ, ಅರ್ಚಾಯಾಂ ಸನ್ನಿಹಿತಂ ನಾರಾಯಣಂ ನತ್ವಾ, ಏಕಾಂತೇ ಸಮುದ್ಯತ್ ಪ್ರಚನಕೃತ್, (ಸಮುದ್ಯತ್) ಸಮ್ಯಗುತ್ಥಾಪಿತಂ ಪ್ರವಚನಂ ವ್ಯಾಖ್ಯಾನಂ ಕರೋತೀತಿ ಸಃ ತಥಾ, ಯದಾ ಗೀತಾಭಾಷ್ಯಂ ಬದರಿಕಾಶ್ರಮಸ್ಥವಿಷ್ಣವೇ ಉಪಾಯನತ್ವೇನ ಆರ್ಪಯತ್, ತದಾವಿಷ್ಣುನಾ ವ್ಯಾಕುರು ಇತ್ಯಶರೀರವಚನತಯಾ

ಪ್ಯುಕ್ತಂ ವಚನಂ ಶ್ರುತ್ವಾ ಶಿಷ್ಯೇಭ್ಯೋ ವ್ಯಾಖ್ಯಾತವಾನ್ ಇತಿ। ಅಥೋ ವ್ಯಾಖ್ಯಾನಾನಂತರಂ ಸತ್ತಪಾಃಸತ್‌ಸ ಮೀಚೀನಂ ಕಾಷ್ಠಮೌನಾಖ್ಯಂ ತಪಃ ಯಸ್ಯಸಃ ತಾದೃಶಃ, ಸಮೀಚೀನತಪೋವಾನ್, ಕೃಷ್ಣನುನ್ನಃ ಕೃಷ್ಣೇನ ವೇದವ್ಯಾಸೇನ ನುನ್ನಃ ಸ್ವಾಶ್ರಮಂ ಪ್ರತಿ ಆಗಂತುಂ ಪ್ರೇರಿತಃ, ವೇದವ್ಯಾಸಃ ಮಹಾಬದರಿಕಾಶ್ರಮಾದಣು ಬದರಿಕಾಶ್ರಮಂ ಪ್ರತಿ (ಆಗತ್ಯ) ಕಿಂಚಿಜ್ಞನಾ ನಾಂ (ಕೇಷಾಂಚಿಜ್ಞನಾನಾಂ) ಅಪ್ರಕಾಶತಯಾ ಆಗತ್ಯ, ಅತ್ರತ್ಯಂ ಪೂರ್ಣಬೋಧಂ ಸ್ವಾಶ್ರಮಂ ಪ್ರತಿ ಆಗಚ್ಛ ಇತ್ಯುಕ್ತವಾನ್ ಇತಿ ಭಾವಃ। ಆಪ್ತೇಭ್ಯಃ ಆಪ್ತಶಿಷ್ಯಭ್ಯಃ ಕಾರ್ಯಂ ಮಹಾಬದರಿಕಾಶ್ರಮಂ ಪ್ರತಿಗಮನರೂಪ ಲಿಖತೀತಿ ಸಃ ತಥಾ, (ಅಹಂ) ವ್ಯಾಸಶ್ರಮಂ ಪ್ರತಿಗಮಿಷ್ಯಾಮಿ, ಭವಂತಃ ಅತ್ರೈವ ತಿಷ್ಠಂತು ಇತಿ ಶಿಷ್ಯಾನ್ ಪ್ರತಿ ಇಮಾಂ ವಾಚಂ ಕಾಷ್ಠಮೌನಭಂಗಭಿಯಾ ಭೂಮೌ ಲಿಖಿತವಾನ್ ಉತಿಭಾವಃ । ಪಾಣಿಮಾತ್ರಾತ್, ಪಾಣಿರೇವ ಪಾಣಿಮಾತ್ರಂ ತಸ್ಮಾತ್ ಕೇವಲ ಪಾಣಿವಾಯನ್ನೈವ ಇತಿಯಾವತ್, ಸ್ವಂಸ್ವಾತ್ಮಾನಂ, ಅನುಗತನಿಜಪ್ರೇರಕಃ, ಸಹೈವ ಅನುಗಚ್ಛನ್, ಯಃ ನಿಜಃ, ಸ್ವೀಯಃ ಶಿಷ್ಯಃ ತಸ್ಯಪ್ರೇರಕಃ ಗಚ್ಛೆಇತಿ ಪ್ರೇರಕಃ ಇತ್ಯರ್ಥ । ಮಹಾಬದರಿಕಾಶ್ರಮಂ ಪ್ರಾಪ್ತುಂ ಶೀಘ್ರಂ ಧಾವನ್ ಪೂರ್ಣಬೋಧಃ ಸ್ವವಿರಹಾಸಹಿಷ್ಣು ತಯಾ ಆಸಾಯಂ ಅನುಧಾವಂತಂ ಸತ್ಯತೀರ್ಥಂ ದೃಷ್ಟ್ವಾ ಪರ್ವತಾತ್ ಪರ್ವತಾಂತರಂ ಅವಪ್ಲುತ್ಯ ಗಚ್ಛನ್, ಸ್ವಪಾಣಿವಾಯನಾ ಅಣುಬದರಿಕಾಶ್ರಮಂ (ಪ್ರತಿ) ಸತ್ಯತೀರ್ಥಂ ಪ್ರಾಪಿತವಾನ್ ಇತಿಭಾವಃ । ಮಾರುತ್ಯಾಭಃ ಮಾರುತೇಃ ಹನುಮತಃ ಆಭಾ ಇವ ಅಭಾಯಸ್ಯಸಃ, ಹನುಮಾನ್ ಇವ ಪರ್ವತಾತ್ ಪರ್ವತಾಂತರಂ ಉತ್ಪ್ಲುತ್ಯ ಗಚ್ಛನ್, ಮಾರುತ್ಯಾಭಃ ಮರುತ್‌ಕುಮಾರಃ ಭೀಮಸೇನಃ ಇವ ಶತ್ರುಭಯಂಕರಃ ಸನ್ ಇತ್ಯರ್ಥಃ। ಗಿರಿಣಾ ಹಿಮವತ್ಪರ್ವತೇನ ಸಾರ್ಧಂ ಹರಿಂ ಶ್ರೀಕೃಷ್ಣಂ ಪ್ರಪಶ್ಯನ್ ಈಕ್ಷಮಾಣಃ, ನಾನಾರತ್ನಭೂಷಿತ ಹಿಮಾಲಯಂ ದೃಷ್ಟ್ವಾ, ಶ್ರೀಕೃಷ್ಣಂ ಸಸ್ಮಾರ ಇತಿ ಭಾವಃ। ಹರಿಂ ವೇದವ್ಯಾಸಂ ಇತಿವಾ। ಸಂಪೂರ್ಣಬೋಧಃ, ಮೇ ಋದ್ಧ್ಯೈ ಸ್ಯಾತ್ ಅಸ್ತು, ಅಸಭುವಿ (ವಿಧಿ) ಲಿಙ್ ॥೧೨॥

**ಪದಚ್ಛೇದ** - ಗಂಗಾತಾರೀ, ಸುಕರ್ಮಾ, ಉಪಗತಬದರಿಕಾಂತಃ, ಅತ್ರ, ನಾರಾಯಣಂ, ಯಃ, ನತ್ವಾ, ಏಕಾಂತೇ, ಸಮುದ್ಯತ್ ಪ್ರವಚನಕೃತ್, ಅಥೋ, ಸತ್ತಪಾಃ, ಕೃಷ್ಣನುನ್ನಃ, ಆಪ್ತೇಭ್ಯಃ, ಕಾರ್ಯಲೇಖೀ, ಸ್ವಂ, ಅನುಗತನಿಜಪ್ರೇರಕಃ, ಪಾಣಿಮಾತ್ರಾತ್, ಮಾರುತ್ಯಾಭಃ, ಪ್ರಪಶ್ಯನ್, ಹರಿಂ, ಅಪಿ, ಗಿರಿಣಾ, ಸಾರ್ಧಂ, ಋದ್ಧ್ಯೈ, ಸಃ, ಮೇ, ಸ್ಯಾತ್॥

**ಅನ್ವಯ** - ಯಃ, ಗಂಗಾತಾರೀ, ಸುಕರ್ಮಾ, ಉಪಗತಬದರಿಕಾಂತಃ ಅತ್ರ ನಾರಾಯಣಂ ನತ್ವಾ, ಏಕಾಂತೇ ಸಮುದ್ಯತ್ ಪ್ರವಚನಕೃತ್, ಅಥೋ ಸತ್ತಪಾಃ, ಕೃಷ್ಣನುನ್ನಃ, ಆಪ್ತೇಭ್ಯಃ ಕಾರ್ಯಲೇಖೀ, ಪಾಣಿಮಾತ್ರಾತ್ ಸ್ವಂ ಅನುಗತನಿಜಪ್ರೇರಕಃ, ಮಾರುತ್ಯಾಭಃ, ಗಿರಿಣಾ ಸಾರ್ಧಂ ಹರಿಂ ಅಪಿ ಪ್ರಪಶ್ಯನ್ ಸಃ ಮೇ ಋದ್ಧ್ಯೈ ಸ್ಯಾತ್.

**ಅನ್ವಯಾರ್ಥ** - ಯಃ=ಯಾವ ಶ್ರೀಮಧ್ವಾಚಾರ್ಯರು, ಗಂಗಾತಾರೀ=ಗಂಗೆಯನ್ನು ದಾಟಿದವರಾಗಿ, ಸುಕರ್ಮಾ= ಉತ್ತಮವಾದ (ಆಶ್ಚರ್ಯಕರವಾದ) ವ್ಯಾಪಾರಗಳುಳ್ಳವರಾಗಿ, ಉಪಗತಬದರಿಕಾಂತಃ, ಉಪಗತ=ಹೊಂದಿದ, ಬದರಿಕಾ= ಬದರಿಕಾಶ್ರಮದ, ಅಂತಃ=ಸಮೀಪವುಳ್ಳವರಾಗಿ ಅತ್ರ=ಈ ಬದರಿಕಾಶ್ರಮದಲ್ಲಿ, ನಾರಾಯಣಂ, ಪ್ರತಿಮೆಯಲ್ಲಿ ಸನ್ನಿಹಿತನಾದ ಬದರೀ ನಾರಾಯಣನನ್ನು, ನತ್ವಾ=ನಮಸ್ಕರಿಸಿ, ಏಕಾಂತೇ=ಏಕಾಂತ ಪ್ರದೇಶದಲ್ಲಿ ಸಮುದ್ಯತ್ ಪ್ರವಚನಕೃತ್=ಸಮುದ್ಯತ್= ಚೆನ್ನಾಗಿ ಪ್ರಕಟವಾದ, ಪ್ರವಚನ=ಗೀತಾಭಾಷ್ಯಪ್ರವಚನವನ್ನು, ಕಾರೀ=ಮಾಡಿರುವ, ಅಥೋ=ಅನಂತರ, ಸತ್ತಪಾಃ=ಉತ್ಕೃಷ್ಟವಾದ ಕಾಷ್ಠಮೌನವೆಂಬ ಉಪವಾಸವುಳ್ಳ, ಕೃಷ್ಣನುನ್ನಃ=ಶ್ರೀ ವೇದವ್ಯಾಸರಿಂದ ಪ್ರೇರಿತರಾದ, ಆಪ್ತೇಭ್ಯಃ=ವಿಶ್ವಾಸಿಗಳಾದ ಶಿಷ್ಯರಿಗೋಸ್ಕರ, ಕಾರ್ಯಲೇಖೀ=ನಾನು ವ್ಯಾಸಾಶ್ರಮಕ್ಕೆ ಹೋಗುತ್ತಿದ್ದೇನೆ. ನೀವು ಇಲ್ಲಿಯೇ ಇರಿ ಎಂಬ ತನ್ನ ಮತ್ತು ಶಿಷ್ಯರಕರ್ತವ್ಯವನ್ನು (ಭೂಮಿಯ ಮೇಲೆ) ಬರೆದಿರುವ, ಪಾಣಿಮಾತ್ರಾತ್=ಕೇವಲ ಕೈಯ ಸಂಜ್ಞೆಯಿಂದ, ಸ್ವಂ=ತನ್ನನ್ನು, ಅನುಗತ=ಹಿಂಬಾಲಿಸಿದ, ನಿಜ=ತನ್ನವರಾದ ಸತ್ಯತೀರ್ಥರನ್ನು, ಪ್ರೇರಕಃ=(ಹಿಂತಿರುಗುವಂತೆ) ಪ್ರೇರಿಸಿದ, ಮಾರುತ್ಯಾಭಃ=ವಾಯುಪುತ್ರನಾದ ಹನುಮಂತನ ಕಾಂತಿಯಂತೆ ಕಾಂತಿಯುಳ್ಳ ಅಥವಾ ಮಾರುತ್ಯಾಭಃ=ವಾಯುಪುತ್ರನಾದ ಭೀಮಸೇನನ ಕಾಂತಿಯಂತೆ ಕಾಂತಿಯುಳ್ಳ (ಶತ್ರುಭಯಂಕರರಾದ) ಗಿರಿಣಾ ಸಾರ್ಧಂ=ಹಿಮಾಲಯ ಪರ್ವತದಿಂದ ಕೂಡಿಕೊಂಡು, ಹರಿಂ ಅಪಿ= ಶ್ರೀಮನ್ನಾರಾಯಣನನ್ನೂ, ಪ್ರಪಶ್ಯನ್=ನೋಡುತ್ತಿರುವವರಾಗಿ (ಗಿರಿಯಲ್ಲಿ ಹರಿಸಾಮ್ಯವನ್ನೂ, ಹರಿಯನ್ನೂ ನೋಡುತ್ತಿರುವ) ಸಃ=ಆ ಶ್ರೀಮಧ್ವಾಚಾರ್ಯರು, ಮೇ=ನನ್ನ, ಋದ್ಧ್ಯೈ=ಅಭಿವೃದ್ಧಿಗೋಸ್ಕರ, ಸ್ಯಾತ್=ಆಗಲಿ.

**ತಾತ್ಪರ್ಯ** - ಆಚಾರ್ಯರು ತಮ್ಮ ಗುರುಗಳ ಅಪ್ಪಣೆ ಪಡೆದು ಉತ್ತರದೇಶದ ದಿಗ್ವಿಜಯ ಮಾಡುತ್ತಾ ಗಂಗೆಯ ಬಳಿ ಬಂದು, ಆ ಗಂಗೆಯನ್ನೂ ದಾಟಿದರು. ದಾರಿಯಲ್ಲಿ ಅನೇಕ ಅದ್ಭುತ ವ್ಯಾಪಾರಗಳನ್ನು ಮಾಡಿ ತೋರಿಸಿದರು. ಹಾಗೆಯೇ ಗಂಗೆಯನ್ನು ದಾಟಿ ಮುಂದಕ್ಕೆ ಹೋಗುತ್ತಾ ಮನುಷ್ಯ ಗೋಚರವಾದ ಚಿಕ್ಕಬದರಿಯ ಸಮೀಪಕ್ಕೆ ಬಂದರು. ಅಲ್ಲಿ ಬದರಿಕಾಶ್ರಮದಲ್ಲಿ ಪ್ರತಿಮೆಯನ್ನು ಸನ್ನಿಧಾನವಿಟ್ಟಿರುವ ಬದರೀನಾರಾಯಣ ಮುನಿರೂಪನಾದ ಶ್ರೀಹರಿಯನ್ನು ವಂದಿಸಿದರು. ಅಲ್ಲಿ ಶ್ರೀಹರಿಯ ಎದುರು ಪಾಠ ಹೇಳುತ್ತಾ ಇದ್ದಾಗ ಶಿಷ್ಯರು ಮಲಗಿದ್ದರು. ಸಾಕ್ಷಾತ್ ನಾರಾಯಣನೇ ನೆಲವನ್ನು ಕೈಯಿಂದ ಬಡಿದು ಪ್ರವಚನ ಮಾಡು ಎಂದು ಹೇಳಿದಾಗ ಶಿಷ್ಯರನ್ನು ಎಬ್ಬಿಸಿ ಬದರೀನಾರಾಯಣನ ಎದುರಿನಲ್ಲಿಯೇ ಗೀತಾಭಾಷ್ಯಪ್ರವಚನವನ್ನು ಮಾಡಿದರು. ಅಲ್ಲಿಯೇ ಕೆಲವು ದಿನಗಳವರೆಗೆ ಇರುತ್ತಾ ತನ್ನಲ್ಲಿ ನಿತ್ಯಾನುಗ್ರಹಪೂರ್ಣನಾದ ಹರಿಯ ಸಂತೋಷ ವಿಶೇಷವನ್ನು ಅಪೇಕ್ಷಿಸಿ ಒಂದು ಮಂಡಲದವರೆಗೆ ಕಾಷ್ಠಮೌನವೆಂಬ ಉಪವಾಸರೂಪವಾದ ತಪಸ್ಸನ್ನು ಮಾಡಿದರು. ಒಂದು ದಿನ ಆಚಾರ್ಯರು ಪಾಠವನ್ನು ಮುಗಿಸಿದ್ದಾಗ ಶ್ರೀ ವೇದವ್ಯಾಸರೇ ಅಲ್ಲಿಗೆ ಬಂದು ನನ್ನ ಆಶ್ರಮಕ್ಕೆ ಎಂದರೆ ದೊಡ್ಡಬದರಿಗೆ ಬಾ ಎಂದು ಪ್ರೇರಿಸಿದರು. ಇತರರು ಪ್ರಕಾಶವಿಶೇಷವನ್ನು ನೋಡಿ ಶ್ರೀ ವೇದವ್ಯಾಸರು ಬಂದಿದ್ದರು ಎಂದು ತಿಳಿಸಿದರು. ಆಚಾರ್ಯರು ಆ ರಾತ್ರಿಯೇ ಶಿಷ್ಯರಿಗೆ ನೆಲದಲ್ಲಿ ಅವರ ಕರ್ತವ್ಯವನ್ನು ಬರೆದು ತಿಳಿಸಿದರು. ಬದರಿಗೆ ಸಮಾನವಾದ ಸ್ಥಳವಿಲ್ಲ, ಇಲ್ಲಿಯ ತೀರ್ಥಕ್ಕೆ ಸಮಾನವಾದ ತೀರ್ಥವಿಲ್ಲ, ನಮ್ಮ ಮಾತಿಗೆ ಸಮಾನವಾದ ಹಿತವಚನವಿಲ್ಲ, ವಿಷ್ಣುವಿಗೆ ಸಮಾನವಾದ ದೇವತೆಯಿಲ್ಲ. ನಾವು ಈಗ ನಮ್ಮ ಗುರುಗಳಾದ ಶ್ರೀ ವೇದವ್ಯಾಸ ರೂಪಿಯಾದ ಶ್ರೀಹರಿಯನ್ನು ನೋಡಲು ಹೋಗುತ್ತಿದ್ದೇವೆ. ನಾವು ಹಿಂತಿರುಗಿ ಬರುತ್ತೇವೆಯೋ ಇಲ್ಲವೋ ಎಂಬುದನ್ನು ಅವನೇ ಬಲ್ಲನು ಎಂದು ಬರೆದು ಆಚಾರ್ಯರು ಹೊರಟುಹೋದರು. ಆಚಾರ್ಯರ ವಿಯೋಗವನ್ನು ಸಹಿಸಲಾರದ ಶ್ರೀ ಸತ್ಯತೀರ್ಥರೆಂಬವರು ಅವರ ಹಿಂದೆಯೇ ಹೋದರು. ಸಾಯಂಕಾಲವಾದಾಗ ಆಚಾರ್ಯರು ತನ್ನ ಶಿಷ್ಯನು ಹಿಂಬಾಲಿಸಿ ಬರುತ್ತಿರುವುದನ್ನು ನೋಡಿ ಕೈಯನ್ನು ಬೀಸಿ ಹಿಂತಿರುಗಿ ಹೋಗುವಂತೆ ಸೂಚಿಸಿ ಆ ಕೈಯ ಗಾಳಿಯಿಂದಲೇ ಆ ಶಿಷ್ಯನನ್ನು ಚಿಕ್ಕಬದರಿಕಾಶ್ರಮಕ್ಕೆ ಸೇರಿಸಿದರು. ಆಚಾರ್ಯರು ವಾಯುಪುತ್ರನಾದ ಹನುಮಂತನಂತೆ ಒಂದು ಬಂಡೆಕಲ್ಲಿನಿಂದ ಇನ್ನೊಂದು ಬಂಡೆಕಲ್ಲಿಗೆ ಹಾರುತ್ತಾಹೋಗುತ್ತಿದ್ದರು. ವಾಯುಪುತ್ರನಾದ ಭೀಮಸೇನನಂತೆ ಕ್ರೂರಮೃಗಗಳಿಗೆ, ದಾನವಾದಿಗಳಿಗೆ ಭಯಂಕರರಾಗಿ ಕಾಣುತ್ತಿದ್ದರು. ಹೀಗೆ ತಮ್ಮ ಹಿಂದಿನ ಎರಡು ಅವತಾರಗಳ ಕುರುಹುಗಳನ್ನು ತೋರಿಸುತ್ತಾ ಹೋಗುತ್ತಿರುವ ಆಚಾರ್ಯರು ಸರ್ವೋನ್ನತನಾದ ಹಿಮಾಲಯವನ್ನು ನೋಡಿ, ಸರ್ವೋತ್ತಮನಾದ ಹರಿಯನ್ನು ಅಲ್ಲಿ ನೆನೆದರು ಮತ್ತು ಕಂಡರು. ನಾನಾರತ್ನವಿಭೂಷಿತವಾದ ಹಿಮಾಲಯವನ್ನು ಕಂಡಾಗ ನಾನಾಭರಣಭೂಷಿತನಾದ ಶ್ರೀ ಹರಿಯಸ್ಮರಣೆ ಬಂದು, ಆಚಾರ್ಯರಿಗೆ ಹರಿಸಾಕ್ಷಾತ್ಕಾರವೂ ಆಯಿತು. ವೇದವ್ಯಾಸರೆಂಬ ಹರಿಯನ್ನೂ, ಹಿಮಾಲಯವೆಂಬ ಗಿರಿಯನ್ನೂ ಆಚಾರ್ಯರು ಒಟ್ಟಿಗೆ ಕಂಡರು. ಹೀಗೆ ಲೋಕಾದ್ಭುತವಾದ ಚರಿತ್ರೆಯುಳ್ಳ ಆಚಾರ್ಯರು ನನಗೆ ನನ್ನಂತಿರುವ ಸಮಸ್ತ ಸಜ್ಜನರಿಗೆ ಐಹಿಕಪಾರತ್ರಿಕ ಸಂಪತ್ತುಗಳಿಗೆ ಕಾರಣರಾಗಲಿ ಎಂದು ಪ್ರಾರ್ಥನೆ ಮಾಡಿದ್ದಾರೆ.

**ವಿಗ್ರಹ** - ಗಂಗಾಂ ತರತೀತಿ ಗಂಗಾತಾರೀ, ಸುಶೋಭನಂ ಕರ್ಮಯಸ್ಯಸಃ ಸುಕರ್ಮಾ (ಸುಕರ್ಮನ್ ಶಬ್ದ) ಬದರಿಕಾಯಾ ಅಂತಃ ಬದರಿಕಾಂತಃ, ಉಪಗತಃ ಬದರಿಕಾಂತಃ ಯೇನ ಸಃ ಉಪಗತಬದರಿಕಾಂತಃ, ಸಮುದ್ಯತ್ ಪ್ರವಚನಂ ಕರೋತೀತಿ ಸಮುದ್ಯತ್ ಪ್ರವಚನಕೃತ್, ಸತ್‌ತಪಃ ಯಸ್ಯಸಃ ಸತ್ತಪಾಃ (ಸತ್ತಪಸ್ ಶಬ್ದಪುಂ) ಕೃಷ್ಣೇನ ನುನ್ನಃ ಕೃಷ್ಣನುನ್ನಃ, ಕಾರ್ಯಂ ಲಿಖತಿ ಇತಿ ಕಾರ್ಯಲೇಖೀ, ಅನುಗತಶ್ಚಾಸೌನಿಜಶ್ಚ ಅನುಗತನಿಜಃ ಅನುಗತನಿಜಸ್ಯ ಪ್ರೇರಕಃ ಅನುಗತನಿಜಪ್ರೇರಕಃ, ಪಾಣಿರೇವ ಪಾಣಿಮಾತ್ರಂ ತಸ್ಮಾತ್, ಮಾರುತಸ್ಯ ಅಪತ್ಯಂ ಪುಮಾನ್ ಮಾರುತಿಃ, ಮಾರುತೇಃ ಆಭಾ ಇವ ಆಭಾ ಯಸ್ಯಸಃ ಮಾರುತ್ಯಾಭಃ

**ಕ್ರಿಯಾಪದ** - ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಂ ಸ್ಯಾವ, ಸ್ಯಾಮ, ಅಸಭೂವಿ, ಪರ ಅಕ ವಿಧಿಲಿಙ್.

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಪ್ರತಿಪದಾರ್ಥಃ, ಗಂಗೇತಿ, ಯಃ=ಯಾವ ಶ್ರೀಮಧ್ವಾಚಾರ್ಯರು ಗಂಗಾತಾರೀ, ಗಂಗಾಂತರತೀತಿ ಸಃ ತಥಾ=ಗಂಗಾತಾರೀ ಎಂದರೆ ಗಂಗೆಯನ್ನು ಯಾವನು ದಾಟುತ್ತಾನೋ ಅವನು 'ಗಂಗಾತಾರೀ' ಎಂದು ಹೇಳಿಸಿಕೊಳ್ಳುತ್ತಾನೆ. 'ಸುಕರ್ಮಾ' ಎಂದರೆ ತತ್ರತತ್ರ=ಅಲ್ಲಲ್ಲಿ, ಶೋಭನ ಚರಿತಃ ಸನ್=ಮಂಗಳಕರವಾದ ಅದ್ಭುತ ವ್ಯಾಪಾರವುಳ್ಳವರಾಗಿ, ಉಪಗತಬದರಿಕಾಂತಃ ಎಂದರೆ ಯೇನ=ಯಾರಿಂದ ಉಪಗತಃ=ಪ್ರಾಪ್ತಃ, ಅಂತಃ ಎಂದರೆ ಸಮೀಪವು, ಇದೆಯೋ, ಸಃ=ಅವನು, ತಥಾ=ಹಾಗೆ, ಅಂದರೆ ಉಪಗತಬದರಿಕಾಂತಃ ಎಂಬ ವಿಶೇಷಣವುಳ್ಳವನಾಗುತ್ತಾನೆ. ಅತ್ರ=ಬದರಿಕಾಶ್ರಮೇ=ಈ ಬದರಿಕಾಶ್ರಮದಲ್ಲಿ, ನಾರಾಯಣಂ ಅಂದರೆ ಅರ್ಚಾಯಾಂ ಸನ್ನಿಹಿತಂ ನಾರಾಯಣಂ=ಪ್ರತಿಮೆಯಲ್ಲಿ ಸನ್ನಿಧಾನವನ್ನಿಟ್ಟಿರುವ ನಾರಾಯಣ ಮುನಿಯ ರೂಪದಲ್ಲಿರುವ ಶ್ರೀ ಹರಿಯನ್ನು, ನತ್ವಾ=ನಮಸ್ಕರಿಸಿ, ಏಕಾಂತೇ=ಯಾರೂ ಇಲ್ಲದಿರುವ ಪ್ರದೇಶದಲ್ಲಿ, ಸಮುದ್ಯತ್ ಪ್ರವಚನಕೃತ್= ಸಮ್ಯಗುತ್ಥಾಪಿತಂ=ಸಮುದ್ಯತ್ ಎಂದರೆ ಚೆನ್ನಾಗಿ ಪ್ರಕಟಗೊಳಿಸಲ್ಪಟ್ಟ, ಪ್ರವಚನಂ ವ್ಯಾಖ್ಯಾನಂ=ಪ್ರವಚನ ಎಂದರೆ ವ್ಯಾಖ್ಯಾನವನ್ನು, ಕರೋತಿ ಇತಿ=ಮಾಡುತ್ತಾನೆ ಎಂದು, ಸಃ=ಆ ಪ್ರವಚನವನ್ನು ಮಾಡುವವನು, ತಥಾ=ಸಮುದ್ಯತ್ ಪ್ರವಚನಕೃತ್ ಎಂಬ ವಿಶೇಷಣದಿಂದ ಹೇಳಲ್ಪಡುತ್ತಾನೆ. "ಸಮುದ್ಯತ್ ಪ್ರವಚನಕೃತ್" ಎಂಬ ವಿಶೇಷಣದ ತಾತ್ಪರ್ಯವನ್ನು ಹೇಳುತ್ತಾರೆ. ಯದಾಗೀತಾಭಾಷ್ಯಂ ಬದರಿಕಾಶ್ರಮಸ್ಥವಿಷ್ಣವೇ ಉಪಾಯನತ್ವೇನ ಆರ್ಪಯತ್ ತದಾ ವಿಷ್ಣುನಾ ವ್ಯಾಕುರು ಇತಿ ಅಶರೀರ ವಚನತಯಾ ಉಕ್ತಂ ವಚನಂ ಶ್ರುತ್ವಾ ಶಿಷ್ಯೇಭ್ಯಃ ವ್ಯಾಖ್ಯಾತವಾನ್ ಇತಿ (ಭಾವಃ)=ಯಾವಾಗ ಗೀತಾಭಾಷ್ಯವನ್ನು ಬದರಿಕಾಶ್ರಮದಲ್ಲಿರುವ ಶ್ರೀಮನ್ನಾರಾಯಣನಿಗೆ ಕಾಣಿಕೆಯಾಗಿ ಅರ್ಪಿಸಿದರೋ ಆಗ ಶ್ರೀಮನ್ನಾರಾಯಣನಿಂದ ಪ್ರವಚನ ಮಾಡು ಎಂದು ಅಶರೀರವಾಣಿಯಿಂದ ಹೇಳಲ್ಪಟ್ಟ ಮಾತನ್ನು ಕೇಳಿ ಶಿಷ್ಯರಿಗೆ ಗೀತಾಭಾಷ್ಯಪ್ರವಚನವನ್ನು ಮಾಡಿತರು ಎಂದು ಭಾವ. ಅಥೋವ್ಯಾಖ್ಯಾನಾನಂತರಂ= ಅಥೋ ಎಂದರೆ ಪ್ರವಚನ ಮಾಡಿದ ಮೇಲೆ, ಸತ್ತಪಾಃ ಸಮೀಚೀನಕಾಷ್ಠಮೌನಾಖ್ಯತಪೋವಾನ್='ಸತ್ತಪಾಃ' ಎಂದರೆ ಉತ್ಕೃಷ್ಟವಾದ ಕಾಷ್ಠಮೌನವೆಂಬ ತಪಸ್ಸು ಉಳ್ಳವರಾಗಿ, ಕೃಷ್ಣನುನ್ನಃ ಕೃಷ್ಣೇನ ವೇದವ್ಯಾಸೇನ ನುನ್ನಃ ಸ್ವಾಶ್ರಮಂಪ್ರತಿ ಆಗಂತುಂ ಪ್ರೇರಿತಃ=ಕೃಷ್ಣನುನ್ನಃ ಎಂದರೆ, ಕೃಷ್ಣೇನ=ಶ್ರೀವೇದವ್ಯಾಸದೇವರಿಂದ, ಸ್ವಾಶ್ರಮಂಪ್ರತಿ=ತನ್ನ ಆಶ್ರಮವನ್ನು ಕುರಿತು, ಆಗಂತುಂ=ಬರುವುದಕ್ಕೆ, ಪ್ರೇರಿತಃ=ಪ್ರೇರಿಸಲ್ಪಟ್ಟವರು ಎಂದು ಅರ್ಥ. ಕೃಷ್ಣನುನ್ನಃ ವಿಶೇಷಣದ ಅಭಿಪ್ರಾಯವನ್ನು ಹೇಳುತ್ತಾರೆ. 'ವೇದವ್ಯಾಸಃ=ಶ್ರೀ ವೇದವ್ಯಾಸರು. ಮಹಾಬದರಿಕಾಶ್ರಮಾತ್=ದೊಡ್ಡ ಬದರಿಕಾಶ್ರಮದಿಂದ, ಅಣು ಬದರಿಕಾಶ್ರಮಂ ಪ್ರತಿ=ಚಿಕ್ಕ ಬದರಿಕಾಶ್ರಮವನ್ನು ಕುರಿತು, ಕಿಂಚಿತ್ ಜನಾನಾಂ ಪಾಠಾನಂತರಂ=ಕೆಲವು ಜನರಿಗೆ ಸ್ವಲ್ಪಹೊತ್ತು ಆಚಾರ್ಯರು ಪಾಠಹೇಳಿದ ಮೇಲೆ, ಅಪ್ರಕಾಶತಯಾ ಆಗತ್ಯ=ರಹಸ್ಯವಾಗಿ ಯಾರಿಗೂ ತಿಳಿಯದಂತೆ ಬಂದು ಅತ್ರತ್ಯಂ ಪೂರ್ಣಬೋಧಂ=ಅಲ್ಲಿಯೇ ಇರುವ ಶ್ರೀಮಧ್ವಾಚಾರ್ಯರನ್ನು ಕುರಿತು, ಸ್ವಾಶ್ರಮಂ ಪ್ರತಿ=ತನ್ನ ಆಶ್ರಮವನ್ನು ಕುರಿತು, ಆಗಚ್ಛ=ಬಾ ಇತಿ ಉಕ್ತವಾನ್ ಎಂದು ಹೇಳಿದರು. ಇತಿಭಾವಃ=ಎಂದು ಕೃಷ್ಣನುನ್ನಃ ಎಂಬ ವಿಶೇಷಣದ ಅಭಿಪ್ರಾಯವು. ಆಪ್ತೇಭ್ಯಃ=ಆಪ್ತ ಶಿಷ್ಯೇಭ್ಯಃ=ಆಪ್ತೇಭ್ಯಃ ಎಂದರೆ ವಿಶ್ವಾಸಿಗಳಾದ ಶಿಷ್ಯರಿಗೆ, ಕಾರ್ಯಲೇಖೀ= ಕಾರ್ಯಂ=ಕಾರ್ಯವನ್ನು, ಮಹಾಬದರಿಕಾಶ್ರಮಂ ಪ್ರತಿಗಮನರೂಪಂ=ದೊಡ್ಡ ಬದರಿಯನ್ನು ಕುರಿತು ಹೋಗುವಿಕೆ ಎಂಬ ಕಾರ್ಯವನ್ನು ಲಿಖತಿ ಇತಿ=ಬರೆಯುತ್ತಾರೆ ಎಂದು, ಸಃ=ಬರೆಯುವವರು ತಥಾ='ಆಪ್ತೇಭ್ಯಃ ಕಾರ್ಯಲೇಖೀ' ಎಂದು ವಿಶೇಷಣವುಳ್ಳವರು (ಆಗುತ್ತಾರೆ) ಆಪ್ತೇಭ್ಯಃ ಕಾರ್ಯಲೇಖೀ ಎಂಬ ವಿಶೇಷಣದ ಅಭಿಪ್ರಾಯವನ್ನು ಹೇಳುತ್ತಾರೆ. (ಅಹಂ)=ನಾನು, ವ್ಯಾಸಾಶ್ರಮಂ ಪ್ರತಿ=ಶ್ರೀವೇದವ್ಯಾಸರ ಆಶ್ರಮವನ್ನು ಕುರಿತು, ಗಮಿಷ್ಯಾಮಿ=ಹೋಗುವೆನು, ಭವಂತಃ=ನೀವೆಲ್ಲರೂ, ಅತ್ರೈವ=ಇಲ್ಲಿಯೇ, ತಿಷ್ಠಂತು=ಇರಬೇಕು. ಇತಿ=ಎಂದು ಶಿಷ್ಯಾನ್ ಪ್ರತಿ=ಶಿಷ್ಯರನ್ನು ಕುರಿತು, ಇಮಾಂ ವಾಚಂ=ಈ ಮಾತನ್ನು, ಕಾಷ್ಠಮೌನಭಂಗಿಭಿಯಾ=ತಾನು ಮಾಡುತ್ತಿರುವ ಕಾಷ್ಠಮೌನ ಏನನ್ನೂ ಮಾತಾಡದೆ ಸುಮ್ಮನೆ ಇರುವುದು ಎಂಬ ಮೌನವು ತದನಾಶದ ಹೆದರಿಕೆಯಿಂದ ಭೂಮೌ=ನೆಲದ ಮೇಲೆ, ಲಿಖಿತವಾನ್=ಬರೆದರು, ಇತಿಭಾವಃ=ಎಂದು 'ಆಪ್ತೇಭ್ಯಃ ಕಾರ್ಯಲೇಖೀ' ಎಂಬ ವಿಶೇಷಣದ ಅಭಿಪ್ರಾಯ. **ಪಾಣಿಮಾತ್ರಾತ್ ಎಂದರೆ**, ಪಾಣಿರೇವ=ಕೈಯೇ, ಪಾಣಿಮಾತ್ರಂ=ಪಾಣಿಮಾತ್ರ ಎಂದು ಹೇಳಲ್ಪಡುತ್ತದೆ. ಪಾಣಿ ಎಂದರೆ **ಕೈ, ಕೇವಲವಾಗಿ ಕೈ**, ಮತ್ತೇನೂ ಇಲ್ಲ ಎಂಬ ಅರ್ಥದಲ್ಲಿ 'ಮಾತ್ರ' ಎಂಬ ಪ್ರತ್ಯಯವು ಬರುತ್ತದೆ, **ತಸ್ಮಾತ್=ಕೇವಲ ಕೈಯಿಂದ**, ಕೇವಲ

ಪಾಣಿವಾಯುನಾ ಏವ ಇತಿಯಾವತ್=ಕೇವಲ ಕೈಯ ಗಾಳಿಯಿಂದಲೇ ಎಂದು ಅಭಿಪ್ರಾಯವು, ಸ್ವಂ=ಸ್ವಾತ್ಮಾನಂ=ಸ್ವಂ ಎಂದರೆ ತನ್ನನ್ನು 'ಅನುಗತ ನಿಜಪ್ರೇರಕಃ' ಸಹೈವ ಅನುಗಚ್ಛನ್=ತನ್ನ ಜೊತೆಗೇ ಹಿಂಬಾಲಿಸಿದ, ಯಃ ನಿಜಃ ಸ್ವೀಯಃ ಶಿಷ್ಯಃ=ಯಾವ='ನಿಜ' ಎಂದರೆ ತನ್ನವನಾದ ಶಿಷ್ಯನು ಇದ್ದಾನೋ, ತಸ್ಯ=ಅವನಿಗೆ, ಪ್ರೇರಕಃ 'ಸ್ವೀಗಚ್ಛ ಇತಿ ಪ್ರೇರಕಃ=ಪ್ರೇರಕ ಎಂದರೆ, ಹೋಗು ಎಂದು ಪ್ರೇರಿಸಿದವರು, ಇತಿ ಅರ್ಥಃ=ಎಂದು ಅಭಿಪ್ರಾಯವು ಮಹಾಬದರಿಕಾಶ್ರಮಂ ಪ್ರಾಪ್ತುಂ= ಮಹಾಬದರಿಕಾಶ್ರಮವನ್ನು ಸೇರುವುದಕ್ಕಾಗಿ, ಶೀಘ್ರಂ=ಧಾವನ್=ಬೇಗನೆ ಓಡುತ್ತಿರುವ, ಪೂರ್ಣಬೋಧಃ=ಶ್ರೀ ಪೂರ್ಣಪ್ರಜ್ಞರು, ಸ್ವವಿರಹಾಸಹಿಷ್ಣುತಯಾ=ತನ್ನ ವಿಯೋಗವನ್ನು ಸಹಿಸಲಾರದೆ ಇದ್ದುದರಿಂದ ಆಸಾಯಂ...ಸಾಯಂಕಾಲದವರೆಗೂ, ಅನುಧಾವಂತಂ=ಹಿಂಬಾಲಿಸಿ ಓಡುತ್ತಾ ಬರುತ್ತಿರುವ, ಸತ್ಯತೀರ್ಥಂ ದೃಷ್ಟ್ವಾ=ಸತ್ಯತೀರ್ಥರನ್ನು ನೋಡಿ, ಪರ್ವತಾತ್=ಒಂದು ಪರ್ವತದ ದೆಸೆಯಿಂದ ಪರ್ವತಾಂತರಂ=ಮತ್ತೊಂದು ಪರ್ವತವನ್ನು ಕುರಿತು, ಅವಪ್ಲುತ್ಯ=ಹಾರಿ ಗಚ್ಛನ್=ಹೋಗುತ್ತಾ, ಸ್ವಪಾಣಿವಾಯುವಾ=ತನ್ನ ಕೈಯ ಗಾಳಿಯಿಂದ, ಅಣುಬದರಿಕಾಶ್ರಮಂ=ಚಿಕ್ಕ ಬದರಿಯನ್ನು ಕುರಿತು, ಸತ್ಯತೀರ್ಥಂ=ಸತ್ಯತೀರ್ಥರನ್ನು ಪ್ರಾಪಿತವಾನ್=ತಲುಪಿಸಿದರು. ಇತಿಭಾವಃ=ಎಂದು ಸ್ವ 'ಪಾಣಿ ಮಾತ್ರಾತ್ ಸ್ವಮನುಗತ ನಿಜಪ್ರೇರಕಃ ಎಂಬ ವಿಶೇಷಣದ ಅಭಿಪ್ರಾಯ. 'ಮಾರುತ್ಯಾಭಃ' ಎಂದರೆ ಮಾರುತೇಃ=ಶ್ರೀ ಹನುಮಂತ ದೇವರ, ಆಭಾಇವ=ಕಾಂತಿಯಂತೆ, ಆಭಾ=ಕಾಂತಿಯು, ಯಸ್ಯಸಃ=ಯಾವನಿಗೆ ಇದೆಯೋ ಅವನು 'ಮಾರುತ್ಯಾಭಃ'=ಮಾರುತ್ಯಾಭ ಎಂಬ ವಿಶೇಷಣವುಳ್ಳವನಾಗುತ್ತಾನೆ, ಹನುಮಾನ್ ಇವ=ಹನುಮಂತನಂತೆ ಪರ್ವತಾತ್=ಒಂದು ಪರ್ವತದ ದೆಸೆಯಿಂದ ಪರ್ವತಾಂತರಂ=ಮತ್ತೊಂದು ಪರ್ವತವನ್ನು ಕುರಿತು, ಉತ್ಪ್ಲುತ್ಯ=ಹಾರಿ, ಗಚ್ಛನ್=ಹೋಗುತ್ತಿರುವವರು (ಎಂದು ಮಾರುತ್ಯಾಭಃ ಎಂಬ ವಿಶೇಷಣದ ಅಭಿಪ್ರಾಯ) ಮಾರುತ್ಯಾಭಃ ಎಂದರೆ ಮರುತ್ ಕುಮಾರಃ ಭೀಮಸೇನ ಇವ=ವಾಯುಪುತ್ರರಾದ ಭೀಮಸೇನ ದೇವರಂತೆ ಶತೃಭಯಂಕರ ಸ್ಸನ್ಇತ್ಯರ್ಥಃ=ಶತೃಗಳಿಗೆ ಭಯಂಕರರಾಗಿ ಎಂದು ಅರ್ಥ. (ಮಾರುತ್ಯಾಭಃ ಎಂಬ ವಿಶೇಷಣಕ್ಕೆ ಇದು ಮತ್ತೊಂದು ಅರ್ಥ) ಗಿರಿಣಾ ಹಿಮವತ್ಪರ್ವತೇನ ಸಾರ್ಧಂ=ಗಿರಿಣಾ ಎಂದರೆ ಹಿಮಾಲಯ ಪರ್ವತದಿಂದ, ಸಾರ್ಧಂ=ಸಹಿತವಾಗಿಯೇ, ಹರಿಂ=ಶ್ರೀ ಕೃಷ್ಣಂ ಹರಿಂ ಎಂದರೆ ಶ್ರೀಕೃಷ್ಣನನ್ನು ಪ್ರಪಶ್ಯನ್ ಈಕ್ಷಮಾಣಃ=ಪ್ರಪಶನ್ ಎಂದರೆ ನೋಡುತ್ತಾ ನಾನಾರತ್ನಭೂಷಿತ=ಅನೇಕ ವಿಧವಾದ ರತ್ನಗಳಿಂದ ಅಲಂಕೃತನಾದ, ಹಿಮಾಲಯಂದೃಷ್ಟ್ವಾ=ಹಿಮಾಲಯನನ್ನು ನೋಡಿ ಶ್ರೀಕೃಷ್ಣಂ ಸಸ್ಮಾರ=ಶ್ರೀ ಕೃಷ್ಣನನ್ನು ಸ್ಮರಿಸಿದರು. ಇತಿಭಾವಃ ಎಂದು, ಹರಿಂ ಅಪಿ ಗಿರಿಣಾ ಸಾರ್ಧಂ ಪ್ರಪಶ್ಯನ್ ಎಂಬ ವಿಶೇಷಣದ ಅಭಿಪ್ರಾಯವು. ಹರಿಂ ವೇದವ್ಯಾಸಂ ಇತಿವಾ= ಹರಿ ಎಂದರೆ ಶ್ರೀ ವೇದವ್ಯಾಸರನ್ನೂ, (ಹಿಮಾಲಯವನ್ನು ನೋಡುತ್ತಾ ಶ್ರೀ ವೇದವ್ಯಾಸರನ್ನು ನೋಡಿದರು) ಇತಿವಾ= ಎಂದಾಗಲೀ, ಅಭಿಪ್ರಾಯವು, ಸಃ ಪೂರ್ಣಬೋಧಃ=ಅಂತಹ ಶ್ರೀಮಧ್ವಾಚಾರ್ಯರು ಮೇ=ನನಗೆ, ಋದ್ಧ್ಯೈ ಅಭಿವೃದ್ಧ್ಯೈ=ಋದ್ಧ್ಯೈ ಎಂದರೆ ಅಭಿವೃದ್ಧಿಗೋಸ್ಕರ, ಸ್ಯಾತ್ ಅಸ್ತು=ಸ್ಯಾತ್ ಎಂದರೆ ಅಸ್ತು ಆಗಲಿ ಸ್ಯಾತ್ ಎಂಬಲ್ಲಿ ಅಸಭುವಿ, ಸತ್ತಾರ್ಥಕವಾದ ಅಸ್ ಧಾತು, ಅದರ ಲಿಜ್=ಲಕಾರವು.

**ಯೋಽಪಶ್ಯತ್ ಸ್ವಾಶ್ರಮಾಗ್ರ್ಯಂ ಮುನಿಮಹಿತ ಗುಣೋ ದಿವ್ಯಸಾಲಂ ಚ ಚಿತ್ರಂ**
**ತತ್ರರ್ಷೀಣಾಂ ಸಮಾಜೇ ಹರಿಮಪಿ ಮುನಿತಃ ಸತ್ಯವತ್ಯಾಂ ಪ್ರಜಾತಂ ।**
**ಕರ್ತಾರಂ ಭಾರತಾದೇರ್ಭರತವರಗುರುಂ ಬ್ರಹ್ಮಸೂತ್ರಸ್ಯಚಾಹೋ**
**ನಿರ್ದೋಷಂ ನಿತ್ಯಪೂರ್ಣಾಗಣಿತಗುಣಮಸೌ ಪ್ರೀಯತಾಂ ಮೇ ಸಚೇಶಃ ।।೧೩।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾ** - ಯೋಽಪಶ್ಯದಿತಿ। ಯಃ ಪೂರ್ಣಬೋಧಃ, ಸ್ವಾಶ್ರಮಾಗ್ರ್ಯಂ ಶೋಭಮಾನಾಶ್ರಮೇಷು ಶ್ರೇಷ್ಠಂ ಬದರಿಕಾಶ್ರಮಂ ಅಪಶ್ಯತ್। ಮುನಿಮಹಿತಗುಣಃ ಮುನಿಭಿಃ ಬದರಿಕಾಶ್ರಮಸ್ಥೈಃ ವ್ಯಾಸಪರಿವಾರಭೂತೈಃ ಮಹಿತಾಃ ಪೂಜಿತಾಃ ನಾನಾಪ್ರಕಾರೇಣ ಉತ್ಪ್ರೇಕ್ಷಿತಾಃ ಗುಣಾಃ ಕಲ್ಯಾಣಧರ್ಮಾಃ ಯಸ್ಯಸಃ ತಥಾ। ಆಗಚ್ಛಂತಂ ತಂ ಮಧ್ವಂ ದೃಷ್ಟ್ವಾ ಮುನಯಃ ಕಿಂ ಬ್ರಹ್ಮಾ ಕಿಂ ವಾಯುಃ, ಉತಸೂರ್ಯಃ, ಇತ್ಯಾದಿ ಪ್ರಕಾರೇಣ ಉತ್ಪ್ರೇಕಷಿತವಂತಃ ಇತ್ಯರ್ಥಃ। ಚಿತ್ರಂ ನಾನಾವರ್ಣಂ ದಿವ್ಯಸಾಲಂ ದಿವ್ಯಂ ಲೋಕವಿಲಕ್ಷಣಂ, ಸಾಲಂ ತರುಂ ತಸ್ಮಿನ್ ಆಶ್ರಮ ಮಧ್ಯೇ ಕಂಚನ ವೇದವ್ಯಾಸಸಮೀಪಸ್ಥಂ ಬದರೀವೃಕ್ಷಂ ಚ ಅಪಶ್ಯತ್ ಇತ್ಯನ್ವಯಃ। ತತ್ರ ಆಶ್ರಮ

ಮಧ್ಯಸ್ಥಂ ಬದರೀವೃಕ್ಷಸ್ಯ ಅಧಃ ಪ್ರದೇಶೇ ಋಷೀಣಾಂ ಸಮಾಜೇ ಸಮೂಹೇ ಹರಿಂ ಅಪಶ್ಯತ್ ಇತ್ಯನ್ವಯಃ। (ಸಃ) ಕೀದೃಶಃ (ಇತ್ಯತಃ) ತಂ ವಿಶಿನಷ್ಟಿ, ಮುನಿತಃ ಇತ್ಯಾದಿನಾ, ಮುನಿತಃ ಪರಾಶರಾತ್ ಸತ್ಯವತ್ಯಾಂ ಪ್ರಜಾತಂ ಆವಿರ್ಭೂತಂ ವೇದವ್ಯಾಸಂ ಇತಿಯಾವತ್, ಭಾರತಾದೇಃ ಅಷ್ಟಾದಶಪುರಾಣಾನಾಂ ಚ ಬ್ರಹ್ಮಸೂತ್ರಸ್ಯ ಚ ಕರ್ತಾರಂ ಪ್ರಣೇತಾರಂ, 'ಕರ್ತೃಕರ್ಮಣೋಃ ಕೃತಿ' ಇತಿಷಷ್ಠೀ। ಭರತವರಗುರುಂ ಭರತೇಷು ವರಾಣಾಂ ಶ್ರೇಷ್ಠಾನಾಂ ಪಾಂಡುವಾನಾಂ ಗುರುಂ ಹಿತೋಪದೇಶಕರ್ತಾರಂ ನಿರ್ದೋಷಂ ನಿತ್ಯಪೂರ್ಣಾಗಣಿತಗುಣಂ ನಿತ್ಯಾಃ ಪ್ರತ್ಯೇಕಂ ಪೂರ್ಣಾಃ ಅಗಣಿತಾಃ ಗುಣಾಃ ಕಲ್ಯಾಣಧರ್ಮಾಃ ಯಸ್ಯ ತಂ, ಏತಾದೃಶಗುಣವಿಶಿಷ್ಟತ್ವೇನ, ಅಪಶ್ಯತ್, ತತಃ ತೇಷಾಂ ಗುಣಾನಾಂ ಉಕ್ತಿಃ। ಅಸೌ ಏವಂವಿಧಗುಣ ವಿಶಿಷ್ಟತಯಾ ವೇದವ್ಯಾಸಸ್ಯ ದ್ರಷ್ಟಾಮಧ್ವಃ, ಸ ಚ ಈಶಃ ವೇದವ್ಯಾಸಶ್ಚ ಮೇ ಪ್ರೀಯತಾಂ (ಇತಿ) ಪ್ರತ್ಯೇಕಂ ಸಂಬಂಧಃ। ತೇನ ಏಕವಚನಂ ಸಾಧು। ಪ್ರೀಙ್ ಪ್ರೀಣನೇ ಆಶಿಷಿ ಕರ್ತರಿಲೋಟ್ ।।೧೩।।

**ಪದಚ್ಛೇದ** - ಯಃ, ಅಪಶ್ಯತ್, ಸ್ವಾಶ್ರಮಾಗ್ರ್ಯಂ, ಮುನಿಮಹಿತಗುಣಃ, ದಿವ್ಯಸಾಲಂ, ಚ, ಚಿತ್ರಂ, ತತ್ರ, ಋಷೀಣಾಂ, ಸಮಾಜೇ, ಹರಿಂ, ಅಪಿ, ಮುನಿತಃ, ಸತ್ಯವತ್ಯಾಂ, ಪ್ರಜಾತಂ, ಕರ್ತಾರಂ, ಭಾರತಾದೇಃ, ಭರತವರಗುರುಂ, ಬ್ರಹ್ಮಸೂತ್ರಸ್ಯ, ಚ, ಅಹೋ, ನಿರ್ದೋಷಂ, ನಿತ್ಯಪೂರ್ಣಾಗಣಿತಗುಣಂ, ಅಸೌ, ಪ್ರೀಯತಾಂ, ಮೇ, ಸಃ, ಚ, ಈಶಃ।

**ಅನ್ವಯ** - ಯಃ ಸ್ವಾಶ್ರಮಾಗ್ರ್ಯಂ ಅಪಶ್ಯತ್, ಮುನಿಮಹಿತಗುಣಃ ಚಿತ್ರಂ ದಿವ್ಯಸಾಲಂ ಚ (ಅಪಶ್ಯತ್) ತತ್ರ ಋಷೀಣಾಂ ಸಮಾಜೇ ಮುನಿತಃ ಸತ್ಯವತ್ಯಾಂ ಪ್ರಜಾತಂ ಭಾರತಾದೇಃ ಬ್ರಹ್ಮಸೂತ್ರಸ್ಯ ಚ ಕರ್ತಾರಂ ಭರತವರಗುರುಂ ನಿರ್ದೋಷಂ, ನಿತ್ಯಪೂರ್ಣಾಗಣಿತಗುಣಂ ಹರಿಂ ಅಪಿ ಅಪಶ್ಯತ್, ಅಹೋ, ಅಸೌ, ಸಃ ಈಶಶ್ಚ ಮೇ ಪ್ರೀಯತಾಂ.

**ಅನ್ವಯಾರ್ಥ** - ಯಃ=ಯಾವ ಶ್ರೀ ಪೂರ್ಣಪ್ರಜ್ಞಾಚಾರ್ಯರು, ಸ್ವಾಶ್ರಮಾಗ್ರ್ಯಂ=ಶೋಭಿಸುತ್ತಿರುವ ಆಶ್ರಮಗಳಲ್ಲಿ ಶ್ರೇಷ್ಠವಾದ ಬದರಿಕಾಶ್ರಮವನ್ನು, ಅಪಶ್ಯತ್=ನೋಡಿದರು. ಮುನಿಮಹಿತಗುಣಃ, ಮುನಿ=ಬದರಿಕಾಶ್ರಮದಲ್ಲಿರುವ ಶ್ರೀ ವೇದವ್ಯಾಸರ ಪರಿವಾರದವರಾದ ಮುನಿಗಳಿಂದ, ಮಹಿತ=ಪೂಜಿತವಾದ, ಗುಣಃ=ಮಂಗಳಕರವಾದ ಧರ್ಮಗಳುಳ್ಳ, ಶ್ರೀಮಧ್ವಾಚಾರ್ಯರು, ಚಿತ್ರಂ=ನಾನಾ ವರ್ಣಗಳಿಂದ ಕೂಡಿದ, ದಿವ್ಯಸಾಲಂ ಚ=ಲೋಕವಿಲಕ್ಷಣವಾದ ಸಾಲವೃಕ್ಷವನ್ನು (ಅಪಶ್ಯತ್=ನೋಡಿದರು) ತತ್ರ=ಆಶ್ರಮದ ಮಧ್ಯದಲ್ಲಿದ್ದ ಬದರೀ ವೃಕ್ಷದ ಕೆಳಗೆ, ಋಷೀಣಾಂ=ಋಷಿಗಳ, ಸಮಾಜೇ=ಸಮೂಹದಲ್ಲಿ, ಮುನಿತಃ=ಪರಾಶರ ಮುನಿಗಳಿಂದ, ಸತ್ಯವತ್ಯಾಂ=ಸತ್ಯವತೀದೇವಿಯಲ್ಲಿ, ಪ್ರಜಾತಂ ಆವಿರ್ಭೂತರಾದ, ಭಾರತಾದೇಃ=ಮಹಾಭಾರತವೇ ಮೊದಲಾಗಿ ಉಳ್ಳ ಹದಿನೆಂಟು ಪುರಾಣಸಮುದಾಯದ, ಬ್ರಹ್ಮಸೂತ್ರಸ್ಯಚ=ಮತ್ತು ಬ್ರಹ್ಮಮೀಮಾಂಸಾ ಶಾಸ್ತ್ರದ, ಕರ್ತಾರಂ=ನಿರ್ಮಾತೃಗಳಾದ, ಭರತವರಗುರುಂ=ಭರತವಂಶೋತ್ಪನ್ನರಲ್ಲಿ ಶ್ರೇಷ್ಠರಾದ ಪಾಂಡವರಿಗೆ ಹಿತೋಪದೇಶವನ್ನು ಮಾಡುವವರಾದ, ನಿರ್ದೋಷಂ=ಸಮಸ್ತದೋಷರಹಿತರಾದ, ನಿತ್ಯಪೂರ್ಣಾಗಣಿತಗುಣಂ, ನಿತ್ಯ=ಶಾಶ್ವತವಾದ ಪೂರ್ಣ=ಪ್ರತ್ಯೇಕವಾಗಿ ಅನವಧಿಕವಾದ, ಅಖಂಡವಾದ (ಯಾವ ನ್ಯೂನತೆಯೂ ಇಲ್ಲದಿರುವ) ಅಗಣಿತ=ಸಂಖ್ಯೆಯಿಲ್ಲದ, ಗುಣಂ=ಕಲ್ಯಾಣಸ್ವರೂಪವಾದ ಧರ್ಮಗಳುಳ್ಳ ಹರಿಂ ಅಪಿ=(ಶ್ರೀ ವೇದವ್ಯಾಸ ರೂಪಿಯಾದ) ನಾರಾಯಣ ದೇವರನ್ನು, (ಅಪಶ್ಯತ್=ನೋಡಿದರು) ಅಹೋ=ಆಶ್ಚರ್ಯವು, ಅಸೌ=ಈ ಶ್ರೀ ಮಧ್ವಾಚಾರ್ಯರು, ಸಃ ಈಶಃ ಚ=ಆ ಸ್ವಾಮಿಯಾದ ಶ್ರೀ ವೇದವ್ಯಾಸದೇವರೂ, ಮೇ=ನನಗೆ (ನನ್ನ ವಿಷಯದಲ್ಲಿ) ಪ್ರೀಯತಾಂ=ಸಂತುಷ್ಟರಾಗಲಿ.

**ತಾತ್ಪರ್ಯ** - ಶ್ರೀ ಮಧ್ವಾಚಾರ್ಯರು ಹಿಮಾಲಯವನ್ನು ದಾಟಿ ಅದರ ಮತ್ತೊಂದು ಪಾರ್ಶ್ವದಲ್ಲಿರುವ ಎಲ್ಲಾ ಆಶ್ರಮಗಳಿಗಿಂತಲೂ ಶ್ರೇಷ್ಠವಾದ ಆಶ್ರಮವನ್ನು ಶ್ರೀ ವೇದವ್ಯಾಸರು ನೋಡಿದರು. ಅಲ್ಲಿ ಶ್ರೀ ವೇದವ್ಯಾಸರ ಪರಿವಾರ ರೂಪರಾದ ಅನೇಕ ಮಂದಿ ಋಷಿಗಳು ಇದ್ದರು. ಅವರು ಬರುತ್ತಿರುವ ಶ್ರೀ ಮಧ್ವಾಚಾರ್ಯರನ್ನು ನೋಡಿ, ಇವರು ಬ್ರಹ್ಮದೇವರು ಇರಬಹುದೇ? ಅಥವಾ ಮುಖ್ಯ ವಾಯುದೇವರೇ ಬರುತ್ತಿರಬಹುದೇ? ಅಥವಾ ಸೂರ್ಯ ದೇವರು ಶ್ರೀ ವೇದವ್ಯಾಸರನ್ನು ನೋಡಲು ಬರುತ್ತಿರಬಹುದೇ? ಎಂದು ಊಹಿಸಿದರು. ಅವರ ಗುಣಗಳನ್ನು ಕಂಡು ಇವರು ಸಮಸ್ತಸಲ್ಲಕ್ಷಣಗಳಿಂದ ಕೂಡಿದ ವಾಯುದೇವರ ಅವತಾರರಾದ ಶ್ರೀ ಮಧ್ವರೆಂದು ನಿಶ್ಚಯಿಸಿದರು. ಹೀಗೆ ಋಷಿಗಳಿಂದ ಪೂಜಿತವಾದ ಉತ್ತಮಗುಣಗಳುಳ್ಳ ಶ್ರೀಮಧ್ವರು ಆ ಆಶ್ರಮದಲ್ಲಿ ನಾನಾ

ಬಣ್ಣದಿಂದ ಅಲಂಕೃತವಾದ ಲೋಕವಿಲಕ್ಷಣವಾದ ಸಾಲವೃಕ್ಷವನ್ನು ನೋಡಿದರು. ಆ ಆಶ್ರಮದಲ್ಲಿ ವೇದವ್ಯಾಸರ ಸಮೀಪದಲ್ಲಿದ್ದ ಒಂದು ಬದರೀ ವೃಕ್ಷವನ್ನು ನೋಡಿದರು. ಆ ಬದರೀ ವೃಕ್ಷದ ಕೆಳಗಡೆ ಶ್ರೀ ವೇದವ್ಯಾಸರನ್ನು ನೋಡಿದರು. ಶ್ರೀ ವೇದವ್ಯಾಸರು ಪರಾಶರಋಷಿಗಳಿಂದ ಸತ್ಯವತೀದೇವಿಯಲ್ಲಿ ಆವಿರ್ಭೂತರಾದ ಸಾಕ್ಷಾತ್ ನಾರಾಯಣ ದೇವರು. ಅವರು ಮಹಾಭಾರತ ಸಂಹಿತೆಯನ್ನು ಹದಿನೆಂಟು ಪುರಾಣಗಳನ್ನೂ, ಶ್ರೀಮದ್ ಬ್ರಹ್ಮ ಮೀಮಾಂಸಾಶಾಸ್ತ್ರವನ್ನು ರಚಿಸಿದ್ದರು. ಭರತವಂಶದಲ್ಲಿ ಉತ್ಪನ್ನರಾದ ಗುಣಗಳಿಂದ ಶ್ರೇಷ್ಠರಾದ ಪಂಚಪಾಂಡವರಿಗೆ ಹಿತೋಪದೇಶವನ್ನು ಮಾಡಿದ್ದರು. ಸಮಸ್ತದೋಷ ದೂರರಾದ ಅವರು ಶಾಶ್ವತವಾದ ಪ್ರತ್ಯೇಕವಾಗಿಯೂ ಅನವಧಿಕವಾದ ಪೂರ್ಣವಾದ ಅಸಂಖ್ಯಾತವಾದ ಕಲ್ಯಾಣ ಗುಣಗಳಿಂದ ಪೂರ್ಣರಾಗಿದ್ದಾರೆ. ಇಂತಹ ವೇದವ್ಯಾಸ ದೇವರನ್ನು ಶ್ರೀ ಮಧ್ವಾಚಾರ್ಯರು ನೋಡಿದರು. ಹೀಗೆ ವೇದವ್ಯಾಸರನ್ನು ನೋಡಿದ ಶ್ರೀಮಧ್ವರೂ ಆ ವೇದವ್ಯಾಸದೇವರೂ ನನ್ನ ವಿಷಯದಲ್ಲಿ ಸಂತುಷ್ಟರಾಗಿ ಅನುಗ್ರಹವನ್ನು ಮಾಡಲಿ.

**ವಿಗ್ರಹ** - **ಶೋಭನಾಶ್ಚತೇ ಆಶ್ರಮಾಶ್ಚ ಸ್ವಾಶ್ರಮಾಃ ಸ್ವಾಶ್ರಮೇಷು ಅಗ್ರ್ಯಃ ಸ್ವಾಶ್ರಮಾಗ್ರ್ಯಃ** ತಂ, ಮುನಿಭಿಃ ಮಹಿತಾಃ ಮುನಿಮಹಿತಾಃ ಮುನಿಮಹಿತಾಃ ಗುಣಾಃ ಮುನಿಮಹಿತಗುಣಃ ತಂ, ದಿವಿಭವಃ ದಿವ್ಯಃ ದಿವ್ಯಶ್ಚಾಸೌಸಾಲಶ್ಚ ದಿವ್ಯಸಾಲಃ ತಂ, ಪ್ರಕರ್ಷೇಣಜಾತಃ ಪ್ರಜಾತಃ ತಂ, ಭಾರತಂ ಆದಿಃ ಯಸ್ಯಸಃ ಭಾರತಾದಿಃ ತಸ್ಯ, ಭರತೇಷು ವರಾಃ ಭರತವರಾಃ, ಭರತವರಾಣಾಂ ಗುರುಃ ಭರತವರಗುರುಃ ತಂ, ನಿಷ್ಕ್ರಾಂತಃ ದೋಷೇಭ್ಯಃ ನಿರ್ದೋಷಃ, ತಂ, ನಗಣಿತಾಃ ಅಗಣಿತಾಃ, ನಿತ್ಯಾಃ ಪೂರ್ಣಾಃ ಅಗಣಿತಾಃ ಗುಣಾಃ ಯಸ್ಯಸಃ ನಿತ್ಯಪೂರ್ಣಾಗಣಿತಗುಣಃ ತಂ,

**ಧಾತುರೂಪ** - ಪ್ರೀಯತಾಂ, ಮೂರನೆಯ (ಅಜ್ಞಾನೋತ್ಪಾದನಾರ್ಥಂ) ಶ್ಲೋಕದಲ್ಲಿ ಈ ಕ್ರಿಯಾಪದವು ಬಂದಿದೆ.

**ಪ್ರಯೋಗ** - ಅಮುನಾತೇನ ಈಶೇನ ಚ ಪ್ರೀಯತಾಂ (ಭಾವೆ)

**ಗೂಢಭಾವಪ್ರಕಾಶಿಕಾ ಅನುವಾದ** – ಯೋಽಪಶ್ಯದಿತಿ ಇನ್ನು ಮುಂದೆ ಯೋಪಶ್ಯತ್ ಸ್ವಾಶ್ರಮಾಗ್ರ್ಯಂ ಎಂಬ ಹದಿಮೂರನೆಯ ಪದ್ಯದವ್ಯಾಖ್ಯಾನವನ್ನು ಪ್ರಾರಂಭಿಸುತ್ತಾರೆ ಯಃ ಪೂರ್ಣಬೋಧಃ=ಯಾವ ಶ್ರೀ ಪೂರ್ಣಪ್ರಜ್ಞರು, ಸ್ವಾಶ್ರಮಾಗ್ರ್ಯಂ, ಅಂದರೆ ಶೋಭಮಾನಾಶ್ರಮೇಷುಶ್ರೇಷ್ಠಂ=ಶೋಭಿಸುತ್ತಿರುವ ಆಶ್ರಮಗಳಲ್ಲಿ ಶ್ರೇಷ್ಠವಾದ, ಅಂದರೆ ಬದರಿಕಾಶ್ರಮಂ=ಬದರಿಕಾಶ್ರಮವನ್ನು, ಅಪಶ್ಯತ್=ನೋಡಿದರು. ಮುನಿಮಹಿತಗುಣಃ ಅಂದರೆ, ಮುನಿಭಿಃ=ಎಂದರೆ ಬದರಿಕಾಶ್ರಮಸ್ಥೈಃ ವ್ಯಾಸ ಪರಿವಾರಭೂತೈಃ=ಬದರಿಕಾಶ್ರಮದಲ್ಲಿರುವ ಶ್ರೀ ವೇದವ್ಯಾಸರ ಪರಿವಾರದಲ್ಲಿ ಸೇರಿರುವ ಋಷಿಗಳಿಂದ, ಮಹಿತಾಃ=ಪೂಜಿತಾಃ, ಮಹಿತಾಃ ಎಂದರೆ ಗೌರವಿಸಲ್ಪಟ್ಟ, ಪೂಜಿಸಲ್ಪಟ್ಟ, ನಾನಾಪ್ರಕಾರೋತ್ಪ್ರೇಕ್ಷಿತಾಃ=ನಾನಾ ರೀತಿಯಿಂದ ಉತ್ಪ್ರೇಕ್ಷಿಸಲ್ಪಟ್ಟ, ಗುಣಾಃ=ಅಂದರೆ ಕಲ್ಯಾಣಧರ್ಮಾಃ= ಮಂಗಳಕರವಾದ ಧರ್ಮಗಳು, ಯಸ್ಯ ಸಃ=ಯಾವನಿಗೆ ಇರುತ್ತವೆಯೋ ಅವನು, ತಥಾ=ಮುನಿಮಹಿತಗುಣಃ=ಎಂಬ ವಿಶೇಷಣದಿಂದ ಹೇಳಲ್ಪಡುತ್ತಾನೆ. ಆಗಚ್ಛಂತಂ ಮಧ್ವಂ ದೃಷ್ಟ್ವಾ=ಬರುತ್ತಿರುವ ಶ್ರೀಮಧ್ವಾಚಾರ್ಯರನ್ನು ನೋಡಿದ, ಮುನಯಃ=ಮುನಿಗಳು, ಕಿಂ ಬ್ರಹ್ಮಾ=(ಬರುತ್ತಿರುವವರು) ಬ್ರಹ್ಮದೇವರೇನು? ಕಿಂ ವಾಯುಃ=ವಾಯುದೇವರೇನು? ಉತಸೂರ್ಯಃ=ಅಥವಾ ಸೂರ್ಯದೇವರೇನು? ಇತ್ಯಾದಿ ಪ್ರಕಾರೇಣ=ಇತ್ಯಾದಿ ರೀತಿಯಿಂದ ಉತ್ಪ್ರೇಕ್ಷಿತವಂತಃ ಇತ್ಯರ್ಥಃ= ಉತ್ಪ್ರೇಕ್ಷೆ ಮಾಡಿದರು ಎಂದು ಅರ್ಥ. ಚಿತ್ರಂ=ನಾನಾವರ್ಣಂ, ಚಿತ್ರಂ ಎಂದರೆ ಬೇರೆ ಬೇರೆ ಬಣ್ಣ ಉಳ್ಳದ್ದು ಎಂದು ಅರ್ಥ. ದಿವ್ಯಂ ಸಾಲಂ=ದಿವ್ಯ ಲೋಕವಿಲಕ್ಷಣಂ=ದಿವ್ಯಂ ಎಂದರೆ ಲೋಕ ವಿಲಕ್ಷಣವಾದ ಸಾಲಂತರುಂ=ಸಾಲವೆಂಬ ವೃಕ್ಷವನ್ನು, ತಸ್ಮಿನ್ ಆಶ್ರಮ ಮಧ್ಯೇ=ಆ ಆಶ್ರಮದ ಮಧ್ಯದಲ್ಲಿ, ಕಂಚನ=ಯಾವುದೋ ಒಂದಾದ, ವೇದವ್ಯಾಸ ಸಮೀಪಸ್ಥಂ=ಶ್ರೀ ವೇದವ್ಯಾಸರ ಸಮೀಪದಲ್ಲಿರುವ, ಬದರೀವೃಕ್ಷಂಚ=ಬದರೀವೃಕ್ಷವನ್ನೂ, ಅಪಶ್ಯತ್=ನೋಡಿದರು, ಇತಿಅನ್ವಯಃ=ಹೀಗೆ ಅನ್ವಯವು. ತತ್ರ=ಆಶ್ರಮ ಮಧ್ಯಸ್ಥ ಬದರೀ ವೃಕ್ಷಸ್ಯ ಅಧಃ ಪ್ರದೇಶೇ, ತತ್ರ ಎಂದರೆ ಆಶ್ರಮದ ಮಧ್ಯದಲ್ಲಿರುವ ಬದರೀವೃಕ್ಷದ ಕೆಳಗಿನ ಪ್ರದೇಶದಲ್ಲಿ, **ಋಷೀಣಾಂ** ಸಮಾಜೇ=ಸಮೂಹೇ=ಋಷಿಗಳ ಸಮೂಹದಲ್ಲಿ, ಹರಿಂ **ಅಪಶ್ಯತ್**=ಶ್ರೀ ವೇದವ್ಯಾಸರನ್ನು ನೋಡಿದರು,

ಇತಿ ಅನ್ವಯಃ=ಎಂದು ಅನ್ವಯವು. ಕೀದೃಶಂ (ಇತ್ಯತಃ) ತಂ ವಿಶಿನಷ್ಟಿಮುನಿತಃ ಇತ್ಯಾದಿನಾ=ಹೇಗೆ ಇರತಕ್ಕಂತಹ ವೇದವ್ಯಾಸದೇವರು ಎಂದು ಪ್ರಶ್ನೆಬಂದರೆ, ಆ ವೇದವ್ಯಾಸದೇವರನ್ನು ವಿಶೇಷಿಸುತ್ತಾರೆ (ಅವರ ವಿಶೇಷಣಗಳನ್ನು ಹೇಳುತ್ತಾರೆ, 'ಮುನಿತಃ' ಇತ್ಯಾದಿಯಿಂದ), ಮುನಿತಃ=ಪರಾಶರಾತ್=ಮುನಿತಃ ಅಂದರೆ ಪರಾಶರಮುನಿಗಳ ದೆಸೆಯಿಂದ, ಸತ್ಯವತ್ಯಾಂ=ಸತ್ಯವತೀ ದೇವಿಯಲ್ಲಿ, ಪ್ರಜಾತಂ=ಎಂದರೆ ಆವಿರ್ಭವಿಸಿದ, ವೇದವ್ಯಾಸಂ ಇತಿಯಾವತ್=ವೇದವ್ಯಾಸರನ್ನು ಎಂದು ತಾತ್ಪರ್ಯ, ಭಾರತಾದೇಃ ಅಷ್ಟಾದಶಪುರಾಣಾನಾಂಚ=ಭಾರತಾದೇಃ ಎಂದರೆ ಶ್ರೀಮನ್ಮಹಾಭಾರತ ಮತ್ತು ಹದಿನೆಂಟು ಪುರಾಣಗಳಿಗೆ, ಬ್ರಹ್ಮಸೂತ್ರಸ್ಯಚ=ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೂ, ಕರ್ತಾರಂ=ಪ್ರಣೇತಾರಂ=ಕರ್ತಾರಂ ಎಂದರೆ ನಿರ್ಮಾಣ ಮಾಡಿದ, ಭಾರತಾದೇಃ ಬ್ರಹ್ಮಸೂತ್ರಸ್ಯಚಕರ್ತಾರಂ" ಎಂಬಲ್ಲಿ ಕರ್ತೃಕರ್ಮಣೋಃಕೃತಿ' ಇತಿಷಷ್ಠೀ ಕರ್ತೃಕರ್ಮಣೋಃಕೃತಿ, (2.3.65) ಕೃದ್ಯೋಗೇ ಕರ್ತರಿಕರ್ಮಣಿ ಚಷಷ್ಠೀಸ್ಯಾತ್ ಕೃದಂತ ಶಬ್ದದ ಸಂಬಂಧವಿದ್ದಾಗ ಕರ್ತೃವಾಚಕ ಶಬ್ದಕ್ಕೂ ಕರ್ಮವಾಚಕ ಶಬ್ದಕ್ಕೂ ಷಷ್ಠೀವಿಭಕ್ತಿಯು ಬರುತ್ತದೆ ಎಂಬ ಅರ್ಥವುಳ್ಳ ಸೂತ್ರದಿಂದ ಕರ್ಮವಾಚಕವಾದ=ಭಾರತಾದಿ ಎಂಬ ಶಬ್ದಕ್ಕೂ, ಬ್ರಹ್ಮಸೂತ್ರ ಎಂಬ ಶಬ್ದಕ್ಕೂ ಷಷ್ಠೀ ವಿಭಕ್ತಿಯು ಬಂದು, ಭಾರತಾದೇಃ, ಬ್ರಹ್ಮಸೂತ್ರಸ್ಯ ಎಂದಾಗಿದೆ. ಭರತವರಗುರುಂ=ಭರತೇಷು ವರಾಣಾಂ ಶ್ರೇಷ್ಠಾನಾಂ ಪಾಂಡವಾನಾಂ ಗುರುಂ ಹಿತೋಪದೇಶಕರ್ತಾರಂ, 'ಭರತವರಗುರುಂ ಎಂದರೆ, ಭರತೇಷು=ಭರತವಂಶೋತ್ಪನ್ನರಲ್ಲಿ, ವರಾಣಾಂ ಅಂದರೆ ಶ್ರೇಷ್ಠಾನಾಂ ಶ್ರೇಷ್ಠರಾದ ಪಾಂಡವರಿಗೆ, ಗುರುಂ ಅಂದರೆ ಹಿತೋಪದೇಶವನ್ನು ಮಾಡತಕ್ಕಂತಹವರು, ಈ ಅರ್ಥವನ್ನು ಭರತವರಗುರುಂ ಎಂಬ ಪದವು ಹೇಳುತ್ತದೆ. ನಿರ್ದೋಷಂ=ದೋಷರಹಿತರಾದ, ನಿತ್ಯಪೂರ್ಣಾಗಣಿತಗುಣಂ, ಅಂದರೆ, ನಿತ್ಯಾಃ ಶಾಶ್ವತವಾದ, ಪೂರ್ಣಾಃ ಪ್ರತ್ಯೇಕಂ ಪೂರ್ಣಾಃ, ಪೂರ್ಣ ಎಂದರೆ ಪ್ರತ್ಯೇಕವಾಗಿಯೂ (ಅನವಧಿಕಗಳಾದ) ಪೂರ್ಣವಾದ, ಅಗಣಿತಾಃ-ಅಸಂಖ್ಯಾಕವಾದ, ಗುಣಾಃ=ಕಲ್ಯಾಣಧರ್ಮಾಃ, ಗುಣಾಃ ಎಂದರೆ ಮಂಗಳಕರವಾದ ಧರ್ಮಗಳು, ಯಸ್ಯ, ಯಾವನಿಗೆ ಇವೆಯೋ, ಅಂತಹವನನ್ನು 'ನಿತ್ಯಪೂರ್ಣಾಗಣಿತಗುಣಂ' ಎಂದು ಹೇಳುತ್ತಾರೆ, ತಂ=ಅಂತಹ, ಏತಾದೃಶಗುಣ ವಿಶಿಷ್ಟತ್ವೇನ=ಇಂತಹ ಗುಣಗಳಿಂದ ಕೂಡಿದವನನ್ನಾಗಿ, ಅಪಶ್ಯತ್=ನೋಡಿದರು. ತತಃ= ಆದುದರಿಂದಲೇ, ತೇಷಾಂ ವಿಶೇಷಣಾನಾಂ ಉಕ್ತಿಃ=ಆ ವಿಶೇಷಣಗಳನ್ನು ಇಲ್ಲಿ ಹೇಳಲಾಗಿದೆ. ಅಸೌ=ಎಂದರೆ ಏವಂವಿಧಗುಣ ವಿಶಿಷ್ಟತಯಾ ವೇದವ್ಯಾಸಸ್ಯ ದ್ರಷ್ಟಾಮಧ್ವಃ=ಇಂತಹ ಗುಣಗಳಿಂದ ಕೂಡಿರುವವರನ್ನಾಗಿ ಶ್ರೀ ವೇದವ್ಯಾಸರನ್ನು ನೋಡಿರುವ ಶ್ರೀಮಧ್ವಾಚಾರ್ಯರು ಸಚ ಈಶಃ ವೇದವ್ಯಾಸಶ್ಚ=ಆ ಸ್ವಾಮಿಯು ಎಂದರೆ ವೇದವ್ಯಾಸರೂ, ಮೇ ಪ್ರೀಯತಾಂ ಇತಿ ಪ್ರತ್ಯೇಕಂ ಸಂಬಂಧಃ=ನನ್ನ ವಿಷಯದಲ್ಲಿ ಸುಪ್ರೀತರಾಗಲಿ. 'ಪ್ರೀಯತಾಂ' ಎಂಬುದನ್ನು ಮಧ್ವಾಚಾರ್ಯರಿಗೂ, ಸಈಶಶ್ಚ ಎಂದು ಹೇಳಿರುವ ವೇದವ್ಯಾಸರಿಗೂ ಪ್ರತ್ಯೇಕವಾಗಿ ಅನ್ವಯಿಸಬೇಕು. ತೇನ ಏಕವಚನಂ ಸಾಧು=ಅದರಿಂದ ಪ್ರೀಯತಾಂ ಎಂಬ ಏಕವಚನವು ಸರಿಯಾಗಿದೆ. ಪ್ರೀಙ್ ಪ್ರೀಣನೇ, ಆಶಿಷಿಕರ್ತರಿಲೋಟ್=ಪ್ರೀಙ್ ಪ್ರೀಣನೇ ಎಂಬ ಧಾತುವಿನ ಆಶೀರರ್ಥದಲ್ಲಿ ಕರ್ತರಿ ಲೋಟ್ ಲಕಾರ ||೧೩||

ಶ್ರೀ ವೇದವ್ಯಾಸರನ್ನು ವರ್ಣಿಸಿ ಅಂತಹವರಿಂದ ಆದರಿಸಲ್ಪಟ್ಟ ಶ್ರೀಮಧ್ವರನ್ನು ಈ ಪದ್ಯದಲ್ಲಿ ಹೊಗಳುತ್ತಾರೆ.

**ಸರ್ವಾಂಗೈಃ ಸರ್ವವಂದ್ಯೈಃ ವಿಮಲಕುವಲಯಶ್ಯಾಮಲೈಃಶೋಭಮಾನಂ**
**ವಿಜ್ಞಾನಾನಂದತೇಜಃಪ್ರವರಗುಣಮಯೈಃ ಪೂರ್ಣಲಾವಣ್ಯರೂಪೈಃ ।**
**ಬಿಂಬೋಷ್ಠಂ ಪದ್ಮಪಾದಂ ಶುಭಕಪಿಶಜಟಂ ಸ್ತೈಣಚರ್ಮಾಣಮೀಶಂ**
**ದೃಷ್ಟ್ವಾ ನತ್ವೋಪಗೂಢಃ ಸಗುರುರವತುಮಾಂ ಸೂಪವಿಷ್ಟೋ ಮುನೀಷ್ಟಃ ।।೧೪।।**

**ಗೂಢಭಾವಪ್ರಕಾಶಿಕಾ** - ಪುನಃ ಕಥಮಪಶ್ಯದಿತಿ ತತ್ರಾಹಸರ್ವೇತಿ। ಸರ್ವವಂದ್ಯೈಃ ಸರ್ವೈಃಲಕ್ಷ್ಮ್ಯಾದಿಭಿಃವಂದ್ಯೈಃ ಸ್ತೂಯಮಾನೈಃ, ವಿಮಲಕುವಲಯಶ್ಯಾಮಲೈಃ, ವಿಮಲಾನಿ ವಿಕಸಿತಾನಿ ಕುವಲಯಾನಿ ಇಂದೀವರಾಣಿ, ತದ್ವತ್ ಶ್ಯಾಮಲೈಃ ನೀಲೈಃ, ವಿಜ್ಞಾನಾನಂದತೇಜಃಪ್ರವರಗುಣಮಯೈಃ, ವಿಜ್ಞಾನಂ ಚ ಆನಂದಶ್ಚ ತೇಜಶ್ಚ ತಾನ್ಯೇವ ಪ್ರವರಾಣಿ ಪ್ರಮುಖಾನಿ ಗುಣಾನಾಂ, ತೇ ಪ್ರಚುರಾಃ (ಪ್ರಾಚುರ್ಯಂ) ಯೇಷಾಂ ತೇ ತೈಃ, ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ತ್ರಿಧಾ ಇತಿ ವಚನಾತ್। ಪೂರ್ಣಲಾವಣ್ಯ ರೂಪೈಃ ಪೂರ್ಣಸೌಂದರ್ಯೇಣ ಪ್ರಶಸ್ತೈಃ

ಪ್ರಶಂಸಾಯಾಂ ರೂಪಪ್ (5-3-66) ಇತಿರೂಪಪ್ ಪ್ರತ್ಯಯಃ। ಪೂರ್ಣಲಾವಣ್ಯಮೇವ ರೂಪಂ ಯೇಷಾಂ ತೈರಿತಿವಾ। ಸರ್ವಾಂಗೈಃ ಕರಚರಣಾದಿ ಸರ್ವಾವಯವೈಃ ಶೋಭಮಾನಂ ರಾಜಮಾನಂ, ಬಿಂಬೋಷ್ಠಂ ಬಿಂಬಪಕ್ವಫಲವತ್‌ಓಷ್ಠೌ ಯಸ್ಯತಂ, ಓತ್ವೋಷ್ಠಯೋಃ ಸಮಾಸೇವಾ ಇತಿ ಪರರೂಪಂ। ಪದ್ಮಪಾದಂ ಪದ್ಮವತ್ ಪಾದೌಯಸ್ಯತಂ, ಶುಭಕಪಿಶಜಟಂ ಶುಭಾ ಕಪಿಶಾ ಪಿಂಗಾ ಜಟಾಯಸ್ಯತಂ, ಸೈಣಚರ್ಮಾಣಂ, ಏಣ್ಯಾಃ ಇದಂ ಐಣಂ, ತಚ್ಚತತ್ ಚರ್ಮಚ ತೇನ ಸಹವರ್ತತ ಇತಿ (ತಂ) ಸೈಣಚರ್ಮಾಣಂ ಕೃಷ್ಣಾಜಿನಂ ವಸಾನಮಿತ್ಯರ್ಥಃ (ಕೃಷ್ಣಾಜಿನವಸನಮಿತ್ಯರ್ಥಃ) 'ಅಜಿನಂ ಚರ್ಮಕೃತ್ತಿಸ್ತ್ರೀ' ಇತ್ಯಭಿಧಾನಾತ್। ಈಶಂ ಪರಮಸಮರ್ಥಂ ದೃಷ್ಟ್ವಾ ನತ್ವಾ ಪ್ರಣಮ್ಯ ಇತ್ಯರ್ಥಃ, ಉಪಗೂಢಃ, ಪ್ರಣತಂ ಹಸ್ತಾಭ್ಯಾಮುತ್ಥಾಪ್ಯ ವೇದವ್ಯಾಸೇನ ಆಲಿಂಗಿತಃ, ಸೂಪವಿಷ್ಟಃ, ತದನುಜ್ಞಯಾ ಮುನಿಭಿಃ ದತ್ತೇ ಆಸನೇ ಸಮಯ್ಯುಗುಪವಿಷ್ಟಃ, ಮುನೀಷ್ಟಃ ವೇದವ್ಯಾಸಮುಖೇನ ವಿಜ್ಞಾತಸ್ವಸ್ವರೂಪಾಣಾಂ ಮುನೀನಾಂ ಇಷ್ಟಾವಿಷಯಃ ಸ ಗುರುಃ ಪೂರ್ಣಬೋಧಃ ನಃ ಅವತು ರಕ್ಷತು। ಆಶೀಷಿಲೋಟ್ ॥೧೪॥

**ಪದಚ್ಛೇದ** - ಸರ್ವಾಂಗೈಃ, ಸರ್ವವಂದ್ಯೈಃ, ವಿಮಲಕುವಲಯಶ್ಯಾಮಲೈಃ, ಶೋಭಮಾನಂ, ವಿಜ್ಞಾನಾನಂದತೇಜಃಪ್ರವರಗುಣಮಯೈಃ, ಪೂರ್ಣಲಾವಣ್ಯರೂಪೈಃ, ಬಿಂಬೋಷ್ಠಂ, ಪದ್ಮಪಾದಂ, ಶುಭಕಪಿಶಜಟಂ, ಸೈಣಚರ್ಮಾಣಂ, ಈಶಂ, ದೃಷ್ಟ್ವಾ, ನತ್ವಾ, ಉಪಗೂಢಃ, ಸಃ, ಗುರುಃ, ಅವತು, ನಃ, ಸೂಪವಿಷ್ಟಃ, ಮುನೀಷ್ಟಃ

**ಅನ್ವಯ** - ಸರ್ವವಂದ್ಯೈಃ ವಿಮಕುವಲಯಶ್ಯಾಮಲೈಃ, ವಿಜ್ಞಾನಾನಂದತೇಜಃಪ್ರವರಗುಣಮಯೈಃ ಪೂರ್ಣಲಾವಣ್ಯ ರೂಪೈಃ ಸರ್ವಾಂಗೈಃ ಶೋಭಮಾನಂ, ಬಿಂಬೋಷ್ಠಂ, ಪದ್ಮಪಾದಂ, ಶುಭಕಪಿಶಜಟಂ, ಸೈಣಚರ್ಮಾಣಂ, ಈಶಂ, ದೃಷ್ಟ್ವಾ ನತ್ವಾ ಉಪಗೂಢಃ ಸೂಪವಿಷ್ಟಃ ಮುನೀಷ್ಟಃ ಸಃಗುರುಃ ನಃ ಅವತು।

**ಅನ್ವಯಾರ್ಥ** - ಸರ್ವವಂದ್ಯೈಃ=ಲಕ್ಷ್ಮಿಯೇ ಮೊದಲಾಗಿ ಉಳ್ಳ ಎಲ್ಲಾ ದೇವತೆಗಳಿಂದಲೂ ಹೊಗಳಿಸಿಕೊಳ್ಳಲ್ಪಡುವ, ವಿಮಲಕುವಲಯಶ್ಯಾಮಲೈಃ=ನಿರ್ಮಲವಾದ (ಅರಳಿರುವ) ಕನ್ನೈದಿಲೆ ಹೂವುಗಳಂತೆ ಶ್ಯಾಮಲ ವರ್ಣದಿಂದ ಕೂಡಿರುವ, ವಿಜ್ಞಾನಾನಂದತೇಜಃಪ್ರವರಗುಣಮಯೈಃ, ವಿಜ್ಞಾನ=ಎಲ್ಲಾ ವಿಷಯಗಳ ಸ್ವರೂಪ ಭೂತವಾದ ಜ್ಞಾನವೂ, ಆನಂದ=ಸ್ವರೂಪವೇ ಆಗಿರುವ ಸುಖವು, ತೇಜಃ=ಸ್ವರೂಪವೇ ಆಗಿರುವ ಪ್ರಕಾಶವೂ, ಪ್ರವರ=ಮುಖ್ಯವಾಗಿ ಉಳ್ಳ, ಗುಣ=ಸೌಂದರ್ಯಾದಿ ಅನಂತಗುಣಗಳೇ, ಮಯೈಃ=ಪ್ರಚುರವಾಗಿ ಉಳ್ಳ, ಪೂರ್ಣಲಾವಣ್ಯರೂಪೈಃ=ಸಂಪೂರ್ಣವಾದ ಸೌಂದರ್ಯದಿಂದ ಪ್ರಶಸ್ತವಾದ, (ಸಂಪೂರ್ಣವಾದ ಲಾವಣ್ಯವೇ ಸ್ವರೂಪವಾಗಿ ಉಳ್ಳ) ಸರ್ವಾಂಗೈಃ=ಕೈಕಾಲು ಮುಂತಾದ ಸರ್ವಾವಯವಗಳಿಂದ, ಶೋಭಮಾನಂ=ವಿರಾಜಿಸುತ್ತಿರುವ, ಬಿಂಬೋಷ್ಠಂ=ಪಕ್ವವಾದ ತೊಂಡೆಹಣ್ಣಿನಂತಹ ತುಟಿಯುಳ್ಳ, ಪದ್ಮಪಾದಂ=ತಾವರೆಯಂತಹ (ಕೆಂಪಾದ) ಪಾದಗಳುಳ್ಳ, ಶುಭಕಪಿಶಜಟಂ=ಮಂಗಳಕರವಾದ ಸ್ವಲ್ಪ ಕೆಂಚಾದ (ಬಂಗಾರದ ಬಣ್ಣದ) ಜಟೆಯುಳ್ಳ, ಸೈಣಚರ್ಮಾಣಂ=ಜಿಂಕೆಯ ಚರ್ಮದಿಂದ ಸಹಿತನಾದ, ಈಶಂ=ಪರಮ ಸಮರ್ಥರಾದ (ಶ್ರೀ ವೇದವ್ಯಾಸರನ್ನು) ದೃಷ್ಟ್ವಾ=ನೋಡಿ, ನತ್ವಾ=ನಮಸ್ಕರಿಸಿ, ಉಪಗೂಢಃ=ಆಲಿಂಗಿಸಲ್ಪಟ್ಟವರಾಗಿ, ಸೂಪವಿಷ್ಟಃ= (ಶ್ರೀ ವೇದವ್ಯಾಸರ ಅಪ್ಪಣೆಯಿಂದ ಮುನಿಗಳಿಂದ ಕೊಡಲ್ಪಟ್ಟ ಆಸನದಲ್ಲಿ) ಚೆನ್ನಾಗಿ ಕುಳಿತುಕೊಂಡಿರುವ, ಮುನೀಷ್ಟಃ= (ವೇದವ್ಯಾಸರಿಂದ ತನ್ನ ಸ್ವರೂಪವನ್ನು ತಿಳಿದಿರುವ) ಮುನಿಗಳಿಗೆ ಪ್ರಿಯರಾದ, ಸಃ ಗುರುಃ=ಆ ಪೂರ್ಣಬೋಧರು, ನಃ ಅವತು=ನಮ್ಮನ್ನು ಕಾಪಾಡಲಿ.

**ತಾತ್ಪರ್ಯ** - ಶ್ರೀ ವೇದವ್ಯಾಸರ ಅಂಗಗಳು ಅರಳಿದ ಕನ್ನೈದಿಲೆ ಹೂವಿನಂತೆ ನೀಲವಾಗಿವೆ. ವಿಜ್ಞಾನ= ಆನಂದ ತೇಜಸ್ಸು ಮೊದಲಾದ ಗುಣಸ್ವರೂಪಗಳಾಗಿ, ಆ ಗುಣಗಳ ಪ್ರಾಚುರ್ಯವನ್ನು ಆವಿರ್ಭಾವಗೊಳಿಸುತ್ತಿವೆ. ಅವು ಲವಲೇಶವೂ ಪ್ರಾಕೃತವಲ್ಲ. ಲಕ್ಷ್ಮೀದೇವಿಯೇ ಮುಂತಾದ ಸಮಸ್ತದೇವತೆಗಳೂ ಶ್ರೀ ವೇದವ್ಯಾಸರ ಇಂತಹ ಅಂಗಗಳನ್ನು ನಿರಂತರದಲ್ಲಿಯೂ ಸ್ತೋತ್ರ ಮಾಡುತ್ತಾರೆ. ಆ ಅಂಗಗಳು ಸಂಪೂರ್ಣ ಲಾವಣ್ಯವೇ ಮೂರ್ತಿವೆತ್ತಂತಿವೆ. ಸೌಂದರ್ಯಸಾರ ಸರ್ವಸ್ವವಾಗಿವೆ. ಇಂತಹ ಅಂಗಗಳಿಂದ ಶ್ರೀ ವೇದವ್ಯಾಸರು ಪರಮಪಾವನರಾಗಿ ಶೋಭಿಸುತ್ತಿದ್ದಾರೆ. ಶ್ರೀವೇದವ್ಯಾಸರ ತುಟಿಗಳು ಪಕ್ವವಾದ ತೊಂಡೆಹಣ್ಣಿನಂತಿವೆ. ಕಾಲುಗಳೆರಡೂ ತಾವರೆ ಹೂವಿನಂತಿವೆ. ಅವರು ಪವಿತ್ರವಾದ ಮತ್ತು ಮಂಗಳಕರವಾದ ಕೆಂಚಾದ ಜಟೆಯನ್ನು ಧರಿಸಿರುತ್ತಾರೆ. ಕೃಷ್ಣಮೃಗದ ಚರ್ಮವನ್ನು

ಧರಿಸಿರುತ್ತಾರೆ. ಅವರು ಸರ್ವಸಾಮರ್ಥ್ಯವುಳ್ಳವರೂ ಜಗತ್ತಿಗೆಲ್ಲಾ ಒಡೆಯರೂ ಆಗಿದ್ದಾರೆ. **ಅಂತಹ ಗುಣಗಳನ್ನು** ನೋಡಿ ಶ್ರೀಮಧ್ವಾಚಾರ್ಯರು ಅವರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದರು. ಆಗ ಶ್ರೀ **ವೇದವ್ಯಾಸದೇವರು** ಎರಡೂ ಕೈಗಳಿಂದ ಆಚಾರ್ಯರನ್ನು ಮೇಲಕ್ಕೆತ್ತಿ ಅಪ್ಪಿಕೊಂಡರು. ಆಚಾರ್ಯರು ಶ್ರೀ ವೇದವ್ಯಾಸರ **ಅಪ್ಪಣೆಯಿಂದ** ಮುನಿಗಳು ಕೊಟ್ಟ ಆಸನದಲ್ಲಿ ಕುಳಿತರು. ಶ್ರೀ ವೇದವ್ಯಾಸರ ಮೂಲಕವಾಗಿ ಆಚಾರ್ಯರ ಸ್ವರೂಪವನ್ನು **ತಿಳಿದ** ಅಲ್ಲಿದ್ದ ಮುನಿಗಳಿಗೆ ಆಚಾರ್ಯರು ಪರಮಪ್ರೀತಿಗೆ ವಿಷಯರಾದರು. ಇಂತಹ ಪೂರ್ಣಬೋಧರು **ನನ್ನನ್ನು** ಕಾಪಾಡಲಿ ಎಂದು ಭಾವ.

**ವಿಗ್ರಹ** - ಸರ್ವಾಣಿ ಚ ತಾನಿ ಅಂಗಾನಿ ಚ ಸರ್ವಾಂಗಾನಿ ತೈಃ, ವಂದಿತುಂ ಯೋಗ್ಯಾನಿ ವಂದ್ಯಾನಿ ಸರ್ವೈಃ ವಂದ್ಯಾನಿ ಸರ್ವವಂದ್ಯಾನಿ ತೈಃ, ವಿಮಲಾನಿ ಚ ತಾನಿ ಕುವಲಯಾನಿ ಚ ವಿಮಲಕುವಲಯಾನಿ ವಿಮಲ ಕುವಲಯವತ್ ಶ್ಯಾಮಲಾನಿ ವಿಮಲಕುವಲಯಶ್ಯಾಮಲಾನಿ ತೈಃ, ವಿಜ್ಞಾನಂ ಚ ಆನಂದಶ್ಚ ತೇಜಶ್ಚ ವಿಜ್ಞಾನಾನಂದತೇಜಾಂಸಿ, ಪ್ರವರಾಶ್ಚ ತೇ ಗುಣಾಶ್ಚ ಪ್ರವರಗುಣಾಃ ವಿಜ್ಞಾನಾನಂದತೇಜಾಂಸ್ಯೇವ ಪ್ರವರಗುಣಾಃ ವಿಜ್ಞಾನಾ ನಂದತೇಜಃಪ್ರವರಗುಣಾಃ, ವಿಜ್ಞಾನಾನಾಂದತೇಜಃಪ್ರವರಗುಣಾನಾಂ ಪ್ರಾಚುರ್ಯಂ ಯೇಷಾಂ ತಾನಿ ವಿಜ್ಞಾದಾನಂದತೇಜಃ ಪ್ರವರಗುಣಮಯಾನಿ ತೈಃ, ಪೂರ್ಣಂ ಚ ತತ್ ಲಾವಣ್ಯಂ ಚ ಪೂರ್ಣಲಾವಣ್ಯಂ, ಪೂರ್ಣ ಲಾವಣ್ಯೇನ ಪ್ರಶಸ್ತಾನಿ ಪೂರ್ಣಲಾವಣ್ಯರೂಪಾಣಿ ತೈಃ, ಬಿಂಬವತ್ ಓಷ್ಠೌಯಸ್ಯಸಃ ಬಿಂಬೋಷ್ಠಃ ತಂ, ಪದ್ಮವತ್ ಪಾದೌಯಸ್ಯ ಸಃ ಪದ್ಮಪಾದಃತಂ, ಶುಭಾ ಕಪಿಶಾ ಜಟಾ ಯಸ್ಯ ಸಃ ಶುಭಕಪಿಶಜಟಃ ತಂ, ಏಣಸ್ಯ ಇದಂ ಐಣಂ, ಐಣಂ ಚ ತತ್ ಚರ್ಮ ಚ ಐಣಚರ್ಮ, ಐಣಚರ್ಮಣಾ ಸಹವರ್ತತೇ ಇತಿ ಸೈಣಚರ್ಮಾ ತಂ, ಸುಷ್ಠು ಉಪವಿಷ್ಟಃ ಸೂಪವಿಷ್ಟಃ, ಮುನೀನಾಂ ಇಷ್ಟಃ ಮುನೀಷ್ಟಃ.

**ಧಾತುರೂಪ** - ಅವತು ಅವತಾತ್ ಅವತಾಂ ಅವಂತು, ಅವ ಅವತಾತ್ ಅವತಂ ಅವತ, ಅವಾನಿ ಅವಾವ ಅವಾಮ. ಅವ ರಕ್ಷಣಗತಿಕಾಂತಿಪ್ರೀತಿತೃಪ್ತಿ, ಅವಗಮ ಪ್ರವೇಶ ಶ್ರಮವಣ, ಸ್ವಾಮ್ಯರ್ಥಯಾಚನಕ್ರಿಯಾ ಇಚ್ಛಾದೀಪ್ತಿ ಅವಾಪ್ತಿ ಆಲಿಂಗನ ಹಿಂಸಾ ಆದಾನ ಭಾಗವೃದ್ಧಿಷು (18 ಅರ್ಥಗಳು) ಈ ಧಾತುವಿನ ಲೋಟ್ ಪ್ರಥಮ ಪುರುಷ ಏಕವಚನ.

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಪುನಃ=ಮತ್ತು, ಕಥಂ=ಹೇಗೆ, ಅಪಶ್ಯತ್=ನೋಡಿದರು, ಇತಿ=ಎಂದರೆ, ತತ್ರ=ಆ ವಿಷಯದಲ್ಲಿ ಆಹ=ಹೇಳುತ್ತಾರೆ. ಸರ್ವೇತಿ=ಸರ್ವಾಂಗೈಃ ಇತ್ಯಾದಿ ಶ್ಲೋಕದಿಂದ ಸರ್ವವಂದ್ಯೈಃ ಎಂದರೆ, ಸರ್ವೈಃ ಲಕ್ಷ್ಮ್ಯಾದಿಭಿಃ=ಲಕ್ಷ್ಮೀದೇವಿಯೇ ಮೊದಲಾದ ಎಲ್ಲರಿಂದಲೂ, ವಂದ್ಯೈಃ ಸ್ತೂಯಮಾನೈಃ=ವಂದ್ಯೈಃ ಎಂದರೆ ಸ್ತೋತ್ರ ಮಾಡಿಸಿಕೊಳ್ಳಲ್ಪಡತಕ್ಕ, ವಿಮಲಕುವಲಯಶ್ಯಾಮಲೈಃ=ವಿಮಲಾನಿ (ನಿರ್ಮಲಾನಿ) ವಿಕಸಿತಾನಿ=ಅರಳಿರುವ, ಕುವಲಯಾನಿ ಇಂದೀವರಾಣಿ=ಕುವಲಯ ಎಂದರೆ ನೈದಿಲೆ ಹೂವುಗಳು. ತದ್ವತ್=ಅವುಗಳಂತೆ ಶ್ಯಾಮಲೈಃ ನೀಲೈಃ=ಶ್ಯಾಮಲ ಅಂದರೆ ನೀಲವಾದ, ವಿಜ್ಞಾನಾನಂದ ತೇಜಃ ಪ್ರವರ ಗುಣಮಯೈಃ=ವಿಜ್ಞಾನಂ ಚ=ಸರ್ವ ವಿಷಯಕವಾದ ಅತಿಶಯಿತಜ್ಞಾನವೂ, ಆನಂದಶ್ಚ=ಆನಂದವೂ, ತೇಜಶ್ಚ=ತೇಜಸ್ಸೂ, ತಾನ್ಯೇವ=ಅವುಗಳೇ, ಪ್ರವರಾಣಿ ಪ್ರಮುಖಾನಿ=ಬಹಳ ಮುಖ್ಯರಾದುವುಗಳು, ಗುಣಾನಾಂ=ಗುಣಗಳ, ತೇ=ಅವುಗಳು, ಪ್ರಚುರಾಃ ಪ್ರಾಚುರ್ಯಂ=ಪ್ರಚುರ ಎಂದರೆ ಪ್ರಾಚುರ್ಯವು, (ಅಧಿಕತೆಯು) ಯೇಷಾಂ ತೈಃ=ಯಾವುವುಗಳಿಗೆ ಇದೆಯೋ ಅವುಗಳಿಂದ, ಇಲ್ಲಿರುವ 'ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯವು ಅರ್ಥ, ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್‌ತ್ರಿಧಾ ಅದೇ ಎಂಬ ತಾದಾತ್ಮ್ಯಾರ್ಥದಲ್ಲಿಯೂ, ವಿಕಾರ ಎಂಬ ಅರ್ಥದಲ್ಲಿಯೂ, ಪ್ರಾಚುರ್ಯ (ಅಧಿಕತೆ) ಎಂಬ ಅರ್ಥದಲ್ಲಿಯೂ ಹೀಗೆ ಮೂರು ವಿಧವಾಗಿ ಮಯಟ್ ಪ್ರತ್ಯಯವು ಇದೆ. ಇತಿವಚನಾತ್=ಎಂಬ ವಚನದಿಂದ ಪೂರ್ಣ **ಲಾವಣ್ಯರೂಪೈಃ** (ಪೂರ್ಣ ಲಾವಣ್ಯ) ಪೂರ್ಣಸೌಂದರ್ಯೇಣ=ಪೂರ್ಣವಾದ ಸೌಂದರ್ಯದಿಂದ, ಪ್ರಶಸ್ತೈಃ=ಪ್ರಶಸ್ತವಾದ **ಪೂರ್ಣಲಾವಣ್ಯರೂಪೈಃ** ಎಂಬಲ್ಲಿ ಪ್ರಶಂಸಾಯಾಂ ರೂಪಪ್ (5-3-66) ಎಂಬ ಸೂತ್ರದಿಂದ ಪ್ರಶಸ್ತವಾದುದು **ಎಂಬ ಅರ್ಥದಲ್ಲಿ ರೂಪಪ್**

ಪ್ರತ್ಯಯವು. (ಪ್ರಶಸ್ತಃ ಪಟುಃ ಪಟುರೂಪಃ ಎಂಬಂತೆ (ಅಥವಾ) ಪೂರ್ಣಲಾವಣ್ಯ ಮೇವ ರೂಪಂ ಯೇಷಾಂ ತೈಃ ಇತಿ ವಾ= ಪೂರ್ಣಲಾವಣ್ಯವೇ ಸ್ವರೂಪವು ಯಾವುವುಗಳಿಗೆ (ಗುಣಗಳಿಗೆ) ಇದೆಯೋ ಅವುಗಳಿಂದ ಎಂದೂ ವಿಗ್ರಹವನ್ನು ಇಟ್ಟುಕೊಳ್ಳಬಹುದು. ಸರ್ವಾಂಗೈಃ ಕರಚರಣಾದಿಸರ್ವಾವಯವೈಃ='ಸರ್ವಾಂಗೈಃ' ಎಂದರೆ ಕೈಕಾಲು ಮುಂತಾದ ಎಲ್ಲಾ ಅಂಗಗಳಿಂದ ಎಂದು ಅರ್ಥ, ಶೋಭಮಾನಂ ರಾಜಮಾನಂ=ಶೋಭಮಾನಂ ಎಂದರೆ ರಾರಾಜಿಸುತ್ತಿರುವ ಎಂದು ಅರ್ಥ. ಬಿಂಬೋಷ್ಠಂ ಬಿಂಬಪಕ್ವಫಲವದೋಷ್ಠೌ ಯಸ್ಯ ತಂ, ಬಿಂಬೋಷ್ಠಂ ಎಂದರೆ ಪಕ್ವವಾದ ತೊಂಡೆಹಣ್ಣಿನಂತಹ ತುಟಿಗಳುಳ್ಳ ಬಿಂಬೋಷ್ಠಂ ಎಂಬಲ್ಲಿ ಬಿಂಬ ಓಷ್ಠಂ ಎಂದಿರುವಾಗ ಓತ್ವೋಷ್ಠಯೋಃ ಸಮಾಸೇ ವಾ" (ವಾರ್ತಿಕ) ಇತಿ ಪರರೂಪಂ=ಈ ವಾರ್ತಿಕದಿಂದ ಪರರೂಪ ಪದ್ಮಪಾದಂ ಪದ್ಮವತ್ ಪಾದೌ ಯಸ್ಯ ತಂ=ಪದ್ಮಪಾದಂ ಎಂದರೆ ಪದ್ಮದಂತೆ ಪಾದಗಳು ಯಾರಿಗೆ ಇವೆಯೋ ಅವರು ಎಂದು ಅರ್ಥ. ಶುಭಕಪಿಶಜಟಂ ಶುಭಾ ಕಪಿಶಾ ಪಿಂಗಾ ಜಟಾ ಯಸ್ಯ ತಂ=ಮಂಗಳಕರವಾದ ಕೆಂಚಾದ ಜಟೆಯು ಯಾರಿಗೆ ಇದೆಯೋ ಅವರನ್ನು, ಸೈಣಚರ್ಮಾಣಂ=ಎಂದರೆ, ಏಣಸ್ಯ ಇದಂ ಐಣಂ=ಗಂಡುಜಿಂಕೆಗೆ ಸಂಬಂಧಪಟ್ಟದ್ದು ಎಂಬ ಅರ್ಥದಲ್ಲಿ ಏಣಸ್ಯ ಇದಂ ಎಂದು ವಿಗ್ರಹಮಾಡಿ ಅಣ್ ಪ್ರತ್ಯಯವನ್ನು ಹೇಳಿ ಐಣಂ ಎಂಬ ರೂಪವನ್ನು ಮಾಡಿಕೊಳ್ಳಬೇಕು. ತಚ್ಚ ತಚ್ಚರ್ಮ ಚ ತೇನ ಸಹ ವರ್ತತೇ ಇತಿ=ಅಂತಹ ಗಂಡುಜಿಂಕೆಗೆ ಸಂಬಂಧಪಟ್ಟ ಚರ್ಮವು ಐಣಚರ್ಮ, ಅದರಿಂದ ಸಹಿತನಾಗಿ ಇರುವವನು ಎಂದು ಸೈಣಚರ್ಮಾಣಂ=ಸೈಣಚರ್ಮಾ ಎಂಬ ಹೆಸರುಳ್ಳವನು ಅವನನ್ನು, ಕೃಷ್ಣಾಜಿನಂ ವಸಾನಮಿತ್ಯರ್ಥಃ=ಕೃಷ್ಣಾಜಿನವನ್ನು ಉಟ್ಟಿರುವ ಶ್ರೀವೇದವ್ಯಾಸರನ್ನು ಎಂದು ಅರ್ಥ. ಅಜಿನಂ ಚರ್ಮ ಕೃತ್ತಿಃ ಸ್ತ್ರೀ ಇತ್ಯಭಿಧಾನಾತ್=ಅಜಿನಂ, ಚರ್ಮ, ಕೃತ್ತಿ ಎಂಬ ಮೂರು ಶಬ್ದಗಳು ಚರ್ಮ ಎಂಬುದಕ್ಕೆ ಪರ್ಯಾಯ ಪದಗಳು ಇವುಗಳಲ್ಲಿ ಕೃತ್ತಿ ಶಬ್ದವು ಸ್ತ್ರೀಲಿಂಗವು, ಎಂದು ಕೋಶವಿದೆ. ಈಶಂ ಪರಮಸಮರ್ಥಂ ದೃಷ್ಟ್ವಾ=ಈಶ ಎಂದರೆ ಅತ್ಯಂತಸಮರ್ಥರಾದ ಶ್ರೀ ವೇದವ್ಯಾಸರನ್ನು ನೋಡಿ, ನತ್ವಾ ಪ್ರಣಮ್ಯ ಇತ್ಯರ್ಥಃ=ನತ್ವಾ ಎಂದರೆ ಪ್ರಣಮ್ಯ=ಭಕ್ತ್ಯಾದಿ ಅತಿಶಯಪೂರ್ವಕವಾಗಿ ನಮಸ್ಕರಿಸಿ ಎಂದು ಅರ್ಥ. ಉಪಗೂಢಃ=ಅಂದರೆ ಪ್ರಣತಂ ಹಸ್ತಾಭ್ಯಾಂ ಉತ್ಥಾಪ್ಯ ವೇದವ್ಯಾಸೇನ ಆಲಿಂಗಿತಃ=ನಮಸ್ಕಾರ ಮಾಡಿದ ಶ್ರೀಮಧ್ವರು ಶ್ರೀ ವೇದವ್ಯಾಸರಿಂದ ಎರಡೂ ಕೈಗಳಿಂದ ಮೇಲಕ್ಕೆತ್ತಲ್ಪಟ್ಟು ಆಲಿಂಗಿತರಾದರು ಎಂದು ಅರ್ಥ. ಅನಂತರ ಸೂಪವಿಷ್ಟಃ=ತದನುಜ್ಞಯಾ ಮುನಿಭಿಃ ದತ್ತೇ ಆಸನೇ ಸಮ್ಯಗುಪವಿಷ್ಟಃ, ಸೂಪವಿಷ್ಟಃ ಅಂದರೆ ಶ್ರೀವೇದವ್ಯಾಸರ ಅಪ್ಪಣೆಯಿಂದ ಮುನಿಗಳಿಂದ ಕೊಡಲ್ಪಟ್ಟ ಆಸನದಲ್ಲಿ ಚೆನ್ನಾಗಿ ಕುಳಿತವರಾಗಿ ಎಂದು ಅರ್ಥ. ಮುನೀಷ್ಟಃ= ವೇದವ್ಯಾಸಮುಖೇನ ವಿಜ್ಞಾತಸ್ವಸ್ವರೂಪಾಣಾಂ ಮುನೀನಾಂ ಇಷ್ಟಾ ವಿಷಯಃ ಮುನೀಷ್ಟಃ ಅಂದರೆ ವೇದವ್ಯಾಸರ ಮುಖದಿಂದ ತನ್ನ ಸ್ವರೂಪವನ್ನು ತಿಳಿದ ಮುನಿಗಳಿಗೆ ಪ್ರೀತಿವಿಷಯರಾದ ಶ್ರೀಮಧ್ವರು ಎಂದು ಅರ್ಥ. ಸಃ ಗುರುಃ ಪೂರ್ಣಬೋಧಃ ಸಃ ಗುರುಃ ಅಂದರೆ ಶ್ರೀಪೂರ್ಣಬೋಧರು ಎಂದು ಅರ್ಥ. ಮಾಂ=ನನ್ನನ್ನು, ಅವತು=ರಕ್ಷತು, ಅವತು ಅಂದರೆ ರಕ್ಷತು ಕಾಪಾಡಲಿ ಎಂದು ಅರ್ಥ. ಆಶಿಷಿಲೋಟ್=ಅವತು ಎಂಬುದು ಆಶೀರರ್ಥದಲ್ಲಿ ಲೋಟ್ ಲಕಾರವು. ಇಲ್ಲಿಗೆ ಹದಿನಾಲ್ಕನೆಯ ಶ್ಲೋಕದ ಗೂಢಭಾವಪ್ರಕಾಶಿಕಾ ವ್ಯಾಖ್ಯಾನವು ಮುಗಿಯಿತು ॥೧೪॥

**ಅವತರಣಿಕಾ** - ವ್ಯಾಸರಿಂದ ಉಪದಿಷ್ಟರಾದ ಆಚಾರ್ಯರು ನಾರಾಯಣ ಮುನಿಗಳಲ್ಲಿಗೆ ಹೋಗಿ ಅವರನ್ನು ಸ್ತೋತ್ರ ಮಾಡಿದರೆಂದು ಹೇಳುತ್ತಾರೆ.

**ಶಿಷ್ಯಂ ವ್ಯಾಸಸ್ಯ ನಾರಾಯಣಮಥ ಚ ಗತಂ ಸರ್ವಸೇತುಂ ಸುಮಾತ್ಸ್ಯಂ**
**ಸಾಶ್ವಾಸ್ಯಂ ಕೂರ್ಮಕೋಲೌ ನೃಹರಿಮಥಮನುಂ ವಾಮನಂ ಬುದ್ಧರಾಮೌ ।।**
**ವ್ಯಾಸಂ ಕಾಕುತ್ಸ್ಥಕೃಷ್ಣಾವತಿಚಿರಮಿತರಾನಂದನಂ ಕಲ್ಕಿಯಜ್ಞೌ**
**ಸಿದ್ಧೇಶಂ ನೌಮಿಧನ್ವಂತರಿವರವನಿತಾಖ್ಯಂ ತಮೇನಂ ಸ್ಮರಂತಂ ।।೧೫।।**

## ಗೂಢಭಾವಪ್ರಕಾಶಿಕಾ ವ್ಯಾಖ್ಯಾನ

ಇದಾನೀಂ ಏಕಾಂತೇ ವ್ಯಾಸಮುಖಾತ್ ಭಾರತಪಂಚರಾತ್ರವೇದಪುರಾಣಸೂತ್ರಾದೀನಾಂ ಯಥಾವದ್ಭಾವಂ

ವಿಜ್ಞಾಯ ತತ್ರೈವ ಸ್ಥಲಾಂತರೇ ತಪಸಾ ವಸಂತಮಿವ ಸ್ಥಿತಂ, ನಾರಾಯಣಂ ಪ್ರಾಪ್ಯ ತಂ ನಾನಾವತಾರವತ್ತಯಾ ದಧ್ಯೌ ಇತ್ಯಾಹ-ಶಿಷ್ಯಮಿತಿ। ವ್ಯಾಸಸ್ಯ ಶಿಷ್ಯಂ ವ್ಯಾಸೇನ ಉಪದಿಷ್ಟಂ ಅಥ ವ್ಯಾಸಾತ್ ಉಪದೇಶಲಾಭಾನಂತರಂ, ನಾರಾಯಣಂ ಧರ್ಮಪುತ್ರಂ ಗತಂ ಪ್ರಾಪ್ತಂ, ಕರ್ತರಿ ಕ್ತಃ ಸ್ಮರಂತಂ ಧ್ಯಾಯಂತಂ ಶ್ರೀಮಧ್ವಂನೌಮಿ ಸ್ತೌಮಿ ಚೇತ್ಯನ್ವಯಃ ನು ಸ್ತುತೌ ಲಟ್, ಕಥಂ ಸ್ಮರಂತಂ ಇತ್ಯತ ಆಹ ಸರ್ವಸೇತುಂ ಸರ್ವಜಗದಾಶ್ರಯಂ, ಸುಮಾತ್ಸ್ಯಂ ಶೋಭನ ಮತ್ಸ್ಯರೂಪಂ, ಸಾಶ್ವಾಸ್ಯಂ ಅಶ್ವಸ್ಯ ಆಸ್ಯೇನ ಮುಖೇನ ಸಹಿತಂ ಹಯಗ್ರೀವಾವತಾರಂ ಇತಿ ಯಾವತ್, ಕೂರ್ಮಕೋಲೌ ಕೂರ್ಮವರಾಹೌ ನೃಹರಿಂ ನೃಸಿಂಹಂ ಅಥಶಬ್ದಃ ಅವತಾರಾಣಾಂ ಸಮುಚ್ಚಯಾರ್ಥಃ, ಮನುಂ ಮನ್ವವತಾರಂ, ವಾಮನಂ ಬುದ್ಧರಾಮೌ ಬುದ್ಧಪರಶುರಾಮೌ, ವ್ಯಾಸಂ ವೇದವ್ಯಾಸಂ, ಕಾಕುತ್ಸ್ಥಕೃಷ್ಣೌ ರಾಮಕೃಷ್ಣೌ ಅತಿಚಿರಂ ಬಹುಕಾಲಂ, ಇತರಾನಂದನಂ ಐತರೇಯಂ, ಕಲ್ಕಿಯಜ್ಞೌ, ಸಿದ್ಧೇಶಂ ಕಪಿಲಂ ಧನ್ವಂತರಿವರವನಿತಾಖ್ಯಂ ಧನ್ವಂತರಿರಿತಿ ವರವನಿತೇತಿ ಚ ಆಖ್ಯಾ ಯಸ್ಯ ತಂ ತಮೇನಂ ಸ್ಮರಂತಂ ಇತ್ಯರ್ಥಃ ॥೧೫॥

**ಪದಚ್ಛೇದ** - ಶಿಷ್ಯಂ, ವ್ಯಾಸಸ್ಯ, ನಾರಾಯಣಂ, ಅಥ, ಚ, ಗತಂ ಸರ್ವಸೇತುಂ, ಸುಮಾತ್ಸ್ಯಂ, ಸಾಶ್ವಾಸ್ಯಂ, ಕೂರ್ಮಕೋಲೌ, ನೃಹರಿಂ, ಅಥ, ಮನುಂ, ವಾಮನಂ, ಬುದ್ಧರಾಮೌ ವ್ಯಾಸಂ, ಕಾಕುತ್ಸ್ಥಕೃಷ್ಣೌ ಅತಿಚಿರಂ, ಇತರಾನಂದನಂ, ಕಲ್ಕಿಯಜ್ಞೌ, ಸಿದ್ಧೇಶಂ, ನೌಮಿ, ಧನ್ವಂತರಿವರವನಿತಾಖ್ಯಂ, ತಂ, ಏನಂ, ಸ್ಮರಂತಂ.

**ಅನ್ವಯ** - ವ್ಯಾಸಸ್ಯ ಶಿಷ್ಯಂ, ಚ ಅಥ ನಾರಾಯಣಂ ಗತಂ, 'ಸರ್ವಸೇತುಂ ಸುಮಾತ್ಸ್ಯಂ ಸಾಶ್ವಾಸ್ಯಂ ಕೂರ್ಮಕೋಲೌ ನೃಹರಿಂ, ಅಥ ಮನುಂ ವಾಮನಂ ಬುದ್ಧರಾಮೌ ವ್ಯಾಸಂ ಕಾಕುತ್ಸ್ಥ ಕೃಷ್ಣೌ ಅತಿಚಿರಂ ಇತರಾನಂದನಂ, ಕಲ್ಕಿಯಜ್ಞೌ ಸಿದ್ಧೇಶಂ ಧನ್ವಂತರಿವರವನಿತಾಖ್ಯಂ ತಮೇನಂ ಸ್ಮರಂತಂ (ಶ್ರೀಮಧ್ವಂ) ನೌಮಿ.

**ಅನ್ವಯಾರ್ಥ** - ವ್ಯಾಸಸ್ಯ=ಶ್ರೀ ವೇದವ್ಯಾಸರ, ಶಿಷ್ಯಂ=ಶಿಷ್ಯರಾದ (ಶ್ರೀ ವೇದವ್ಯಾಸರಿಂದ ಉಪದೇಶ ಪಡೆದ) ಚ=ಮತ್ತು, ಅಥ=ವ್ಯಾಸರಿಂದ ಉಪದೇಶ ಪಡೆದ ಅನಂತರ, ನಾರಾಯಣಂ ಗತಂ=ಧರ್ಮಪುತ್ರರಾದ ನಾರಾಯಣ ದೇವರನ್ನುಹೊಂದಿದ, ಸರ್ವಸೇತುಂ=ಸಮಸ್ತ ಜಗತ್ತಿಗೂ ಆಶ್ರಯನಾದ, ಸುಮಾತ್ಸ್ಯಂ=ಸುಂದರವಾದ ಮತ್ಸ್ಯಸಂಬಂಧಿರೂಪವುಳ್ಳ, ಸಾಶ್ವಾಸ್ಯಂ=ಹಯಗ್ರೀವಾವತಾರನಾದ, ಕೂರ್ಮಕೋಲೌ=ಕೂರ್ಮ ಮತ್ತು ವರಾಹಾವತಾರಸ್ವರೂಪನಾದ, ನೃಹರಿಂ= ನರಸಿಂಹಸ್ವರೂಪನಾದ, ಅಥ=ಇನ್ನೂ ಅನೇಕಾವತಾರನಾದ, ವಾಮನಂ=ವಾಮನಸ್ವರೂಪನಾದ, ಬುದ್ಧರಾಮೌ=ಬುದ್ಧಾವತಾರ ಮತ್ತು ಪರಶುರಾಮಾವತಾರ ಸ್ವರೂಪಿಯಾದ, ವ್ಯಾಸಂ=ವೇದವ್ಯಾಸಸ್ವರೂಪನಾದ, ಕಾಕುತ್ಸ್ಥಕೃಷ್ಣೌ=ಶ್ರೀರಾಮ ಶ್ರೀಕೃಷ್ಣ ಸ್ವರೂಪನಾದ, ಅತಿಚಿರಂ=ಬಹಳ ಕಾಲದವರೆಗೆ, ಇತರಾನಂದನಂ=ಇತರಾಪುತ್ರನಾದ ಮಹಿದಾಸನಾಮಕನಾದ ಪರಮಾತ್ಮನನ್ನು, ಕಲ್ಕಿಯಜ್ಞೌ=ಕಲ್ಕಿ ಮತ್ತು ಯಜ್ಞನಾಮಕ ಪರಮಾತ್ಮನನ್ನು, ಸಿದ್ಧೇಶಂ=ಕಪಿಲ ನಾಮಕ ಪರಮಾತ್ಮನನ್ನೂ, ಧನ್ವಂತರಿವರವನಿತಾಖ್ಯಂ=ಧನ್ವಂತರಿ ಮತ್ತು ಶ್ರೇಷ್ಠವಾದ ಮೋಹಿನೀ ಎಂಬ ಸ್ತ್ರೀಸ್ವರೂಪದ ಹೆಸರುಳ್ಳ ಅವತಾರವುಳ್ಳ, ತಮೇನಂ=ಅಂತಹ ನಾರಾಯಣ ಮುನಿಯೆಂಬ ಶ್ರೀಮನ್ನಾರಾಯಣನನ್ನು, ಸ್ಮರಂತಂ=ಧ್ಯಾನಿಸುತ್ತಿರುವ, (ಶ್ರೀಮಧ್ವಂ= ಶ್ರೀಮಧ್ವಾಚಾರ್ಯರನ್ನು) ನೌಮಿ=ಸ್ತುತಿಸುತ್ತೇನೆ.

**ತಾತ್ಪರ್ಯ** - ದೊಡ್ಡಬದರಿಗೆ ಹೋದನಂತರ ಶ್ರೀಮದಾನಂದತೀರ್ಥರು ಏಕಾಂತದಲ್ಲಿ ಶ್ರೀವೇದವ್ಯಾಸರನ್ನು ಸೇವಿಸಿ ಪ್ರಸನ್ನಗೊಳಿಸಿ ಅವರ ಮುಖದಿಂದ ಭಾರತ ಪಂಚರಾತ್ರ ವೇದ, ಪುರಾಣ, ಬ್ರಹ್ಮಸೂತ್ರ ಮುಂತಾದ ಅನಂತಾಗಮಗಳ ಅಭಿಪ್ರಾಯವನ್ನು ಯಥಾವತ್ತಾಗಿ ತಿಳಿದರು. ಅನಂತರ ಅಲ್ಲಿಯೇ ಬೇರೊಂದು ಆಶ್ರಮದಲ್ಲಿ ತಪಸ್ಸು ಮಾಡುತ್ತಾ ಇರುವವರಂತೆ ಕಾಣಿಸಿಕೊಳ್ಳುತ್ತಾ ವಾಸಮಾಡುತ್ತಿರುವ ನಾರಾಯಣ ಮುನಿಗಳ ಬಳಿಗೆ ಹೋದರು. ಅಲ್ಲಿ ಒಬ್ಬರೇ ಆದ (ಅವತಾರರೂಪಗಳಿಗೂ ತನಗೂ ಭೇದವಿಲ್ಲದ) ನಾರಾಯಣ ಮುನಿಗಳನ್ನು ಅನೇಕಾನೇಕ ಅವತಾರವುಳ್ಳವರು, ಅವತಾರರೂಪಗಳಿಗಿಂತ ಅಭಿನ್ನರು ಎಂಬುದಾಗಿ ಧ್ಯಾನಿಸಿದರು ಎಂದು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

ಮೊಟ್ಟಮೊದಲು ಮಹಾಬದರಿಕಾಶ್ರಮಕ್ಕೆ ಹೋದನಂತರ ಶ್ರೀಮಧ್ವಾಚಾರ್ಯರು ಶ್ರೀವೇದವ್ಯಾಸರ ಶಿಷ್ಯರಾದರು. ಅಂದರೆ ಅವರಿಂದ ಉಪದೇಶವನ್ನು ಪಡೆದರು. ವ್ಯಾಸರಿಂದ ಉಪದೇಶ ಪಡೆದ ನಂತರ ಧರ್ಮಪ್ರಜಾಪತಿಯ ಪುತ್ರರಾದ ನಾರಾಯಣಮುನಿಗಳ ಬಳಿಗೆ ಬಂದರು. ಆ ನಾರಾಯಣಮುನಿಗಳ ನಾನಾವತಾರಗಳನ್ನೂ, ಆ ಅವತಾರಗಳು ಮೂಲರೂಪದಿಂದಲೂ ಮತ್ತು ಪರಸ್ಪರವಾಗಿಯೂ ಅಭಿನ್ನವೆಂದೂ ಸ್ಮರಿಸಿದರು. 'ಸರ್ವ ಜಗತ್ತುಗಳಿಗೆ ಆಧಾರವಾಗಿರುವ ಮೂಲರೂಪನಾದ ಆದಿಕೂರ್ಮನು (ಸೇತು ನಾಮಕರೂಪವು) ಮೂಲ ನಾರಾಯಣನು, ಸುಂದರವಾದ ಮೀನಿನಂತಹ ರೂಪವು, ಹಯಗ್ರೀವಾವತಾರವು, ಕೂರ್ಮಾವತಾರ, ವರಾಹಾವತಾರ, ನರಸಿಂಹಾವತಾರ ಮತ್ತು ತಾಪಸಮನುವಿನ ಅವತಾರ ವಾಮನಬುದ್ಧ, ಪರಶುರಾಮ, ವೇದವ್ಯಾಸ, ಶ್ರೀರಾಮಚಂದ್ರ ಶ್ರೀಕೃಷ್ಣ ಈ ಅವತಾರ ಸ್ವರೂಪನಾದ ಶ್ರೀನಾರಾಯಣನನ್ನು ಸ್ಮರಿಸಿದರು. ಈ ಅವತಾರಗಳಲ್ಲದೆ ಇತರಾದೇವಿಯ ತಪಸ್ಸಿನಿಂದ ಸಂತುಷ್ಟನಾಗಿ ಅವತರಿಸಿದ ಮಹಿದಾಸ ಎಂಬ ಅವತಾರಾಭಿನ್ನರನ್ನಾಗಿ ಶ್ರೀನಾರಾಯಣಮುನಿಗಳನ್ನು ಬಹಳ ಹೊತ್ತು ಸ್ಮರಿಸಿದರು. ಕಲ್ಕಿ, ಯಜ್ಞ, ಕಪಿಲ, ಧನ್ವಂತರಿ ಅವತಾರಗಳನ್ನೂ ಪರಮ ಸುಂದರವಾದ ಮೋಹಿನೀರೂಪಾಭಿನ್ನನಾದ ಶ್ರೀನಾರಾಯಣಮುನಿಯನ್ನೂ ಸ್ಮರಿಸಿದರು. ಹೀಗೆ ಸರ್ವಾವತಾರಾಭಿನ್ನರನ್ನಾಗಿ ಶ್ರೀನಾರಾಯಣಮುನಿಗಳನ್ನು ಸ್ಮರಿಸುತ್ತಿರುವ ಶ್ರೀಮಧ್ವ ಮುನಿರಾಜರನ್ನು ನಾನು ಸ್ತುತಿಸುತ್ತೇನೆ ಎಂದು ಗ್ರಂಥಕಾರರು ಹೇಳುತ್ತಿದ್ದಾರೆ.

**ವಿಗ್ರಹ** - ಸರ್ವೇಷಾಂ ಸೇತುಃ ಸರ್ವಸೇತುಃ ತಂ, ಮತ್ಸ್ಯಸ್ಯ ಇದಂ ಮಾತ್ಸ್ಯಂ ಸು ಶೋಭನಂ ಮಾತ್ಸ್ಯಂಯಸ್ಯಸಃ ಸುಮಾತ್ಸ್ಯಃತಂ, ಅಶ್ವಸ್ಯ ಆಶ್ಯಂ ಅಶ್ವಾಸ್ಯಂ ಅಶ್ವಾಸ್ಯೇನ ಸಹವರ್ತತೇ ಇತಿ ಸಾಶ್ವಾಸ್ಯಃ ತಂ, ಕೂರ್ಮಶ್ಚ ಕೋಲಶ್ಚ ಕೂರ್ಮಕೋಲೌ, ತೌ ನಾ ಹರಿರಿವ ನೃಹರಿಃ ನೇವ ಹರಿಃ ನೃಹರಿಃ (ಇತಿವಾ) ತಂ, ಬುದ್ಧಶ್ಚರಾಮಶ್ಚ ಬುದ್ಧರಾಮೌ, ಕಕುದಿ ತಿಷ್ಠತೀತಿ ಕಕುತ್‌ಸ್ಥಃ ಕಕುತ್‌ಸ್ಥಸ್ಯ ಅಯಂ ಕಾಕುತ್‌ಸ್ಥಃ, ಕಾಕುತ್ಸ್ಥಶ್ಚ ಕೃಷ್ಣಶ್ಚ ಕಾಕುತ್ಸ್ಥ ಕೃಷ್ಣೌ ತೌ, ಇತರಾಯಾಃ ನಂದನಃ ಇತರಾನಂದನಃ ತಂ, ಕಲ್ಕಿಶ್ಚ ಯಜ್ಞಶ್ಚ ಕಲ್ಕಿಯಜ್ಞೌ ತೌ, ಸಿದ್ಧಾನಾಂ, ಈಶಃ ಸಿದ್ಧೇಶಃ ತಂ, ವರಾ ಚ ಸಾ ವನಿತಾ ಚ ವರವನಿತಾ, ಧನ್ವಂತರಿಶ್ಚವರನಿತಾಚ ಧನ್ವಂತರಿವರವನಿತೇ, ಧನ್ವಂತರಿವರವನಿತೇ ಇತಿ ಆಖ್ಯೇ ಯಸ್ಯಸಃ ತಂ,

~~**ಕ್ರಿಯಾಪದ** - ನೌತಿ ನುತಃ ನುವಂತಿ, ನೌಷಿ ನುಥಃ ನುಥ, ನೌಮಿ ನುವಃ ನುಮಃ ಣು (ನು) ಸ್ತುತೌ~~ ಸಕರ್ಮಕಃ ಸೇಟ್ ಪರಸ್ಮೈಪದಿ ಲಟ್ ಉತ್ತಮಪುರುಷ ಏಕವಚನಂ

**ಪ್ರಯೋಗ** - ಅಹಂ ವ್ಯಾಸಸ್ಯ ಶಿಷ್ಯಂ ಅಥ ಚ ನಾರಾಯಣಂ ಗತಂ ಸರ್ವಸೇತು.... ತಮೇನಂ ಸ್ಮರಂತಂ ಶ್ರೀ ಮಧ್ವಂ ನೌಮಿ (ಕರ್ತರಿ) ಮಯಾ ವ್ಯಾಸಸ್ಯಶಿಷ್ಯಃ ಅಥ ಚ ನಾರಾಯಣಂ ಗತಃ ಸರ್ವಸೇತುಂ ತಮೇನಂ ಸ್ಮರನ್ ಶ್ರಿ ಮಧ್ವಃ ನೂಯತೇ ( ಕರ್ಮಣಿ)

**ಗೂಢಾಭಾವವ್ಯಾಖ್ಯಾ ಕನ್ನಡದಲ್ಲಿ ಅರ್ಥ** - ಇದಾನೀಂ=ಈಗ ಏಕಾಂತೇ=ರಹಸ್ಯದಲ್ಲಿ, ವ್ಯಾಸ ಮುಖಾತ್=ಶ್ರೀ ವೇದವ್ಯಾಸರ ಬಾಯಿಯಿಂದ, ಭಾರತಪಂಚರಾತ್ರವೇದಪುರಾಣಸೂತ್ರಾದೀನಾಂ=ಮಹಾಭಾರತ, ಪಂಚರಾತ್ರ, ಅಪರಿಮಿತವಾದ ವೇದಗಳು, ಸಮಸ್ತ ಪುರಾಣಗಳು, ಬ್ರಹ್ಮಸೂತ್ರ ಮುಂತಾದವುಗಳ ಭಾವಂ=ಅಭಿಪ್ರಾಯವನ್ನು, ಯಥಾವತ್=ಸರಿಯಾಗಿ ವಿಜ್ಞಾಯ=ತಿಳಿದು, ತತ್ರೈವ ಸ್ಥಳಾಂತರೇ=ಅಲ್ಲಿಯೇ ಬೇರೊಂದು ಆಶ್ರಮಸ್ಥಳದಲ್ಲಿ, ತಪಸಾ ವಸಂತಂ ಇವ ಸ್ಥಿತಂ =ತಪಸ್ಸು ಮಾಡುತ್ತಾ ವಾಸಿಸುತ್ತಿದ್ದಾರೋ ಎಂಬಂತಿರುವ, ನಾರಾಯಣಂ ಪ್ರಾಪ್ಯ=ನಾರಾಯಣ ಮುನಿಗಳನ್ನು ಹೊಂದಿ, ತಂ=ಆ ನಾರಾಯಣಮುನಿಗಳನ್ನು, ನಾನಾವತಾರವತ್ತಯಾ=ಅನೇಕ ಅವತಾರವುಳ್ಳವರೆಂದು, ದಧ್ಯೌ ಇತ್ಯಾಹ=ಧ್ಯಾನಿಸಿದರು **ಎಂದು** ಹೇಳುತ್ತಾರೆ. ಶಿಷ್ಯಮಿತಿ=ಶಿಷ್ಯಂ ಇತ್ಯಾದಿ ೧೫ನೆಯ ಶ್ಲೋಕದಿಂದ ಎಂದು ಭಾವ.

**ವ್ಯಾಸಸ್ಯ ಶಿಷ್ಯಂ**= ವ್ಯಾಸೇನ ಉಪದಿಷ್ಟಂ, ಅಂದರೆ ಶ್ರೀ ವೇದವ್ಯಾಸರಿಂದ ಉಪದೇಶವನ್ನು ಹೊಂದಿ ಅವರ **ಶಿಷ್ಯರಾದ ಅಥ ಚ**=ವ್ಯಾಸಾದುಪದೇಶಲಾಭಾದಂತರಂ ಅಂದರೆ ಶ್ರೀ ವ್ಯಾಸರಿಂದ ಉಪದೇಶ ಹೊಂದಿದ ಅನಂತರದಲ್ಲಿ

ಯಾದರೋ, ನಾರಾಯಣಂ=ಧರ್ಮಪುತ್ರಂ ನಾರಾಯಣಂ ಎಂದರೆ ಧರ್ಮಪ್ರಜೇಶನ ಪುತ್ರರಾದ ನಾರಾಯಣ ಮುನಿಗಳನ್ನು, ಗತಂ=ಪ್ರಾಪ್ತಂ, ಗತಂ ಎಂದರೆ ಹೊಂದಿದ, ಗತಂ ಎಂಬಲ್ಲಿ ಕರ್ತ್ರರ್ಥದಲ್ಲಿ ಕ್ತ ಪ್ರತ್ಯಯ ಬಂದಿದೆ. ಸ್ಮರಂತಂ=ಧ್ಯಾಯಂತಂ, ಸ್ಮರಂತಂ ಎಂದರೆ ಧ್ಯಾನಿಸುತ್ತಿರುವ ಶ್ರೀಮಧ್ವಂ (ಅಧ್ಯಾಹಾರ) ಶ್ರೀಮಧ್ವಾಚಾರ್ಯರನ್ನು, ನೌಮಿ=ಸ್ತೌಮಿ ಚ ಇತ್ಯನ್ವಯಃ ನೌಮಿ ಎಂದರೆ ಸ್ತುತಿಸುತ್ತೇನೆ ಎಂದು ಅನ್ವಯ.

ನು ಸ್ತುತೌ ಲಟ್ = ನೌಮಿ ಎಂಬಲ್ಲಿ ನುಸ್ತುತೌ ಎಂಬ ಧಾತುವಿನ ಲಟ್‌ಕಾರ. ಕಥಂ=ಹೇಗೆ, ಸ್ಮರಂತಂ= ಧ್ಯಾನಿಸುತ್ತಿರುವ ಶ್ರೀ ಮಧ್ವಾಚಾರ್ಯರನ್ನು (ನಮಸ್ಕರಿಸುತ್ತೀರಿ) ಇತಿ ಅತಃ ಆಹ = ಎಂಬ ಪ್ರಶ್ನೆಗೆ ಉತ್ತರ ಹೇಳುತ್ತಾರೆ. ಸರ್ವಸೇತುಂ ಇತಿ= ಸರ್ವಸೇತು ಎಂಬಿತ್ಯಾದಿಯಾಗಿ, ಸರ್ವಸೇತುಂ=ಸರ್ವಜಗದಾಶ್ರಯಂ, ಸರ್ವಸೇತು ಎಂದರೆ ಸರ್ವಜಗತ್ತುಗಳಿಗೂ ಆಶ್ರಯನಾದವನನ್ನು ಎಂದು ಅರ್ಥ. ಸುಮಾತ್ಸ್ಯಂ=ಶೋಭಮತ್ಸ್ಯಃ ರೂಪಂ ಸುಮಾತ್ಸ್ಯಂ ಎಂದರೆ ಉತ್ಕೃಷ್ಟವಾದ ಮತ್ಸ್ಯಾವತಾರಸ್ವರೂಪಿಯಾದವನನ್ನು ಎಂದು ಅರ್ಥ. ಸಾಶ್ವಾಸ್ಯಂ=ಅಶ್ವಸ್ಯ ಆಸ್ಯೇನ ಮುಖೇನ ಸಹಿತಂ, ಸಾಶ್ವಾಸ್ಯಂ ಎಂದರೆ ಅಶ್ವದ (ಕುದುರೆಯ) ಮುಖದಿಂದ ಸಹಿತನಾದವನನ್ನು ಎಂದು ಅರ್ಥ. ಹಯಗ್ರೀವಾವತಾರಂ ಇತಿಯಾವತ್='ಸಾಶ್ವಾಸ್ಯಂ' ಎಂಬುದಕ್ಕೆ ಹಯಗ್ರೀವಾವತಾರ ಸ್ವರೂಪವುಳ್ಳವನನ್ನು ಎಂದು ಅರ್ಥ. ಕೂರ್ಮಕೋಲೌ= ಕೂರ್ಮವರಾಹೌ, ಕೂರ್ಮಕೋಲೌ ಎಂದರೆ ಕೂರ್ಮಾವತಾರ ಮತ್ತು ವರಾಹಾವತಾರಸ್ವರೂಪಿಯಾದವನನ್ನು ಎಂದು ಅರ್ಥ. ನೃಹರಿಂ=ನೃಸಿಂಹಂ, ನೃಹರಿ ಎಂದರೆ ನರಸಿಂಹರೂಪಿಯಾದವನನ್ನು ಎಂದು ಅರ್ಥ. ಅಥಶಬ್ದಃ ಅವತಾರಾಣಾಂ ಸಮುಚ್ಚಯಾರ್ಥಃ=ಎರಡನೆಯ ಈ ಅಥಶಬ್ದವು ಇನ್ನು ಮುಂದೆ ಹೇಳುವ ಅವತಾರಗಳನ್ನು ಸೇರಿಸಿಕೊಳ್ಳುವುದಕ್ಕೋಸ್ಕರ ಎಂದು ತಿಳಿಯಬೇಕು. ಮನುಂ=ಮನ್ವವತಾರಂ. ಮನುಂ ಎಂದರೆ ತಾಪಸಮನುವಿನ ಅವತಾರಸ್ವರೂಪರಾದವರನ್ನು ಎಂದು ಅರ್ಥ. ವಾಮನಂ=ವಾಮನಸ್ವರೂಪಿಯಾದವರನ್ನು ಬುದ್ಧರಾಮೌ=ಷುಚಿಃಃಛ ಪರಶುರಾಮೌ, ಬುದ್ಧರಾಮೌ ಎಂದರೆ ಬುದ್ಧ ಪರಶುರಾಮ ಸ್ವರೂಪರಾದವರನ್ನು ಎಂದು ಅರ್ಥ. ವ್ಯಾಸಂ=ವೇದವ್ಯಾಸಂ, ವ್ಯಾಸಂ ಎಂದರೆ ವೇದವ್ಯಾಸರೂಪಿಯಾದವರನ್ನು ಎಂದು ಅರ್ಥ. ಕಾಕುತ್ಸ್ಥಕೃಷ್ಣೌ=ರಾಮಕೃಷ್ಣೌ, ಕಾಕುತ್ಸ್ಥಕೃಷ್ಣೌ ಎಂದರೆ ಶ್ರೀ ರಾಮಚಂದ್ರ ಮತ್ತು ಶ್ರೀ ಕೃಷ್ಣರನ್ನು ಎಂದು ಅರ್ಥ, ಅತಿಚಿರಂ=ಬಹುಕಾಲಂ ಅತಿಚಿರಂ ಎಂದರೆ ಬಹಳಕಾಲ ಎಂದು ಅರ್ಥ, ಇತರಾನಂದನಂ=ಐತರೇಯಂ, ಇತರಾನಂದನಂ ಎಂದರೆ ಐತರೇಯ ಮಹಿದಾಸರನ್ನು ಎಂದು ಅರ್ಥ. ಕಲ್ಕಿಯಜ್ಞೌ=ಕಲ್ಕಿ ಮತ್ತು ಯಜ್ಞರೂಪಿಯಾದವರನ್ನು ಎಂದು ಅರ್ಥ. ಸಿದ್ಧೇಶಂ=ಕಪಿಲಂ ಸಿದ್ಧೇಶಂ ಎಂದರೆ ಕಪಿಲರೂಪಿಯಾದ ಪರಮಾತ್ಮನನ್ನು ಎಂದು ಅರ್ಥ. ಧನ್ವಂತರಿ ವರವನಿತಾಖ್ಯಂ=ಧನ್ವಂತರಿರಿತಿ, ವರವನಿತೇತಿ ಆಖ್ಯಾಯಸ್ಯ ತಂ, ಧನ್ವಂತರಿ ಎಂದೂ ಶ್ರೇಷ್ಠರಾದ ಮೋಹಿನೀರೂಪಿ ಎಂದು ಹೆಸರು ಯಾವನಿಗೆ ಇದೆಯೋ ಅಂತಹವರನ್ನು, ತಂ ಏನಂ ಸ್ಮರಂತಂ=ಇಂತಹ ನಾರಾಯಣಮುನಿ ಸ್ವರೂಪನಾದ ಶ್ರೀ ಮನ್ನಾರಾಯಣನನ್ನು ಧ್ಯಾನಿಸುತ್ತಿರುವ ಶ್ರೀಮಧ್ವಗುರುಗಳನ್ನು (ನೌಮಿ=ನಮಸ್ಕರಿಸುತ್ತೇನೆ) ಇತ್ಯರ್ಥಃ ಎಂದು ಅರ್ಥ.

**ಅವತರಣಿಕಾ** - ಮತ್ತು ಮಧ್ವಾಚಾರ್ಯರು ಸ್ಮರಿಸಿದ ಅವತಾರರೂಪಗಳನ್ನು ಹೇಳಿ, ಶ್ರೀ ಮಧ್ವರು ನಾರಾಯಣಮುನಿಗಳಿಂದ ಪ್ರೇರಿತರಾಗಿ ದಕ್ಷಿಣ ದಿಕ್ಕಿನಲ್ಲಿರುವ ಭರತಖಂಡಕ್ಕೆ ಬಂದರು ಎಂದು ಹೇಳುತ್ತಾರೆ.

ಶ್ಲೋಕ - **ದತ್ತಾತ್ರೇಯಂ ಕುಮಾರಂ ಹೃದಿ ದಧದೃಷಭಂ ಹಂಸಕೃಷ್ಣೌ**
**ಹರಿಂ ತಂ ಧಾರ್ಮಂ ನಾರಾಯಣಾಖ್ಯಂ ಸದಶಶತಸಹಸ್ರಾದ್ಯನಂತಾವತಾರಂ।**
**ತನ್ನುನ್ನಸ್ತತ್ರ ವ್ಯಸೂಕ್ತೈಃ ವರಮುಚಿತನರೈರೇವ ಸೇವ್ಯತ್ವಮಾಪ್ತಃ**
**ಕೃಚ್ಛ್ರಾದ್ದ್ಯಾತ್ರೋನ್ಮುಖೋ ಮೇ ಸ ಗತಿರಪಿ ಹರಿರ್ವ್ಯಾಸನಾರಾಯಣಾಖ್ಯಃ ।।೧೬।।**

**ಗೂಢಭಾವಪ್ರಕಾಶಿಕಾ** - ದತ್ತೇತಿ। ಯೋ ಮಧ್ವಃ, ದತ್ತಾತ್ರೇಯಂ ದತ್ತಾತ್ರೇಯಾವತಾರಂ, ಕುಮಾರಂ ಕುಮಾರಾವತಾರಂ, ಋಷಭಂ ಋಷಭನಾಮಾನಂ, ಹಂಸಕೃಷ್ಣೌ ಹಂಸಾವತಾರಕೃಷ್ಣಾವತಾರೌ, ಧಾರ್ಮಂ ಧರ್ಮಪುತ್ರಂ ತಂ ಹರಿಂ, ಧರ್ಮನಾರಾಯಣಾಖ್ಯಂ, ಧಾರ್ಮಮಿತ್ಯುಭಯತ್ರ ಸಂಬಂಧ್ಯತೇ, ಸದಶಶತಸಹಸ್ರಾದ್ಯನಂತಾವತಾರಂ, ದಶ

ಮತ್ಸ್ಯಾದಿ, ಶತಂ ನಾರಾಯಣಾದಿ, ಸಹಸ್ರಂ ವಿಶ್ವಾದಿ, ಆದಿಪದಾದ್ಯನಂತಾವತಾರಂ, ಬಹುವ್ರೀಹಿಸಮಾಸಃ ದಶ ಚ ಶತಂ ಚ ಸಹಸ್ರಂ ಚ ದಶಶತಸಹಸ್ರಾಣಿ, ತಾನಿ ಆದೀನಿ ಯೇಷಾಂ ತೇ, ತಾದೃಶಾಶ್ಚ ತೇ ಅನಂತಾವತಾರಾಶ್ಚ ದಶಶತಸಹಸ್ರಾದ್ಯನಂತಾವತಾರಾಃ ತೈಃ ಸಹಿತಃ ಸದಶಶತಸಹಸ್ರಾದ್ಯನಂತಾವತಾರಃ ತಂ, ಬಹುವ್ರೀಹಿಸಮಾಸಃ, ಹೃದಿ ಹೃನ್ಮಂದಿರೇ ದಧತ್ ದಧಾನಃ, ತಂ ಸ್ಮರನ್ ಇತಿ ಯಾವತ್ ನಾಭ್ಯಸ್ತಾಚ್ಛತುಃ ಇತಿ ನುಮಭಾವಃ, ತತ್ತ್ವಸೂಕ್ತ್ಯೈ ತತ್ವಾನಾಂ ಪರಾಪರವಸ್ತುತತ್ತ್ವಾನಾಂ ಸೂಕ್ತ್ಯೈ ಸಮ್ಯಗ್ ನಿರೂಪಣಾಯ, ಬ್ರಹ್ಮಸೂತ್ರಭಾಷ್ಯಂ ಕರ್ತುಮಿತಿ ಭಾವಃ, ತನ್ನುನ್ನಃ ತೇನ ನಾರಾಯಣೇನ ನುನ್ನಃ ಪ್ರೇರಿತಃ, ಉಚಿತನರೈರೇವ ಯೋಗ್ಯಪುರುಷೈರೇವ, ಸೇವ್ಯತ್ವಂ ಸೇವನೀಯತ್ವಂ, ವರಂ ರೂಪಂ ಸೇವನೀಯತ್ವರೂಪಂ ಅನುಗ್ರಹಂ ಆಪ್ತಃ ಪ್ರಾಪ್ತಃ, ಸೂತ್ರಸ್ಯ ಯಥಾವತ್ತಯಾ ಭಾಷ್ಯಂ ಕೃತ್ವಾ, ಸರ್ವೇಭ್ಯಃ ತತ್ತ್ವಂ ಉಪದೇಷ್ಟುಂ ಗಚ್ಛ ಇತಿ ನಾರಾಯಣೇನ ಉಕ್ತಃ ಮಧ್ವಃ 'ಸ್ವಾಮಿನ್ ಅಧುನಾ ಕಲಿಕಲುಷೀಕೃತಮನಸಾಂ, ಅಯೋಗ್ಯಾನಾಂ ನಿಂದಿತಂ, (ತತ್) ಉತ್ತಮತತ್ತ್ವೋಪದೇಶನಂ ಕರ್ತುಂ ಮಾಂ ನ ನಿಯೋಕ್ತುಂ ಅರ್ಹಸಿ' ಇತಿ ಅಭಾಷತ, ತದಾ ಯೋಗ್ಯಾ ಏವ ತ್ವಾಂ ಭಜಂತು, ಅಯೋಗ್ಯಾಃ ತ್ವದ್ವಿಮುಖಾಃ ಭವಂತು'' ಇತಿ ವರಂ ದತ್ತವಾನ್ ಇತಿಭಾವಃ। ಕೃಚ್ಛ್ರಾತ್‌ಕಷ್ಟಾತ್, ತದ್ವಿರಹಾಸಹಿಷ್ಣುತ್ವಾದಿತಿಭಾವಃ, ಯಾತ್ರೋನ್ಮುಖಃ ಯಾತ್ರಾಯಾಂ ದಕ್ಷಿಣದಿಶಂ ಪ್ರತಿ ಗಮನೇ ಉನ್ಮುಖಃ ಉದ್ಯುಕ್ತಃ, ಅಭೂತ್ ಸ ಗುರುಃ ಪೂರ್ಣಬೋಧಃ, ವ್ಯಾಸನಾರಾಯಣಾಖ್ಯಃ ವ್ಯಾಸನಾರಾಯಣನಾಮಾ ಹರಿರಪಿ ಮೇ ಗತಿಃ ಪ್ರಾಪ್ಯಃ (ಭವತು).

**ಪದಚ್ಛೇದ** - ದತ್ತಾತ್ರೇಯಂ, ಕುಮಾರಂ, ಹೃದಿ, ದಧತ್, ಋಷಭಂ, ಹಂಸಕೃಷ್ಣೌ, ಹರಿಂ, ತಂ, ಧಾರ್ಮಂ, ನಾರಾಯಣಾಖ್ಯಂ, ಸದಶಶತ ಸಹಸ್ರಾದ್ಯನಂತಾವತಾರಂ, ತನ್ನುನ್ನಃ, ತತ್ತ್ವಸೂಕ್ತ್ಯೈ, ವರಂ, ಉಚಿತನರೈಃ, ಏವ, ಸೇವ್ಯತ್ವಂ, ಆಪ್ತಃ, ಕೃಚ್ಛ್ರಾತ್, ಯಾತ್ರೋನ್ಮುಖಃ, ಮೇ ಸಃ, ಗತಿಃ, ಅಪಿ, ಹರಿಃ, ವ್ಯಾಸನಾರಾಯಣಾಖ್ಯಃ,

**ಅನ್ವಯ** - ಯಃ (ಮಧ್ವಃ) ದತ್ತಾತ್ರೇಯಂ, ಕುಮಾರಂ, ಋಷಭಂ, ಹಂಸಕೃಷ್ಣೌ ಧಾರ್ಮಂ ತಂ ಹರಿಂ, ಧಾರ್ಮಂ ನಾರಾಯಣಾಖ್ಯಂ ಸದಶಶತಸಹಸ್ರಾದ್ಯನಂತಾವತಾರಂ ತಂ ಹೃದಿ ದಧತ್ (ಸನ್) ತತ್ತ್ವಸೂಕ್ತ್ಯೈ ತನ್ನುನ್ನಃ, ಉಚಿತನರೈರೇವ ಸೇವ್ಯತ್ವಂ ವರಂ ಆಪ್ತಃ, ಕೃಚ್ಛ್ರಾತ್ ಯಾತ್ರೋನ್ಮುಖಃ (ಅಭೂತ್) ಸಃ (ಗುರುಃ) ವ್ಯಾಸನಾರಾಯಣಾಖ್ಯಃ ಹರಿಹಪಿ ಮೇ ಗತಿಃ (ಭವತು).

**ಅನ್ವಯಾರ್ಥ** - ಯಃ=ಯಾವ ಶ್ರೀಮಧ್ವಾಚಾರ್ಯರು, ದತ್ತಾತ್ರೇಯಂ=ದತ್ತಾತ್ರೇಯಾವತಾರವನ್ನೂ, ಕುಮಾರಂ= ಸನತ್ಕುಮಾರಾವತಾರವನ್ನು, ಋಷಭಂ=ಋಷಭಾವತಾರವನ್ನೂ, ಹಂಸಕೃಷ್ಣೌ=ಹಂಸಾವತಾರ ಕೃಷ್ಣಾವತಾರಗಳನ್ನೂ, ಧಾರ್ಮಂ=ಧರ್ಮಪ್ರಜಾಪತಿಯ ಪುತ್ರನಾದ, ತಂ ಹರಿಂ=ಆ ಹರಿ ಎಂಬ ಅವತಾರವನ್ನು, ಸದಶಶತಸಹಸ್ರಾದ್ಯನಂತಾವತಾರಂ= ದಶ=ಮತ್ಸ್ಯಾದಿ ಹತ್ತು ಅವತಾರಗಳು, ಶತ=ನಾರಾಯಣಾದಿ ನೂರು ರೂಪಗಳು, ಸಹಸ್ರ=ವಿಶ್ವಾದಿ ಸಾವಿರರೂಪಗಳು, ಆದಿ=ಇವುಗಳೇ ಮೊದಲಾಗಿ ಉಳ್ಳ ರೂಪಗಳಿಂದ ಕೂಡಿದ, ಅನಂತ=ಅಜಿತಾದಿ ಅನಂತರೂಪಗಳ ಸ್ವರೂಪವಾದ, ಅವತಾರಂ=ಅವತಾರಗಳುಳ್ಳ, ಧಾರ್ಮಂ=ಧರ್ಮ ಪ್ರಜಾಪತಿಯ ಪುತ್ರನಾದ, ನಾರಾಯಣಾಖ್ಯಂ=ನಾರಾಯಣ ಮುನಿಯೆಂಬ ಹೆಸರುಳ್ಳ ಪರಮಾತ್ಮನನ್ನು, ಹೃದಿ=ಮನಸ್ಸಿನಲ್ಲಿ, ದಧತ್=ಧರಿಸಿಕೊಂಡಿರುವವರಾಗಿ (ಸ್ಮರಿಸುತ್ತಿರುವವರಾಗಿ) ತತ್ತ್ವಸೂಕ್ತ್ಯೈ= ಪರಾಪರ ವಸ್ತುತತ್ತ್ವಗಳ ಸರಿಯಾದ ನಿರೂಪಣಕ್ಕೋಸ್ಕರ, ತನ್ನುನ್ನಃ=ಆ ನಾರಾಯಣಮುನಿಗಳಿಂದ ಪ್ರೇರಿತರಾದ, ಉಚಿತನರೈರೇವ=ಮುಕ್ತಿಯೋಗ್ಯರಾದ ಸಾತ್ತ್ವಿಕ ಅಧಿಕಾರಿಗಳಿಂದಲೇ, ಸೇವ್ಯತ್ವಂ ವರಂ=ಸೇವಿಸಲ್ಪಡುವಿಕೆ ಎಂಬ ವರವನ್ನು, ಆಪ್ತಃ=ಹೊಂದಿದ, ಕೃಚ್ಛ್ರಾತ್= (ಅವರ ವಿರಹವನ್ನು ಸಹಿಸಲಾರದುದರಿಂದ) ಕಷ್ಟದಿಂದ, ಯಾತ್ರೋನ್ಮುಖಃ (ಅಭೂತ್)= ದಕ್ಷಿಣ ದಿಕ್ಕನ್ನು ಕುರಿತು ಪ್ರಯಾಣ ಮಾಡುವುದರಲ್ಲಿ ಉದ್ಯುಕ್ತರಾಗಿ ಆದರೋ ಸಃ=ಅಂತಹ ಗುರುಗಳಾದ ಶ್ರೀಮಧ್ವಾಚಾರ್ಯರು, ವ್ಯಾಸನಾರಾಯಣಾಖ್ಯಃ ಹರಿರಪಿ=ವೇದವ್ಯಾಸ, ನಾರಾಯಣಮುನಿ ಎಂಬ ಹೆಸರುಳ್ಳ ಶ್ರೀಮನ್ನಾರಾಯಣನೂ ಕೂಡ, ಮೇ ಗತಿಃ=ನನಗೆ ಪ್ರಾಪ್ಯರು (ಹೊಂದಲು ಯೋಗ್ಯರು) (ಭವತು=ಆಗಲಿ)

**ತಾತ್ಪರ್ಯ** - ಶ್ರೀಮಧ್ವಾಚಾರ್ಯರು ಅತ್ರಿಋಷಿಯ ಪುತ್ರನಾಗಿ ಅವತರಿಸಿದ ದತ್ತಾತ್ರೇಯ ಮೂರ್ತಿಯನ್ನೂ,

ಸನತ್ಕುಮಾರರೂಪವನ್ನೂ, ಋಷಭಾವತಾರವನ್ನೂ, ಹಂಸರೂಪವನ್ನೂ, ಹಾಗೆಯೇ ಧರ್ಮಪ್ರಜಾಪತಿಯ ಪುತ್ರನಾಗಿ ಆವಿರ್ಭವಿಸಿದ ಕೃಷ್ಣ ಎಂಬ ರೂಪವನ್ನೂ, ಪಾಪಪರಿಹಾರಕನಾದ ಗಜೇಂದ್ರನಿಗೆ ಮುಕ್ತಿಪ್ರದನಾದ ಹಾಗೂ ಧರ್ಮಪ್ರಜಾಪತಿಯ ಪುತ್ರನಾದ ಹರಿ ಎಂಬ ಅವತಾರರೂಪವನ್ನೂ, ಮತ್ತು ಧರ್ಮಪ್ರಜಾಪತಿ ಪುತ್ರನಾದ ಪ್ರಕೃತ ತನ್ನ ಎದುರಿನಲ್ಲಿಯೇ ಇರುವ ನಾರಾಯಣಮುನಿಸ್ವರೂಪಾವತಾರನಾಗಿರುವ ಶ್ರೀಮನ್ನಾರಾಯಣನನ್ನೂ, ಹೃದಯದಲ್ಲಿ ಧರಿಸಿದರು, ಸ್ಮರಿಸಿದರು. ಶ್ರೀಮನ್ನಾರಯಣನಿಗೆ ಮತ್ಸ್ಯಾದಿ ಹತ್ತು ರೂಪಗಳಿವೆ. ಅಜಾದಿ ನೂರು ರೂಪಗಳಿವೆ. ವಿಶ್ವಾದಿ ಸಾವಿರರೂಪಗಳಿವೆ. ಅಜಿತಾದಿ ಅನಂತರೂಪಗಳಿವೆ. ಈ ರೂಪಗಳೆಲ್ಲವೂ ದೇಶ ಕಾಲ ಮತ್ತು ಗುಣಗಳಿಂದ ಅಪರಿಚ್ಛಿನ್ನವಾಗಿವೆ. ಮೂಲರೂಪಕ್ಕಿಂತ ಅಭಿನ್ನವಾಗಿವೆ. ಇಂತಹ ಅಗಣಿತ ಅವತಾರರೂಪಿಯಾದ ಆ ಭಗವಂತನಾದ ಶ್ರೀಮನ್ನಾರಾಯಣನನ್ನು ಶ್ರೀ ಮಧ್ವಾಚಾರ್ಯರು ತನ್ನ ಹೃದಯದಲ್ಲಿ ಸ್ಮರಿಸುತ್ತಾ ನೋಡುತ್ತಿದ್ದರು. ಹೊರಗೂ ನಾರಾಯಣ ಮುನಿಗಳಲ್ಲಿ ಆ ರೂಪಗಳನ್ನು ನೋಡುತ್ತಿದ್ದರು. ಅಲ್ಲಿರುವಾಗ ಶ್ರೀ ನಾರಾಯಣ ಮುನಿಗಳು ಶ್ರೀ ಮಧ್ವನೇ! ತತ್ವಜ್ಞಾನ ಸ್ಥಾಪನೆಗಾಗಿಯೇ ಅವತರಿಸಿದ ಶ್ರೀ ವೇದವ್ಯಾಸರಿಗೆ ಅಭಿಮತವಾದ ಪರಾಪರತತ್ತ್ವಗಳನ್ನು, ಅವರು ರಚಿಸಿರುವ ಬ್ರಹ್ಮ ಮೀಮಾಂಸಾಶಾಸ್ತ್ರಕ್ಕೆ ಭಾಷ್ಯರಚನೆಯನ್ನು ಮಾಡಿ, "ಎಲ್ಲಾ ಸಜ್ಜನರಿಗೂ ಬೋಧಿಸು" ಎಂದು ಆಜ್ಞಾಪಿಸಿದರು. ಆಗ ಶ್ರೀ ಮಧ್ವರು 'ಪ್ರಭೋ, ಈಗ ಕಲಿಕಾಲದಿಂದಾಗಿ ಕುಲುಷಿತವಾದ ಮನಸ್ಸುಳ್ಳ, ಅಯೋಗ್ಯರಿಗೆ ತತ್ತ್ವೋಪದೇಶ ಮಾಡುವುದು, ನಿಂದಿತವಾದುದು ಈ ಕಾರ್ಯದಲ್ಲಿ ನನ್ನನ್ನು ತಾವು ಪ್ರೇರಿಸಬಾರದು' ಎಂದು ಪ್ರಾರ್ಥಿಸಿದರು. ಆಗ ನಾರಾಯಣ ಮುನಿಗಳು 'ಮಧ್ವನೇ! ಇಂತಹ ಕಲಿಕಾಲದಲ್ಲಿಯೂ ಕೂಡ ಕೆಲವು ಮಂದಿ ಸಜ್ಜನರು ವೈರಾಗ್ಯಭಕ್ತ್ಯಾದಿಗುಣಭರಿತರಾಗಿದ್ದಾರೆ. ಅವರನ್ನು ಕುರಿತು ನೀನು ತತ್ತ್ವವನ್ನು ಉಪದೇಶಿಸು, ಅಯೋಗ್ಯರು ನಿನ್ನ ತತ್ತ್ವೋಪದೇಶವನ್ನು ಕೇಳುವುದಿಲ್ಲ, ವಿಮುಖರಾಗುತ್ತಾರೆ, ಯೋಗ್ಯರು ಮಾತ್ರವೇ ನಿನ್ನನ್ನು ಸೇವಿಸುತ್ತಾರೆ' ಎಂದು ವರವನ್ನು ಕೊಟ್ಟರು. ಹೀಗೆ ವೇದವ್ಯಾಸರಿಂದ ಸಹಿತವಾಗಿ ನಾರಾಯಣ ಮುನಿಗಳ ಸಂದರ್ಶನವನ್ನು ಮಾಡಿ ಅವರಿಂದ ಆಜ್ಞೆಯನ್ನು ಪಡೆದು ಆಚಾರ್ಯರು ಅವರ ವಿಯೋಗವನ್ನು ಸಹಿಸಲಾರದೆ ಇದ್ದರೂ ಬಹಳ ಕಷ್ಟದಿಂದ ನಾರಾಯಣ ಮುನಿಗಳ ಆಶ್ರಮದಿಂದ, ಶ್ರೀ ವೇದವ್ಯಾಸರ ಆಶ್ರಮಕ್ಕೆ ಬಂದರು. ಅಲ್ಲಿ ವೇದವ್ಯಾಸರಿಂದ ಕೇಳಬೇಕಾದ ತತ್ತ್ವಭಾಗವನ್ನು ರಹಸ್ಯವಾದ ಉಪದೇಶಗಳನ್ನು ಕೇಳಿ ತಿಳಿದು, ~~ಅಲ್ಲಿಂದ ದಕ್ಷಿಣದಲ್ಲಿರುವ ಭರತಖಂಡವನ್ನು ಕುರಿತು ಹೊರಡಲು ಉದ್ಯುಕ್ತರಾದರು. ಇಂತಹ ಶ್ರೀ ಮಧ್ವಾಚಾರ್ಯರು~~ ಮತ್ತು ಅವರ ಸಾಕ್ಷಾದ್ ಗುರುಗಳಾದ ಶ್ರೀ ವೇದವ್ಯಾಸರು ಹಾಗೂ ನಾರಾಯಣಮುನಿಗಳು ಈ ಹೆಸರುಳ್ಳ ಅವರಿಗಿಂತ ಅಭಿನ್ನನಾದ ಶ್ರೀ ಮನ್ನಾರಾಯಣನೆಂಬ ಪರಬ್ರಹ್ಮನೂ ನಮಗೆ ಅಪರೋಕ್ಷಜ್ಞಾನಕ್ಕೆ ವಿಷಯನಾಗಲಿ, ನಮಗೆ ಮುಕ್ತಿಯನ್ನು ಕರುಣಿಸಿ ತನ್ನ ಬಳಿಯಲ್ಲಿ ಇಟ್ಟುಕೊಳ್ಳಲಿ ಎಂದು ಶ್ರೀ ಮನ್ನಾರಾಯಣಪಂಡಿತಾಚಾರ್ಯರು ಪ್ರಾರ್ಥಿಸಿದ್ದಾರೆ.

**ವಿಶೇಷಾಂಶ** - ಧರ್ಮಪ್ರಜಾಪ್ರತಿಗೆ ಹರಿಕೃಷ್ಣನರನಾರಾಯಣ ಎಂದು ನಾಲ್ವರು ಮಕ್ಕಳು. ಇವರಲ್ಲಿ ಹರಿ, ಕೃಷ್ಣ, ನಾರಾಯಣರು ಪರಮಾತ್ಮನ ಅವತಾರರು, ಅತ್ಯಂತಾಭಿನ್ನರು, ನರಮುನಿಯು ಶೇಷಾವತಾರನು, ನಾರಾಯಣನ ವಿಶೇಷಾವೇಶವುಳ್ಳವನು. ಇವರೆಲ್ಲರೂ ತಪಸ್ವಿಗಳು. ಹರಿಣೀ ಎಂಬುವಳಲ್ಲಿ ಹರಿಮೇಧ ಎಂಬುವರಿಂದ ಪ್ರಾದುರ್ಭೂತವಾದ ಹರಿ ಎಂಬ ರೂಪವೂ ಪರಮಾತ್ಮನಿಗಿದೆ. ಅದನ್ನು ಆಚಾರ್ಯರು ಸ್ಮರಿಸಿದರು ಎಂದು ಇಲ್ಲಿ ಇಟ್ಟುಕೊಳ್ಳಬಹುದು.

**ವಿಗ್ರಹ** - ಹಂಸಶ್ಚ ಕೃಷ್ಣಶ್ಚ ಹಂಸಕೃಷ್ಣೌ, ತೌ, ಧರ್ಮಸ್ಯ ಅಯಂ ಧಾರ್ಮಃ ತಂ, ನಾರಾಯಣಃ ಇತಿ ಆಖ್ಯಾಯಸ್ಯಸಃ ನಾರಾಯಣಾಖ್ಯಃ ತಂ, ದಶ ಚ, ಶತಂ ಚ ಸಹಸ್ರಂ ಚ ದಶಶತಸಹಸ್ರಾಣಿ, ದಶಶತಸಹಸ್ರಾಣಿ ಆದೀನಿ ಯೇಷಾಂ ತೆ ದಶಶತಸಹಸ್ರಾದಯಃ ದಶಶತಸಹಸ್ರಾದಿಭಿಃ ಸಹ ವರ್ತಂತೇ ಇತಿ ಸದಶಶತಸಹಸ್ರಾದಯಃ, ನ ವಿದ್ಯತೇ ಅಂತಃ ಯೇಷಾಂತೇ ಅನಂತಾಃ, ಅನಂತಾಶ್ಚ ತೇ ಅವತಾರಾಶ್ಚ ಅನಂತಾವತಾರಃ ಸದಶಶತಸಹಸ್ರಾದಯಃ ಅನಂತಾವತಾರಾಃ ಯಸ್ಯಸಃ ಸದಶಶತಸಹಸ್ರಾದ್ಯನಂತಾವತಾರಃ, ತಂ, ತೇನ ನುನ್ನಃ ತನ್ನುನ್ನಃ, ಶೋಭನಾ ಚ ಸಾ ಉಕ್ತಿಶ್ಚ ಸೂಕ್ತಿಃ, ತತ್ವಾನಾಂ ಸೂಕ್ತಿಃ ತತ್ತ್ವಸೂಕ್ತಿಃ, ತಸ್ಯೈ, ಉಚಿತಾಶ್ಚ ತೇ ನರಾಶ್ಚ ಉಚಿತನರಾಃ ತೈಃ, ಸೇವಿತುಂ ಯೋಗ್ಯಃ ಸೇವ್ಯಃ,

ಸೇವ್ಯಸ್ಯ ಭಾವಃ ಸೇವ್ಯತ್ವಂ, ಉದ್ಗತಂ ಮುಖಂ ಯಸ್ಯ ಸಃ ಉನ್ಮುಖಃ ಯಾತ್ರಾಯೈ ಉನ್ಮುಖಃ ಯಾತ್ರೋನ್ಮುಖಃ, ಗಮ್ಯತೇ ಇತಿ ಗತಿಃ, ವ್ಯಾಸಶ್ಚ ನಾರಾಯಣಶ್ಚ ವ್ಯಾಸನಾರಾಯಣೌ, ವ್ಯಾಸನಾರಾಯಣೌ ಇತಿ ಆಖ್ಯೇ ಯಸ್ಯ ಸಃ ವ್ಯಾಸನಾರಾಯಣಾಖ್ಯಃ.

**ಅವತಾರಿಕಾ** - ಆಚಾರ್ಯರು ಶ್ರೀ ವೇದವ್ಯಾಸರಿಂದ ಅಪ್ಪಣೆಯನ್ನು ಪಡೆದು ದೊಡ್ಡಬದರಿಯಿಂದ ಚಿಕ್ಕ ಬದರಿಗೆ ಬಂದು ತನ್ನ ಶಿಷ್ಯರೊಡನೆ ಸೇರಿ, ಬದರಿಯಲ್ಲಿಯೇ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿ ಶೋಭನ ಭಟ್ಟರನ್ನು ಶಿಷ್ಯರನ್ನಾಗಿ ಮಾಡಿಕೊಂಡು ಪುನಃ ಉಡುಪಿಗೆ ಬಂದರು ಎಂದು ಹೇಳುತ್ತಾರೆ.

**ಲಬ್ಧ್ವಾನುಜ್ಞಾಂ ಮುಕುಂದಾತ್ಸ್ವಜನಮುಪಗತೋಽನೇಕಭಿಕ್ಷಾಪ್ರಭೋಕ್ತಾಽ**
**ತುಲ್ಯಂ ಭಾಷ್ಯಂ ಚ ಕುರ್ವನ್ ಸ್ವಗುಣಸಮಗುಣಂ ಸಂಪ್ರಯಾತಃ ಪುನರ್ಯನ್।**
**ಷಟ್‌ಛಾಸ್ತ್ರಾಶೇಷಶಾಖಾಸ್ವಖಿಲವಿಜಯವಾನ್ ಶೋಭನಂ ಸೂರಿವರ್ಯಂ**
**ಶಿಷ್ಯಂ ಲಬ್ಧ್ವಾತಿಜೈತ್ರಂ ಪುನರಪಿ ವಿವಿಧಾನ್ ಪ್ರಾಪ್ತರೂಪ್ಯೋ ಗತಿರ್ಮೇ ।।೧೭।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಲಬ್ಧ್ವೇತಿ।। ಮುಕುಂದಾತ್ ವ್ಯಾಸಾತ್ ಅನುಜ್ಞಾಂ ಲಬ್ಧ್ವಾ ಸ್ವಜನಂ ಸ್ವಶಿಷ್ಯವರ್ಗಂ ಅಣುಬದರಿಕಾಸ್ಥಂ ಇತಿ ಭಾವಃ। ಉಪಗತಃಪ್ರಾಪ್ತಃ। ಅನೇಕಭಿಕ್ಷಾಪ್ರಭೋಕ್ತಾ, ಏಕಾನ ಭವತೀತ್ಯನೇಕಾ, ಸಾ ಚ ಸಾ ಭಿಕ್ಷಾ ಚ ಅನೇಕಭಿಕ್ಷಾ, ಯದ್ವಾ ಅನೇಕೈಃ ಪುರುಷೈಃ ದತ್ತಾ (ಭಿಕ್ಷಾ), ಅನೇಕೈಃ ಪೃಥಕ್ ಪೃಥಕ್ ಆನೀತಂ ಸರ್ವಂ ಅನ್ನಂ ತಸ್ಯಾಃ ಪ್ರಭೋಕ್ತಾಭಕ್ಷಕಃ, ತುಲ್ಯಂ ಅನುರೂಪಂ ವ್ಯಾಸಹೃದಯಾನುಸಾರೀತಿಯಾವತ್, ಯದ್ವಾ, ಅತುಲ್ಯಂ ಇತಿ ವಾ ಪದಚ್ಛೇದಃ, ಅಸದೃಶಂ ಇತ್ಯರ್ಥಃ, ಸ್ವಗುಣಸಮಗುಣಂ ಸ್ವಸ್ಯ ಯೇ ಗುಣಾಃ ಹರಿಗುಣಪ್ರಕಾಶಕತ್ವಪರಪಕ್ಷದೂಷಕತ್ವಕಾಮಿತಾರ್ಥಪ್ರದತ್ವಾದಯಃ ತತ್ಸದೃಶಗುಣೋಪೇತಂ ಚ ಭಾಷ್ಯಂ, ಸೂತ್ರಭಾಷ್ಯಂ ಕುರ್ವನ್ ಕುರ್ವಾಣಃ, ಸಂಪ್ರಯಾತಃ ಅಣುಬದರಿಕಾಶ್ರಮಾತ್ ದಕ್ಷಿಣಾಂ ದಿಶಂ ಪ್ರಸ್ಥಿತಃ ಪುನಃ ಯನ್ ಗಚ್ಛನ್, ಇಣಃ ಶತ್ರಂತಸ್ಯರೂಪಂ। ಷಟ್‌ಶಾಸ್ತ್ರಾಶೇಷಶಾಖಾಸು, ಷಟ್ ಶಾಸ್ತ್ರಾಣಿ ಭಾಟ್ಟ ಪ್ರಾಭಾಕರ ವೈಶೇಷಿಕ ನೈಯಾಯಿಕ ~~ಬೌದ್ಧ ಚಾರ್ವಾಕಶಾಸ್ತ್ರಾಣಿ, ಅಶೇಷಾಃ ಅಖಿಲಾಶ್ಚ ತಾಃ ಶಾಖಾಶ್ಚ, ತಾಃ ಅಶೇಷಶಾಖಾಃ ತಾಸು, ವಿಷಯಸಪ್ತಮೀ,~~ ಅಖಿಲವಿಜಯವಾನ್, ಅಖಿಲಾನಾಂ ಪುರುಷಾಣಾಂ ತದ್ವಿಷಯೇ ಇತಿಯಾವತ್ ವಿಜಯವಾನ್, ಅಣುಬದರಿಕಾಯಾಂ ಸೂತ್ರಭಾಷ್ಯಂ ಕೃತ್ವಾ ಸ್ವಶಿಷ್ಯೈಃ ಸಹ ತತ್ರ ತತ್ರ ಸಭಾಸು ವಾದಿನಃ ಜೇಷ್ಯನ್ ಕ್ರಮೇಣ ಗೋದಾವರೀತಟಂ ಪ್ರಾಪ್ಯ, ಬಹುಭಿಃ ವಿದ್ವದ್ಭಿಃ ಅನೇಕಶಾಖಾಸು, ಷಟ್‌ಸು ತಂತ್ರೇಷು ಚ ಪರೀಕ್ಷ್ಯಮಾಣಃ ಸರ್ವಾನ್ ಜಿತವಾನ್ ಇತಿಭಾವಃ। ಸೂರಿವರ್ಯಂ ಸೂರಿಷು ವಿದ್ವತ್ಸು ವರ್ಯಂ ಶ್ರೇಷ್ಠಂ, ಅತಿಜೈತ್ರಂ ಜಯಶೀಲಂ ಶೋಭನಂ ಶೋಭನಭಟ್ಟಾಖ್ಯಶಿಷ್ಯಂ, ಲಬ್ಧ್ವಾ ಪ್ರಾಪ್ಯ, ಪುನಃ ವಿವಿಧಾನ್ ಅಪಿ ಶಿಷ್ಯಾನ್ ಇತಿ ಸಂಬಧ್ಯತೇ ಲಬ್ಧ್ವಾ ಇತ್ಯನ್ವಯಃ। ಪ್ರಾಪ್ತರೂಪ್ಯಃ ರೂಪ್ಯಪೀಠಪುರಂ ಪ್ರಾಪ್ತಃ, ಪ್ರಾಪ್ತಾಪನ್ನೇ ಚ ದ್ವಿತೀಯಯಾ ಇತಿ ಸಮಾಸಃ, ದ್ವಿಗುಪ್ರಾಪ್ತಾಪನ್ನ ಇತ್ಯಾದಿನಾ ಪರವಲ್ಲಿಂಗತಾ ನಿಷೇಧಃ, ಸಃ ಮಧ್ವಃ ಮೇ ಗತಿಃ ಪ್ರಾಪ್ಯಃ ಸ್ಯಾದಿತಿ ಶೇಷಃ ।।೧೭।।

**ಪದಚ್ಛೇದ** - ಲಬ್ಧ್ವಾ, ಅನುಜ್ಞಾಂ, ಮುಕುಂದಾತ್, ಸ್ವಜನಂ, ಉಪಗತಃ, ಅನೇಕಭಿಕ್ಷಾಪ್ರಭೋಕ್ತಾ, ತುಲ್ಯಂ, (ಅತುಲ್ಯಂ) ಭಾಷ್ಯಂ ಚ ಕುರ್ವನ್ ಸ್ವಗುಣಸಮಗುಣಂ, ಸಂಪ್ರಯಾತಃ, ಪುನಃ ಯನ್, ಷಟ್‌ಛಾಸ್ತ್ರಾ ಶೇಷಶಾಖಾಸು ಅಖಿಲವಿಜಯವಾನ್, ಶೋಭನಂ, ಸೂರಿವರ್ಯಂ, ಶಿಷ್ಯಂ, ಲಬ್ಧ್ವಾ, ಅತಿಜೈತ್ರಂ ಪುನಃ, ಅಪಿ, ವಿವಿಧಾನ್, ಪ್ರಾಪ್ತರೂಪ್ಯಃ, ಗತಿಃ, ಮೇ।।

**ಅನ್ವಯ** - ಮುಕುಂದಾತ್ ಅನುಜ್ಞಾಂ ಲಬ್ಧ್ವಾ, ಸ್ವಜನಂ ಉಪಗತಃ, ಅನೇಕಭಿಕ್ಷಾಪ್ರಭೋಕ್ತಾ, ತುಲ್ಯಂ (ಅತುಲ್ಯಂ) ಸ್ವಗುಣ ಸಮಗುಣಂ ಚ ಭಾಷ್ಯಂ ಕುರ್ವನ್, ಸಂಪ್ರಯಾತಃ, ಪುನಃ ಯನ್, ಷಟ್‌ಛಾಸ್ತ್ರಾ ಶೇಷಶಾಖಾಸು ಅಖಿಲವಿಜವಾನ್, ಸೂರಿವರ್ಯಂ ಅತಿಜೈತ್ರಂ ಶೋಭನಂ ಶಿಷ್ಯಂಲಬ್ಧ್ವಾ, ಪುನರಪಿ ವಿವಿಧಾನ್ (ಶಿಷ್ಯಾನ್ ಲಬ್ಧ್ವಾ) **ಪ್ರಾಪ್ತರೂಪ್ಯಃ** (ಸಃಮಧ್ವಃ) ಮೇ ಗತಿಃ (ಸ್ಯಾತ್).

**ಅನ್ವಯಾರ್ಥ** - ಮುಕುಂದಾತ್=ಶ್ರೀವೇದವ್ಯಾಸರ ದಸೆಯಿಂದ, **ಅನುಜ್ಞಾಂ=ಅಪ್ಪಣೆಯನ್ನು, ಲಬ್ಧ್ವಾ=ಪಡೆದು,** ಸ್ವಜನಂ=ಅಣುಬದರಿಕಾಶ್ರಮದಲ್ಲಿದ್ದ ತನ್ನ ಶಿಷ್ಯರನ್ನು, ಉಪಗತಃ=ಸೇರಿದ, ಅನೇಕ **ಭಿಕ್ಷಾಪ್ರಭೋಕ್ತಾ=ಅನೇಕವಾದ** (ಆರು ಮಂದಿ ಕೊಟ್ಟಿರುವ ಆರು ಸಂಖ್ಯೆಯ) ಅನ್ನವನ್ನು ಭಕ್ಷಿಸಿದ, (ಅನೇಕ=ಅನೇಕರಿಂದ **ಪ್ರತ್ಯೇಕವಾಗಿ ಕೊಡಲ್ಪಟ್ಟ,** ಭಿಕ್ಷಾಪ್ರಭೋಕ್ತಾ= ಭಿಕ್ಷೆಯ ರೂಪವಾದ ಅನ್ನವನ್ನು ಭಕ್ಷಿಸಿದ), ತುಲ್ಯಂ=ಅನುರೂಪವಾದ, (ಅತುಲ್ಯಂ=**ಅಸದೃಶವಾದ**) ಸ್ವಗುಣಸಮಗುಣಂಚ ಸ್ವ=ತನ್ನ, ಗುಣ=ಹರಿಯಗುಣಗಳನ್ನು ಪ್ರಕಾಶಗೊಳಿಸುವುದು, ಇತರ ಸಿದ್ಧಾಂತಗಳನ್ನು **ಖಂಡಿಸುವುದು,** ಭಕ್ತರ ಇಷ್ಟಾರ್ಥಗಳನ್ನು ಕೊಡುವುದು ಇತ್ಯಾದಿಗುಣಗಳಿಗೆ, ಸಮಗುಣಂ=ಸಮಾನವಾದ ಗುಣಗಳುಳ್ಳದ್ದೂ ಆಗಿರು**ವ,** ಭಾಷ್ಯಂ ಕುರ್ವನ್=ಬ್ರಹ್ಮ ಸೂತ್ರಭಾಷ್ಯವನ್ನು ಮಾಡುವವರೂ ಆದ, ಸಂಪ್ರಯಾತಃ=ಚಿಕ್ಕಬದರಿಯಿಂದ, (ದಕ್ಷಿಣ ದಿಕ್ಕಿಗೆ) ಹೊರಟಿರುವ, ಪುನಃ ಯನ್=ಮತ್ತೂ ಪ್ರಯಾಣ ಮಾಡುತ್ತಿರುವ, ಷಟ್‌ಶಾಸ್ತ್ರಾಶೇಷಶಾಖಾಸು=ಭಾಟ್ಟಪ್ರಾಭಾಕರ ವೈಶೇಷಿಕ ನೈಯಾಯಿಕ ಬೌದ್ಧ ಚಾರ್ವಾಕ ಎಂಬ ಆರು ಶಾಸ್ತ್ರಗಳು ಮತ್ತು ಎಲ್ಲಾ ಶಾಖೆಗಳ ವಿಷಯದಲ್ಲಿ, ಅಖಿಲವಿಜಯವಾನ್=ಎಲ್ಲಾ ಪಂಡಿತರನ್ನೂ ಆಯಾಶಾಸ್ತ್ರಗಳ ವಿಷಯದಲ್ಲಿ ಪರಾಜಯಗೊಳಿಸಿ ವಿಜಯವನ್ನು ಪಡೆದ, ಸೂರಿವರ್ಯಂ=ಪಂಡಿತಶ್ರೇಷ್ಠರಾದ, ಅತಿಜೈತ್ರಂ=ಅತ್ಯಂತ ವಿಜಯಶೀಲರಾದ, ಶೋಭನಂ ಶಿಷ್ಯಂ=ಶೋಭನಭಟ್ಟರೆಂಬ ಶಿಷ್ಯರನ್ನು, ಲಬ್ಧ್ವಾ=ಪಡೆದು, ಪುನರಪಿ=ಮತ್ತೂ, ವಿವಿಧಾನ್ (ಅಪಿ)=ಬೇರೆಬೇರೆಯಾದ (ಶಿಷ್ಯಾನ್ ಲಬ್ಧ್ವಾ=ಶಿಷ್ಯರನ್ನು, ಹೊಂದಿ) ಪ್ರಾಪ್ತರೂಪ್ಯಃ=ರಜತಪೀಠಪುರವನ್ನು ಸೇರಿದ (ಸಃ ಮಧ್ವಃ=ಆ ಶ್ರೀ ಮಧ್ವಾಚಾರ್ಯರು) ಮೇ=ನನಗೆ, ಗತಿಃ= ಹೊಂದಲು ಯೋಗ್ಯರು, (ಸ್ಯಾತ್=ಆಗಲಿ).

**ತಾತ್ಪರ್ಯ** - ಶ್ರೀ ಮಧ್ವಾಚಾರ್ಯರು ಶ್ರೀವೇದವ್ಯಾಸರಿಂದ ಅಪ್ಪಣೆಯನ್ನು ಪಡೆದು ದೊಡ್ಡಬದರಿಯಿಂದ ಚಿಕ್ಕಬದರಿಗೆ ಬಂದರು. ಅಲ್ಲಿ ಅವರ ಶಿಷ್ಯರೆಲ್ಲರೂ ಆಚಾರ್ಯರ ದಾರಿಯನ್ನು ಎದುರು ನೋಡುತ್ತಿದ್ದರು. ಆಚಾರ್ಯರು ಬಂದುದನ್ನು ನೋಡಿ ಅವರೆಲ್ಲರೂ ತುಂಬಾ ಸಂತೋಷಪಟ್ಟರು. ಅಗ್ನಿಶರ್ಮ ಮುಂತಾದ ಐದಾರು ಜನ ಶಿಷ್ಯರು ಒಂದು ದಿನ ಪ್ರತ್ಯೇಕ ಪ್ರತ್ಯೇಕವಾಗಿ ಎಲ್ಲರೂ ಆಚಾರ್ಯರಿಗೆ ಅನ್ನಭಕ್ಷ್ಯಾದಿರೂಪವಾದ ಭಿಕ್ಷೆಯನ್ನು ಒಟ್ಟಿಗೇ ಏಕಕಾಲದಲ್ಲಿ ತಂದು ಸಮರ್ಪಿಸಿದರು. ಆಚಾರ್ಯರು ತನಗಾಗಿ ತಂದಿರುವ ಭಿಕ್ಷಾರೂಪವಾದ ಆ ಭೋಜ್ಯವಸ್ತುಗಳನ್ನೆಲ್ಲಾ ಒಬ್ಬರೇ ಸ್ವೀಕರಿಸಿದರು.

---

ಹರಿಗುಣಪ್ರಕಾಶಕರಾದ, ಪರಪಕ್ಷದೂಷಕರಾದ ಆಚಾರ್ಯರು ಹರಿಗುಣಪ್ರಕಾಶಕವಾದ, ಇತರ ಸಿದ್ಧಾಂತಗಳನ್ನು ಖಂಡಿಸುವ ಈ ಗುಣಗಳಿಂದ ತನ್ನಂತೆಯೇ ಇರುವ, ಇನ್ನೊಂದು ಭಾಷ್ಯದ ಜೊತೆಗೆ ಹೋಲಿಸಲು ಸಾಧ್ಯವಿಲ್ಲದ ಶ್ರೀವೇದವ್ಯಾಸರ ಹೃದಯಾನುಸಾರಿಯಾದ ಅಸಾಧಾರಣವಾದ ಬ್ರಹ್ಮಸೂತ್ರಭಾಷ್ಯವನ್ನು ಬದರಿಯಲ್ಲಿಯೇ ರಚಿಸಿದರು.

ಅನಂತರ ಅಣುಬದರಿಯಿಂದ ಹೊರಟು ಹಿಮಾಲಯದಿಂದ ದಕ್ಷಿಣ ದಿಕ್ಕಿನ ಮಾರ್ಗವಾಗಿ ಭರತಖಂಡದಲ್ಲಿ ಪ್ರಯಾಣ ಮಾಡುತ್ತಾ ಬಂದರು. ಆಚಾರ್ಯರು ಹೀಗೆ ಬರುತ್ತಾ ಗೋದಾವರೀ ತೀರಕ್ಕೆ ಬಂದರು. ಅಲ್ಲಿ ಒಂದು ದೊಡ್ಡ ಪಂಡಿತ ಪರಿಷತ್ತು ಸೇರಿತ್ತು. ಉದ್ದಾಮಪಂಡಿತಮಂಡಿತವಾದ ಆ ಸಭೆಯಲ್ಲಿ ಆಚಾರ್ಯರು ಭಾಟ್ಟ, ಪ್ರಾಭಾಕರ, ವೈಶೇಷಿಕ, ನೈಯಾಯಿಕ, ಬೌದ್ಧ, ಚಾರ್ವಾಕ ಶಾಸ್ತ್ರಗಳೆಂಬ ಆರು ಶಾಸ್ತ್ರಗಳನ್ನು ಖಂಡಿಸಿದರು. ಅಲ್ಲಿ ಅನೇಕ ವೇದಶಾಖೆಗಳನ್ನು ಬಲ್ಲ ಪಂಡಿತರಿದ್ದರು. ತನಗೆ ಅವರಿಗಿಂತ ಹೆಚ್ಚು ವೇದಶಾಖೆಗಳ ಜ್ಞಾನವಿದೆಯೆಂದು ಆಚಾರ್ಯರು ತೋರಿಸಿ, ಶಾಸ್ತ್ರಪಂಡಿತರನ್ನೂ ವೇದಪಂಡಿತರನ್ನೂ ಜಯಿಸಿದರು. ಆ ಮಹಾಸಭೆಯಲ್ಲಿ ವಿದ್ವಾಂಸರಲ್ಲಿ ಶ್ರೇಷ್ಠರೆಂದು ಎಲ್ಲರಿಗೂ ಸಮ್ಮತರಾದ ಅತ್ಯಂತ ಜಯಶಾಲಿಗಳೂ ಆದ ಶ್ರೀ ಶೋಭನ ಭಟ್ಟರೆಂಬವರಿದ್ದರು. ಆಚಾರ್ಯರು ಅವರನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡರು. ದಾರಿಯಲ್ಲಿ ಇನ್ನೂ ಅನೇಕ ಮಂದಿಯನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡು ಪ್ರಯಾಣ ಮಾಡುತ್ತಾ ರಜತಪೀಠಪುರಕ್ಕೆ ಬಂದು ಸೇರಿದರು. ಇಂತಹ ಶ್ರೀಮದಾನಂದತೀರ್ಥರೇ ನನಗೆ ಗತಿಯಾಗಲಿ. ನಾನು ಅವರ ಸ್ವರೂಪವನ್ನು ತಿಳಿದು ಅವರಲ್ಲಿ ಭಕ್ತಿಯನ್ನು ಮಾಡಿ ಅವರನ್ನೇ ಹೊಂದುವಂತಾಗಲಿ ಎಂದು ಅಭಿಪ್ರಾಯ.

**ವಿಗ್ರಹ** - ಸ್ವಸ್ಯಜನಃ ಸ್ವಜನಃ, ಸ್ವಶ್ಚಾಸೌಜನಶ್ಚ ಸ್ವಜನಃ ಎಂದು ಎರಡೂ ರೀತಿಯಿಂದ ವಿಗ್ರಹ **ಮಾಡ**ಬಹುದು. ಅನೇಕಾ ಚ ಸಾ ಭಿಕ್ಷಾಚ ಅನೇಕಭಿಕ್ಷಾ ಅನೇಕೈಃ ಪ್ರದತ್ತಾಭಿಕ್ಷಾ ಅನೇಕಭಿಕ್ಷಾ ಎಂದು ಮಧ್ಯಮ **ಪದಲೋಪಿ** ಸಮಾಸವನ್ನೂ ಮಾಡಬಹುದು. ಅನೇಕಭಿಕ್ಷಾಯಾಃ ಪ್ರಭೋಕ್ತಾ ಅನೇಕಭಿಕ್ಷಾಪ್ರಭೋಕ್ತಾ, ನ ವಿದ್ಯ**ತೇ ತುಲ್ಯಂ** ಯಸ್ಯತತ್ ಅತುಲ್ಯಂ, ತತ್, ಸ್ವಸ್ಯಗುಣಾಃ ಸ್ವಗುಣಾಃ, (ಸ್ವೇ ಚತೇ ಗುಣಾಶ್ಚ-ಇತಿವಾ) ಸ್ವಗುಣೈಃ ಸಮಾಃ ಸ್ವಗುಣ**ಸಮಾಃ,** ಸ್ವಗುಣಸಮಾಃ ಗುಣಾಃ ಯಸ್ಯತತ್ ಸ್ವಗುಣಸಮಗುಣಂ, ತತ್, ಷಟ್‌ಚ ತಾನಿ ಶಾಸ್ತ್ರಾಣಿ ಚ ಷಟ್**ಶಾಸ್ತ್ರಾಣಿ.** ಅಶೇಷಾಶ್ಚ ತಾಃ ಶಾಖಾಶ್ಚ ಅಶೇಷಶಾಖಾಃ, ಷಟ್‌ಶಾಸ್ತ್ರಾಣಿ ಚ ಅಶೇಷ ಶಾಖಾಶ್ಚ ಷಟ್‌ಶಾಸ್ತ್ರಾಶೇಷಶಾಖಾಃ ತಾಸು। ಅಖಿಲಾನಾಂ ವಿಜಯಃ ಅಖಿಲವಿಜಯಃ ಅಖಿಲವಿಜಯಃ ಅಸ್ಯ ಅಸ್ತೀತಿ ಅಖಿಲವಿಜಯವಾನ್, ಸೂರಿಷು ವರ್ಯಃ ಸೂರಿವರ್ಯಃ ತಂ, ಜೇತಾ ಏವ ಜೈತ್ರಃ ಅತ್ಯಂತಂ ಜೈತ್ರಃ ಅತಿಜೈತ್ರಃ ತಂ, ಪ್ರಾಪ್ತಂ ರೂಪ್ಯಂ ಯೇನ ಸಃ ಪ್ರಾಪ್ತರೂಪ್ಯಃ।

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಮುಕುಂದಾತ್ ವ್ಯಾಸಾತ್=ಮುಕುಂದಾತ್ ಎಂದರೆ ಶ್ರೀವೇದವ್ಯಾಸರ ದಸೆಯಿಂದ, ಅನುಜ್ಞಾಂ=ಅನುಮತಿಯನ್ನು, ಲಬ್ಧ್ವಾ=ಪಡೆದು, ಸ್ವಜನಂ ಸ್ವಶಿಷ್ಯವರ್ಗಂ=ಸ್ವಜನಂ ಎಂದರೆ ತನ್ನ ಶಿಷ್ಯ ಸಮೂಹವನ್ನು, ಅಣುಬದರಿಕಾಸ್ಥಂ ಇತಿ ಭಾವಃ=ಅಣುಬದರೀ ಅಂದರೆ ಚಿಕ್ಕಬದರಿಯಲ್ಲಿದ್ದ ತನ್ನ ಶಿಷ್ಯರನ್ನು ಎಂದು ಅಭಿಪ್ರಾಯ. ಉಪಗತಃ ಪ್ರಾಪ್ತಃ=ಉಪಗತಃ ಎಂದರೆ ಪ್ರಾಪ್ತನಾದವನು ಹೊಂದಿದವನು, ಅನೇಕ ಭಿಕ್ಷಾಪ್ರಭೋಕ್ತಾ= ಏಕಾ ನ ಭವತೀತಿ ಅನೇಕಾ=ಒಂದು ಅಲ್ಲದಿರುವ, ಸಾ ಚ ಸಾ ಭಿಕ್ಷಾ ಚ=ಅಂತಹ ಅನೇಕವಾದ ಭಿಕ್ಷೆ, ಯದ್ವಾ=ಅಥವಾ= ಅನೇಕೈಃ ಪುರುಷೈಃ (ದತ್ತಾ) ಭಿಕ್ಷಾ=ಅನೇಕ ಮಂದಿ ಪುರುಷರಿಂದ ಕೊಡಲ್ಪಟ್ಟ ಭಿಕ್ಷೆಯು, ಅನೇಕೈಃ ಪೃಥಕ್ ಪೃಥಕ್ ಆನೀತಂ ಸರ್ವಮಪಿ ಅನ್ನಂ=ಅಗ್ನಿಶರ್ಮ ಮುಂತಾದ ಅನೇಕರಿಂದ ಬೇರೆ ಬೇರೆಯಾಗಿ ತರಲ್ಪಟ್ಟ ಎಲ್ಲಾ ಅನ್ನವು (ಭಿಕ್ಷಾ) ತಸ್ಯಾಃ ಪ್ರಭೋಕ್ತಾಭಕ್ಷಕಃ=ಅಂತಹ ಭಿಕ್ಷಾರೂಪವಾದ ಅನ್ನಾದಿಗಳನ್ನು, ಭೋಕ್ತಾ=ಅಂದರೆ ಊಟ ಮಾಡಿದವರು, ತುಲ್ಯಂ ಅನುರೂಪಂ=ತುಲ್ಯ ಅಂದರೆ ಅನುರೂಪವಾದುದು. ವ್ಯಾಸಹೃದಯಾನುಸಾರಿ ಇತಿ ಯಾವತ್=ಶ್ರೀ ವೇದವ್ಯಾಸರ ಹೃದಯವನ್ನು ಅನುಸರಿಸಿ ಇರತಕ್ಕದ್ದು ಎಂದು ಅಭಿಪ್ರಾಯ. ಯದ್ವಾ ಅತುಲ್ಯಂ ಇತಿ ವಾ ಪದಚ್ಛೇದಃ, ಅಥವಾ ಅತುಲ್ಯಂ ಎಂದಾದರೂ ಪದಚ್ಛೇದ, ಅಸದೃಶಂ ಇತ್ಯರ್ಥಃ=ಎಣೆಯಿಲ್ಲದುದು, ~~ಸಮಾನವಾದ ಮತ್ತೊಂದು ಇಲ್ಲದುದು ಎಂದು ಅರ್ಥ. ಸ್ವಗುಣಸಮಗುಣಂ=ಎಂದರೆ ಸ್ವಸ್ಯ=ತನ್ನ ಯೇ ಗುಣಾಃ=ಯಾವ~~ ಗುಣಗಳಿವೆಯೋ, ಅಂದರೆ, ಹರಿಗುಣಪ್ರಕಾಶಕತ್ವ ಪರಪಕ್ಷದೂಷಕತ್ವಕಾಮಿತಾರ್ಥಪ್ರದತ್ವಾದಯಃ=ಹರಿಯ ಗುಣಗಳನ್ನು ಪ್ರಕಾಶಪಡಿಸುವಿಕೆ, ಇತರ ಸಿದ್ಧಾಂತಗಳನ್ನು ಖಂಡಿಸುವುದು, ಸಜ್ಜನರ ಅಭಿಲಾಷೆಯ ವಸ್ತುವನ್ನು ಕೊಡುವುದು ಇತ್ಯಾದಿಗಳು, ತತ್ಸದೃಶಗುಣೋಪೇತಂ ಚ ಭಾಷ್ಯಂ=ಸೂತ್ರಭಾಷ್ಯಂ=ಅವುಗಳಿಗೆ ಸಮಾನವಾದ ಗುಣಗಳಿಂದ ಅಂದರೆ ಹರಿಗುಣ ಪ್ರಕಾಶಕತ್ವ ಪರಪಕ್ಷದೂಷಕತ್ವ, ಕಾಮಿತಾರ್ಥಪ್ರದತ್ವ ಮೊದಲಾದ ತನ್ನ (ಆಚಾರ್ಯರ) ಗುಣಗಳಿಗೆ ಸಮಾನವಾದ ಗುಣಗಳಿಂದ ಕೂಡಿದ, ಭಾಷ್ಯ ಅಂದರೆ ಸೂತ್ರಭಾಷ್ಯವನ್ನು, ಕುರ್ವನ್=ಕುರ್ವಾಣಃ=ಮಾಡುತ್ತಿರುವ (ಮಾಡಿದ) ಸಂಪ್ರಯಾತಃ ಅಂದರೆ ಅಣುಬದರಿಕಾಶ್ರಮಾತ್ ದಕ್ಷಿಣಾಂದಿಶಂ ಪ್ರಸ್ಥಿತಃ=ಅಣುಬದರಿಕಾಶ್ರಮದಿಂದ ಅಂದರೆ ಚಿಕ್ಕಬದರಿಯಿಂದ ದಕ್ಷಿಣ ದಿಕ್ಕನ್ನು ಕುರಿತು ಹೊರಟ, ಪುನಃ ಯನ್=ಗಚ್ಛನ್=ಮತ್ತು ಹೋಗುತ್ತಿರುವ, ಯನ್ ಎಂಬುದು, ಇಣಃ ಶತ್ರಂತಸ್ಯ ರೂಪಂ=ಇಣ್ ಗತೌ ಎಂಬ ಧಾತುವಿಗೆ ಶತೃಪ್ರತ್ಯಯವು ಬಂದು ಆಗಿರುವ ರೂಪವು ಷಟ್‌ಶಾಸ್ತ್ರಾಶೇಷಖಾಶಾಸು ಅಂದರೆ ಷಟ್‌ಶಾಸ್ತ್ರಾಣಿ=ಆರು ಶಾಸ್ತ್ರಗಳು ಅವು ಯಾವುವು ಎಂದರೆ ಭಾಟ್ಟ, ಪ್ರಾಭಾಕರ, ವೈಶೇಷಿಕ, ನೈಯಾಯಿಕ, ಬೌದ್ಧ, ಚಾರ್ವಾಕ ಶಾಸ್ತ್ರಾಣಿ= ಭಾಟ್ಟಶಾಸ್ತ್ರ (ಭಾಟ್ಟಮತ) ಪ್ರಾಭಾಕರ ಮೀಮಾಂಸಾಶಾಸ್ತ್ರ, ವೈಶೇಷಿಕದರ್ಶನ, ನೈಯಾಯಿಕ ದರ್ಶನ, ಬೌದ್ಧದರ್ಶನ, ಚಾರ್ವಾಕ ದರ್ಶನ, ಇವೇ ಆರುಶಾಸ್ತ್ರಗಳು, ಅಶೇಷಾಃ=ಅಖಿಲಾಶ್ಚ, ಅಶೇಷಾಃ ಎಂದರೆ ಸಮಸ್ತವಾದ, ತಾಃ ಶಾಖಾಶ್ಚ ಅಶೇಷಶಾಖಾಃ ಆ ಶಾಖೆಗಳು, 'ಅಶೇಷಶಾಖಾಃ' ಎಂದು ಹೇಳಲ್ಪಡುತ್ತವೆ. ತಾಸು ವಿಷಯಸಪ್ತಮೀ, ಆ ಶಾಖೆಗಳ ವಿಷಯದಲ್ಲಿ ಎಂದು ವಿಷಯಾರ್ಥಕ ಸಪ್ತಮೀ ವಿಭಕ್ತಿಯು, ಅಖಿಲವಿಜಯವಾನ್ ಎಂದರೆ, ಅಖಿಲಾನಾಂ ಪುರುಷಾಣಾಂ= ಎಲ್ಲಾ ವಿದ್ವಾಂಸರ, ತದ್ವಿಷಯೇ ಇತಿಯಾವತ್=ಎಲ್ಲಾ ವಿದ್ವಜ್ಜನರ ವಿಷಯದಲ್ಲಿ ಎಂದು ತಾತ್ಪರ್ಯ. ವಿಜಯವಾನ್= ವಿಜಯವನ್ನು ಗಳಿಸಿದ, ಅಣುಬದರಿಕಾಯಾಂ ಸೂತ್ರಭಾಷ್ಯಂ ಕೃತ್ವಾ=ಚಿಕ್ಕಬದರಿಯ

ಆಶ್ರಮದಲ್ಲಿ ಸೂತ್ರಭಾಷ್ಯವನ್ನು ರಚಿಸಿ, ಸ್ವಶಿಷ್ಯೈಃ ಸಹ ತತ್ರ ತತ್ರ ಸಭಾಸು ವಾದಿನಃ **ಜೇಷ್ಯನ್=ತನ್ನ ಶಿಷ್ಯರೊಡನೆ** ಅಲ್ಲಲ್ಲಿ ಸಭೆಗಳಲ್ಲಿ ವಾದಿಗಳನ್ನು ಜಯಿಸುತ್ತಾ (ಜಯಿಸಲಿರುವ) ಆಚಾರ್ಯರು, ಕ್ರಮೇಣ **ಗೋದಾವರೀತಟಂ** ಪ್ರಾಪ್ಯ=ಕ್ರಮವಾಗಿ ಗೋದಾವರೀ ತೀರಕ್ಕೆ ಬಂದು, ಬಹುಭಿಃ ವಿದ್ವದ್ಭಿಃ=ಅನೇಕ ವಿದ್ವಾಂಸರೊಡನೆ, ಅನೇಕ ಶಾಖಾಸು=ಅನೇಕ ವೇದಶಾಖೆಗಳಲ್ಲಿ, ಷಟ್ಸು ತಂತ್ರೇಷು ಚ=ಆರುಶಾಸ್ತ್ರಗಳಲ್ಲಿಯೂ ಪರೀಕ್ಷ್ಯಮಾಣಃ (ಸನ್)=ಪರೀಕ್ಷಿಸಲ್ಪಡುತ್ತಾ ಸರ್ವಾನ್ ವಿಜಿಗ್ಯೇ=ಎಲ್ಲರನ್ನೂ ಜಯಿಸಿದರು ಇತಿಭಾವಃ=ಎಂದು ಅಭಿಪ್ರಾಯ.

ಸೂರಿವರ್ಯಂ, ಸೂರಿಷು ವಿದ್ವತ್ಸು ವರ್ಯಂ ಶ್ರೇಷ್ಠಂ=ಸೂರಿವರ್ಯಂ ಎಂದರೆ, ಸೂರಿಷು ವಿದ್ವಾಂಸರಲ್ಲಿ ಶ್ರೇಷ್ಠರಾದ ಅತಿಜೈತ್ರಂ ಎಂದರೆ ಅತ್ಯಂತ ಜಯಶೀಲಂ=ಬಹಳ ಜಯಶಾಲಿಗಳಾದ, ಶೋಭನಂ ಎಂದರೆ ಶೋಭನಭಟ್ಟಾಖ್ಯ ಶಿಷ್ಯಂ=ಶೋಭನಭಟ್ಟರೆಂಬ ಶಿಷ್ಯನನ್ನು, ಲಬ್ಧ್ವಾ ಎಂದರೆ ಪ್ರಾಪ್ಯ ಎಂದರೆ ಹೊಂದಿ, ಪುನಃ ವಿವಿಧಾನ್ ಅಪಿ=ಮತ್ತು ಅನೇಕರಾದವರನ್ನೂ ಶಿಷ್ಯಾನ್ ಇತಿ ಸಂಬಧ್ಯತೆ=ಶಿಷ್ಯರನ್ನು ಎಂದು ಹಿಂದಿನ ಪದವನ್ನು ಸೇರಿಸಿಕೊಂಡು ಅರ್ಥವನ್ನು ಹೇಳಬೇಕು. ಲಬ್ಧ್ವಾ ಇತ್ಯನ್ವಯಃ=ಲಬ್ಧ್ವಾ ಪಡೆದು ಎಂದು ಅನ್ವಯವು. ಪ್ರಾಪ್ತರೂಪ್ಯಃ ಎಂದರೆ ರೂಪ್ಯಪೀಠ ಪುರಂ ಪ್ರಾಪ್ತಃ=ರಜತಪೀಠಪುರ ಉಡುಪಿಯನ್ನು ತಲುಪಿದ, ಪ್ರಾಪ್ತರೂಪ್ಯಃ ಎಂಬಲ್ಲಿ ಪ್ರಾಪ್ತಾಪನ್ನೇ ಚ ದ್ವಿತೀಯಯಾ ಇತಿ ಸಮಾಸಃ ಪ್ರಾಪ್ತಾಪನ್ನೇ ಚ ದ್ವಿತೀಯಯಾ ಎಂಬ ಪಾಣಿನಿ ಸೂತ್ರದಿಂದ ಸಮಾಸ ಪರವಲ್ಲಿಂಗಂ ದ್ವಂದ್ವತತ್ಪುರುಷಯೋಃ ಎಂಬುದಕ್ಕೆ ಅಪವಾದವಾಗಿ ದ್ವಿಗುಪ್ರಾಪ್ತೇತ್ಯಾ ದಿನಾ ಪರವಲ್ಲಿಂಗತಾನಿಷೇಧಃ=ದ್ವಿಗುಪ್ರಾಪ್ತಾಪನ್ನ ಇತ್ಯಾದಿಯಿಂದ ಪರವಲ್ಲಿಂಗತ್ವಕ್ಕೆ ನಿಷೇಧವು ಸಃ ಮಧ್ವಃ=ಆ ಶ್ರೀಮಧ್ವಾಚಾರ್ಯರು, ಮೇ ಗತಿಃ ಪ್ರಾಪ್ಯಃ ಸ್ಯಾತ್ ಇತಿ ಶೇಷಃ ನನಗೆ ಗತಿ ಅಂದರೆ ಹೊಂದಲು ಯೋಗ್ಯರಾದವರು ಆಗಲೀ 'ಸ್ಯಾತ್' ಎಂಬುದನ್ನು ನಾವು ಸೇರಿಸಿಕೊಳ್ಳಬೇಕು.

**ಅವತಾರಿಕಾ** - ಅಣು ಬದರಿಯಿಂದ ರಜತಪೀಠಪುರಕ್ಕೆ ಬಂದು ಆಚಾರ್ಯರು ಮಾಡಿದ ಕಾರ್ಯವನ್ನು ಅಲ್ಲಿಂದ ಪುನಃ ದೊಡ್ಡಬದರಿಗೆ ಹೋಗಿ ವೇದವ್ಯಾಸರನ್ನು ನೋಡಿ ಪುನಃ ಹಿಂದಿರುಗಿ ಬಂದುದನ್ನೂ ವರ್ಣಿಸುತ್ತಾರೆ.

**ಸಖ್ಯೇ ವ್ಯಾಖ್ಯಾಯ ಭಾಷ್ಯಂ ಕಲಿಮಲಮಪನೀಯಾಚ್ಯುತಜ್ಞಾಯ ಚಾಲಂ**
**ಕಾರ್ಷ್ಣೀಮರ್ಚಾಮಚಾಲ್ಯಾಂ ತ್ರಿದಶಕತರುಣೈರ್ಲೀಲಯಾನೀಯರೂಪ್ಯೇ ।।**
**ಆಸ್ಥಾಪ್ಯೋದಸ್ಯ ಯಜ್ಞಪ್ರತಿಹತಿನಿರತಾನ್ ಕಾರಯಿತ್ವಾಸ್ಯಯಜ್ಞಂ**
**ವ್ಯಾಸಂ ನತ್ವಾಪುನಶ್ಚ ಪ್ರತಿಗತರಜತಃ ಸಂಪ್ರಸೀದೇತ್ ಸ ಮಧ್ವಃ ।।೧೮।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಸಖ್ಯೇ ಸಖಿಭೂತಾಯ ಕಸ್ಮೈಚಿದ್ಯತಯೇ, ಅಚ್ಯುತಜ್ಞಾಯ ಅಚ್ಯುತಪ್ರೇಕ್ಷಾಯ ಚ ಸ್ವಗುರವೇ ಭಾಷ್ಯಂ ವ್ಯಾಖ್ಯಾಯ, ಕಲಿಮಲಂ ಕಲುಷಿತಮನಃಕಲ್ಮಷಂ ಅಲಂ ಅಪನೀಯ ಅಪಾಸ್ಯ ಕಾರ್ಷ್ಣೀಂ ಕೃಷ್ಣಸಂಬಂಧಿನೀಂ ತ್ರಿದಶಕತರುಣೈಃ ತ್ರಿತ್ವ ವಿಶಿಷ್ಟದಶಸಂಖ್ಯಾ (ಯೇ ಏಷಾಂ) ತೈಃ ತರುಣೈಃ ಯುವಭಿಃ ತ್ರಿಂಶತ್ತರುಣಪುರುಷೈರಿತ್ಯರ್ಥಃ, ಅಚಾಲ್ಯಾಂಚಾಲಯಿತು ಮಶಕ್ಯಾಂ, ವಾಸುದೇವಸನ್ನಿಧಾನೇನ ಅತಿಗುರುತಮಾಂ ಇತ್ಯರ್ಥಃ ಅರ್ಚಾಂ ಪ್ರತಿಮಾಂ ಲೀಲಯಾ ಆನೀಯ ಸ್ವಯಮೇವ ರೂಪ್ಯಪೀಠಪುರಂ ಪ್ರಾಪಯ್ಯ ರೂಪ್ಯೇ ರೂಪ್ಯಪೀಠಪುರೇ ಆಸ್ಥಾಪ್ಯ ಪ್ರತಿಷ್ಠಾಪ್ಯ, ಯಜ್ಞಪ್ರತಿಹತಿನಿರತಾನ್ ಯಜ್ಞಸ್ಯ ಪ್ರತಿಹತೌ ವಿಧೂತೌನಿರತಾನ್ವ್ಯುದಸ್ಯ ಸ್ವಯಜ್ಞಂ ಸ್ವಗುರು ಪುತ್ರಸ್ಯಯಜ್ಞಂ ಕಾರಯಿತ್ವಾ। ಕೇಚಿತ್ ಆತ್ಮನೋ ಯಾಯಜೂಕತ್ವಂ ಮನ್ಯಮಾನಾಃಪರೇಷಾಂ ಯಜ್ಞಂ ವಿಘ್ನಂತಃ ತಸ್ಥುಃ ತಾನ್ ನಿರಸ್ಯ ಸ್ವಾಧ್ಯಾಪಕ ಗುರುಪುತ್ರಂ ಯಾಜಯಾಮಾಸೇತಿ ಭಾವಃ। ಪುನಶ್ಚ ವ್ಯಾಸಂ ಬದರಿಕಾಶ್ರಮಸ್ಥಂ ವೇದವ್ಯಾಸಂ ನತ್ವಾ ಪ್ರತಿಗತರಜತಃ ರಜತಪೀಠಪುರಂ ಪ್ರತಿಗತಃ ಸಃ ತಥಾ, ಪುನಃ ಬದರಿಕಾಂಗತ್ವಾ ವ್ಯಾಸಂನತ್ವಾ ಪುನಃ ರೂಪ್ಯಪೀಠಪುರಂ ಪ್ರಾಪ್ತವಾನ್ ಇತ್ಯರ್ಥಃ, ಸಃ ಮಧ್ವಃ ಸಂಪ್ರಸೀದೇತ್ ಪ್ರಸನ್ನೋ ಭವೇತ್ ಷದಲ್ಲವಿಶರಣಗತ್ಯವಸಾದನೇಷು ಲಿಙ್ ।।೧೮।।

**ಪದಚ್ಛೇದ** - ಸಖ್ಯೇ ವ್ಯಾಖ್ಯಾಯ ಭಾಷ್ಯಂ ಕಲಿಮಲಂ ಅಪನೀಯ ಅಚ್ಯುತಜ್ಞಾಯ, ಚ, ಅಲಂ ಕಾರ್ಷ್ಣೀಂ

ಅರ್ಚಾಂ ಅಚಾಲ್ಯಾಂ ತ್ರಿದಶಕತರುಣ್ಯೈಃ ಲೀಲಯಾ ಆನೀಯ ರೂಪ್ಯೇ ಆಸ್ಥಾಪ್ಯ ಉದಸ್ಯ ಯಜ್ಞ ಪ್ರತಿಹತಿನಿರತಾನ್ ಕಾರಯಿತ್ವಾ ಅಸ್ಯ ಯಜ್ಞಂ ವ್ಯಾಸಂ ನತ್ವಾ ಪುನಃ ಚ ಪ್ರತಿಗತರಜತಃ ಸಃಮಧ್ವಃ ಸಂಪ್ರಸೀದೇತ್

**ಅನ್ವಯ** - ಸಖ್ಯೇ, ಅಚ್ಯುತಜ್ಞಾಯ, ಚ, ಭಾಷ್ಯಂ, ವ್ಯಾಖ್ಯಾಯ, ಕಲಿಮಲಂ, ಅಲಂ, ಅಪನೀಯ, ಕಾರ್ಷ್ಣಿಂಕ್ಷ್ಣೀಂ, ತ್ರಿದಶಕತರುಣ್ಯೈಃ, ಅಚಾಲ್ಯಾಂ, ಅರ್ಚಾಂ, ಲೀಲಯಾ, ಆನೀಯ, ರೂಪ್ಯೇ, ಆಸ್ಥಾಪ್ಯ, ಯಜ್ಞ ಪ್ರತಿಹತಿ ನಿರತಾನ್, ಉದಸ್ಯ, ಅಸ್ಯ (ಸ್ವ) ಯಜ್ಞಂ, ಕಾರಯಿತ್ವಾ, ಪುನಶ್ಚ, ವ್ಯಾಸಂ, ನತ್ವಾ, ಪ್ರತಿಗತರಜತಃ, ಸಃ, ಮಧ್ವಃ, ಸಂಪ್ರಸೀದೇತ್.

**ಅನ್ವಯಾರ್ಥ** - ಸಖ್ಯೇ=ಮಿತ್ರನಾದ ಒಬ್ಬ ಸನ್ಯಾಸಿಗೆ (ಜ್ಯೇಷ್ಠಯತಿಗಳಿಗೆ) ಅಚ್ಯುತಜ್ಞಾಯ ಚ=ತನ್ನ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೂ ಭಾಷ್ಯಂ=ಬ್ರಹ್ಮಸೂತ್ರ ಭಾಷ್ಯವನ್ನು, ವ್ಯಾಖ್ಯಾಯ=ಪ್ರವಚನಮಾಡಿ, ಕಲಿಮಲಂ=ಕಲಿಸಾಮರ್ಥ್ಯದಿಂದ ಉಂಟಾದ ಗುರುಗಳ ಮನಸ್ಸಿನ ಮಾಲಿನ್ಯವನ್ನು ಅಲಂ ಅಪನೀಯ=ಚೆನ್ನಾಗಿ ಹೋಗಲಾಡಿಸಿ, ಕಾರ್ಷ್ಣೀಂ=ಶ್ರೀಕೃಷ್ಣನಿಗೆ ಸಂಬಂಧಪಟ್ಟಿರುವ, ತ್ರಿದಶಕ ತರುಣ್ಯೈಃ=ಮೂವತ್ತು ಮಂದಿ ಯುವಕರಿಂದ ಅಚಾಲ್ಯಾಂ=ಅಲ್ಲಾಡಿಸಲು (ಎತ್ತಲು) ಅಸಾಧ್ಯವಾದ, ಅರ್ಚಾಂ=ಪ್ರತಿಮೆಯನ್ನು, ಲೀಲಯಾ=ಅನಾಯಾಸದಿಂದ, ಆನೀಯ=ತಂದು, ರೂಪ್ಯೇ=ರಜತಪೀಠಪುರದಲ್ಲಿ, ಅಸ್ಥಾಪ್ಯ=ಪ್ರತಿಷ್ಠಾಪಿಸಿ, ಯಜ್ಞಪ್ರತಿಹತಿನಿರತಾನ್=ತನ್ನ ಉಪಾಧ್ಯಾಯಪುತ್ರನು ಮಾಡುವ ಯಜ್ಞಕ್ಕೆ ವಿಘ್ನವನ್ನುಂಟು ಮಾಡುವುದರಲ್ಲಿ ಆಸಕ್ತರಾದವರನ್ನು, ಉದಸ್ಯ=ನಿರಾಕರಿಸಿ, ಸ್ವಯಜ್ಞಂ=ತನ್ನವನಾದ ಉಪಾಧ್ಯಾಯ ಪುತ್ರನು ಮಾಡುವ ಯಜ್ಞವನ್ನು, ಕಾರಯಿತ್ವಾ=ಮಾಡಿಸಿ, ಪುನಶ್ಚ=ಮತ್ತೂ ಕೂಡ, ವ್ಯಾಸಂ ನತ್ವಾ= (ಬದರಿಕಾಶ್ರಮಕ್ಕೆ ಹೋಗಿ) ಶ್ರೀ ವೇದವ್ಯಾಸರನ್ನು ವಂದಿಸಿ, ಪ್ರತಿಗತರಜತಃ=ರಜತಪೀಠಪುರಕ್ಕೆ (ಉಡುಪಿಗೆ ಹಿಂದಿರುಗಿದ), ಸಃ ಮಧ್ವಃ=ಅಂತಹ ಶ್ರೀಮಧ್ವಾಚಾರ್ಯರು ಸಂಪ್ರಸೀದೇತ್=ಪ್ರಸನ್ನರಾಗಲಿ.

**ತಾತ್ಪರ್ಯ** - ಶ್ರೀ ಮಧ್ವಾಚಾರ್ಯರು ಬದರಿಯಲ್ಲಿಯೇ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿ ಉಡುಪಿಗೆ ಬಂದಿದ್ದರು. ಅಲ್ಲಿ ಅವರ ಸ್ನೇಹಿತರಾದ ಜ್ಯೇಷ್ಠಯತಿಗಳೂ, ಅವರ ಗುರುಗಳಾದ ಅಚ್ಯುತ ಪ್ರೇಕ್ಷಾಚಾರ್ಯರೂ ಇದ್ದರು. ಅವರಿಬ್ಬರಿಗೂ ಶ್ರೀ ಮಧ್ವಾಚಾರ್ಯರು ತಾನು ವಿರಚಿಸಿದ ಬ್ರಹ್ಮಸೂತ್ರಭಾಷ್ಯವನ್ನು ಚೆನ್ನಾಗಿ ವಿವರಿಸಿ ವ್ಯಾಖ್ಯಾನಿಸಿ ಪಾಠ ಹೇಳಿದರು. ಸ್ವರೂಪದಿಂದ ಸಾತ್ತ್ವಿಕ ಜೀವರಾಗಿದ್ದ ಶ್ರೀ ಅಚ್ಯುತ ಪ್ರೇಕ್ಷಾಚಾರ್ಯರ ಅಂತಃಕರಣವು ಕಲಿಕಾಲಬಲದಿಂದಾಗಿ ಕುಮತ ಸಂಸ್ಕಾರದಿಂದ ಕಲುಷಿತವಾಗಿತ್ತು. ಆಚಾರ್ಯರು ತನ್ನ ಗುರುಗಳ ಅಂತಃಕರಣದ ಆ ಕಲಿಮಲವನ್ನು ಕಳೆದು ಅವರ ಅಂತಃಕರಣವನ್ನು ಸ್ವಚ್ಛಗೊಳಿಸಿ ಅವರಿಗೆ ಭಾಷ್ಯದ ಅದ್ಭುತವಾದ ಅರ್ಥಸಮೂಹಗಳನ್ನು ವರ್ಣಿಸಿದರು.

ಅನಂತರ ಶುದ್ಧಾತ್ಮರಾದ ಅಚ್ಯುತ ಪ್ರೇಕ್ಷಾಚಾರ್ಯರು ಬಹಳ ಸಂತೋಷಪಟ್ಟರು. ಆಚಾರ್ಯರು ಉಡುಪಿಯಲ್ಲಿಯೇ ಇದ್ದಾಗ ಶ್ರೀ ಕೃಷ್ಣನ ಪ್ರತಿಮೆಯನ್ನು, ಶ್ರೀ ಹರಿಯ ಸೂಚನಾನುಸಾರವಾಗಿ ಸಮುದ್ರತೀರದಿಂದ ತಂದರು. ಆಚಾರ್ಯರ ಸ್ಪರ್ಶದಿಂದ ವಿಶೇಷವಾಗಿ ಹರಿಸನ್ನಿಧಾನದಿಂದ ಕೂಡಿದ ಆ ಪ್ರತಿಮೆಯನ್ನು ಮೂವತ್ತು ಮಂದಿ ತರುಣರಿಗೂ ಎತ್ತಲು ಅಲ್ಲಾಡಿಸಲೂ ಸಾಧ್ಯವಾಗುತ್ತಿರಲಿಲ್ಲ. ಆದರೆ ಆಚಾರ್ಯರು ಅನಾಯಾಸವಾಗಿ ಆ ಪ್ರತಿಮೆಯನ್ನು ಉಡುಪಿಗೆ ತಂದು ಅಲ್ಲಿ ಪ್ರತಿಷ್ಠಾಪಿಸಿದರು. ಅವರ ವೇದೋಪಾಧ್ಯಾಯರ ಮಗನು ಒಂದು ಯಜ್ಞವನ್ನು ಆಚಾರ್ಯರ ನಿರ್ದೇಶನದಲ್ಲಿ ಉಡುಪಿಯಲ್ಲಿಯೇ ನಡೆಸುತ್ತಿದ್ದನು. ಆಗ ಕೆಲವರು ನಾವೇ ಯಜ್ಞಪ್ರಕ್ರಿಯೆಯನ್ನು ಬಲ್ಲವರು ಇವರಿಗೇನೂ ತಿಳಿಯದು ಎಂದು ಹೇಳುತ್ತಾ ಆ ಯಜ್ಞವನ್ನು ಹಾಳು ಮಾಡಲು ಮತ್ತು ನಿಲ್ಲಿಸಲೂ ಪ್ರಯತ್ನಿಸುತ್ತಿದ್ದರು. ಆಚಾರ್ಯರು ಶಾಸ್ತ್ರಾಧಾರಗಳನ್ನು ಕೊಟ್ಟು ಆ ಯಜ್ಞಘಾತುಕರನ್ನು ಸುಮ್ಮನಿರುವಂತೆ ಮಾಡಿದರು. ತನ್ನ ಗುರುಪುತ್ರನಿಂದ ಸಾಂಗೋಪಾಂಗವಾಗಿ ಯಜ್ಞವನ್ನು ನಡೆಸಿದರು. ಅಂತಹ ಅದ್ಭುತಕಾರ್ಯಗಳನ್ನು ಮಾಡಿ ಪುನಃ ಉತ್ತರಭಾರತ ಯಾತ್ರೆಯನ್ನು ಮಾಡಿ ದೊಡ್ಡ ಬದರಿಗೆ ಹೋಗಿ ಅಲ್ಲಿ ಶ್ರೀ ವೇದವ್ಯಾಸರನ್ನು ಕಂಡು ನಮಸ್ಕರಿಸಿ ತಾವು ಮಾಡಿದ ಕಾರ್ಯಗಳನ್ನೆಲ್ಲಾ ಅವರಿಗೆ ಸಮರ್ಪಿಸಿದರು. ಅಲ್ಲಿಂದ ಪುನಃರಜತಪೀಠಪುರಕ್ಕೆ ಬಂದರು. ಇಂತಹ

ಶ್ರೀ ಮಧ್ವಾಚಾರ್ಯರು ನಮ್ಮ ವಿಷಯದಲ್ಲಿ ಸುಪ್ರಸನ್ನರಾಗಲಿ ನಮ್ಮನ್ನು ಅನುಗ್ರಹಿಸಲಿ ಎಂದು ಗ್ರಂಥಕಾರರು ಶ್ರೀ ಮಧ್ವಾಚಾರ್ಯರನ್ನು ಪ್ರಾರ್ಥಿಸಿದ್ದಾರೆ.

**ವಿಗ್ರಹ** – ಕಲೇಃ ಮಲಂ ಕಲಿಮಲಂ (ಕಲಿಕೃತಂ ಮಲಂ ಕಲಿಮಲಂ ಇತಿವಾ) ಅಚ್ಯುತಂ ಜಾನಾತೀತಿ ಅಚ್ಯುತಜ್ಞಃ ತಸ್ಯ, ಕೃಷ್ಣಸ್ಯ ಇಯಂಕಾರ್ಷ್ಣೀ, ತಾಂ, ಚಾಲಯಿತುಂ ಶಕ್ಯಾ ಚಾಲ್ಯಾ ನ ಚಾಲ್ಯಾ ಅಚಾಲ್ಯಾ ತಾಂ, ತ್ರಿರಾವೃತಾಃ ದಶಸಂಖ್ಯಾಃ ಯೇಷಾಂ ತೇ ತ್ರಿದಶಕಾಃ ತ್ರಿದಶಕಾಶ್ಚ ತೇ ತರುಣಾಶ್ಚ ತ್ರಿದಶಕತರುಣಾಃ ತೈಃ, ಯಜ್ಞಸ್ಯ ಪ್ರತಿಹತಿಃ ಯಜ್ಞಪ್ರತಿಹತಿಃ ಯಜ್ಞ ಪ್ರತಿಹತೌ ನಿರತಾಃ ಯಜ್ಞ ಪ್ರತಿಹತಿನಿರತಾಃ ತಾನ್, ಪ್ರತಿಗತಂ ರಜತಂ ಯೇನ ಸಃ ಪ್ರತಿಗತರಜತಃ

**ಕ್ರಿಯಾಪದ** - ಸಮ್+ಪ್ರ+ಸೀದೇತ್ ಸೀದೇತಾಂ ಸೀದೇಯುಃ ಸೀದೇಃ ಸೀದೇತಂ ಸೀದೇತ ಸೀದೇಯಂ ಸೀದೇವ ಸೀದೇಮ ಸಂ.ಪ್ರ. ಉಪಸರ್ಗದ್ವಯಪೂರ್ವಕ ಷದ ಲೃ (ಸದ್- ಸಿದ್) ವಿಶರಣಗತ್ಯವಸಾದನೇಷು ಇತಿ ಧಾತೋಃ ಅಕರ್ಮಕಾತ್ ಅನಿಟ್ಃ ಪರಸ್ಮೈಪದಿನಃ ವಿಧಿಲಿಜ ಪ್ರಥಮ ಪುರಷ ಏಕವಚನೇ ಸಂಪ್ರಸೀದತ್ ಇತಿರೂಪಂ.

೧ ಲಟ್ ಸೀದತಿ ೨ ಲಿಟ್ ಸಸಾದ ಸೇದತುಃ ಸೇದುಃ ಸೇದಿಥ ಸಸತ್ಥ ಸೇದಥುಃ ಸೇದ, ಸಸಾದ ಸಸದ ಸೇದಿವ ಸೇದಿಮ ೩ ಲುಟ್ ಸತ್ತಾ ಸತ್ತಾರೌ ಸತ್ತಾರಃ ಸಿ ೪ ಲೃಟ್ ಸತ್ಸ್ಯತಿ ೫ ಲೋಟ್ ಸೀದತ್ ೬ ಲುಙ್ ಅಸೀದತ್ ೭ ವಿದಿಲಙ್ ಸೀದೇತ್ ೮ ಅಶೀರ್ಲಿಙ ಸದ್ಯಾತ್ ಸದ್ಯಾಸ್ತಾಂ ಸದ್ಯಾಸುಃ ೭ ಲುಙ್ ಅಸದತ್ ಅಸದತಾಂ ಅಸದನ್, ಅಸದಃ ಅಸದತಂ ಅಸದತ, ಅಸದಂ ಅಸದಾವ ಅಸದಾಮ. ೧೦ ಲೃಙ್ ಅಸತ್ಸ್ಯತ್ ಅಸತ್ಸ್ಯತಾಂ ಅಸತ್ಸ್ಯನ್.

**ಪ್ರಯೋಗ** - ಪ್ರತಿಗತರಜತೇನ ತೇನ ಮಧ್ವೇನ ಸಂಪ್ರಸದ್ಯೇತ (ಭಾವೇ)

## ಅಣುಮಧ್ವವಿಜಯ ಗೂಢಭಾವಪ್ರಕಾಶಿಕಾ

**ಅವತರಣಿಕಾ** - ಶ್ರೀಮಧ್ವಾಚಾರ್ಯರು ಎರಡನೆಯ ಬಾರಿ ದೊಡ್ಡ ಬದರಿಯಲ್ಲಿರುವ ವ್ಯಾಸಾಶ್ರಮಕ್ಕೆ ಹೋಗುವಾಗ ಮಾಡಿದ ಅದ್ಭುತ ಕಾರ್ಯಗಳನ್ನು ಹೇಳುತ್ತಾರೆ.

**ಸಾಗಸ್ತ್ವಾದೀಶದೇವಂ ಪರವಶಖನನಂ ಯೋ ವ್ಯಧಾದಷ್ಟವಃಸ್ವೈಃ**
**ಗಂಗಾತಾರೀ ಸ್ವರೀತ್ಯಾ ವಶಿತಯವನರಾಟ್ ವರ್ತ್ಮನಿ ಕ್ವಾಪಿ ಚೋರಾನ್**
**ಹಂತುಂ ಯಾತಾನ್ ಮಿಥೋಹನ್ ಕ್ವಚಿದಪಿ ನಿಜಶಿಷ್ಯೇಣ ಚಾದ್ರಾವಯದ್ವ್ಯಾಗ್**
**ಯೋಗೇನಾಸೀಚ್ಛಿಲಾಭಃ ಕ್ವಚಿದಪಿ ಸಗಣಸ್ತಂ ಮಹೇಕ್ಷಂ ದಿದೃಕ್ಷೇ ।।೧೯।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಶ್ರೀಮಧ್ವಸ್ಯ ಪುನರ್ವ್ಯಾಸಾಶ್ರಮಂ ಪ್ರತಿ ಗಮನಾಗಮನಯೋಃ ಕೃತಚರಿತಾನ್ಯಾಹ ಸಾಗಸ್ತ್ವಾದಿತಿ।। ಯೋ ಮಧ್ವಃ ಈಶದೇವಂ ಈಶ್ವರದೇವನಾಮಾನಂ ರಾಜಾನಂ, ಸಾಗಸ್ತ್ವಾತ್ ಆಗಸಾ ಅಪರಾಧೇನ ಸಹವರ್ತತ ಇತಿ ಸಾಗಾಃ ತಸ್ಯ ಭಾವಃ ತತ್ತ್ವಂ, ತಸ್ಮಾತ್, ಪರವಶಖನನಂ ಪರವಶಂ ಸ್ವಾವಶಂ ಖನನಂ ಯಸ್ಯ ತಂ ವ್ಯಧಾತ್ ಅಕಾರ್ಷೀತ್ ಶ್ರೀಮಧ್ವಃ ಬದರಿಕಾಶ್ರಮಂ ಗಚ್ಛನ್ ಮಾರ್ಗಮಧ್ಯೇ ಕ್ವಚಿತ್ ಪಾಂಥಾನ್ ಬಲಾತ್ ಗೃಹೀತ್ವಾ ತಟಾಕಖನನಂ ಕಾರಯಂತಂ ಸ್ವಾತ್ಮಾನಂ ಅಪಿ ಪಥಿ ಗಚ್ಛಂತಂ ಖನನಾರ್ಥಂ ಆಕರ್ಷಂತಂ ಈಶ್ವರದೇವಾಖ್ಯಂ ದುಷ್ಟಂ ರಾಜಾನಂ ದೃಷ್ಟ್ವಾ 'ಖನನಪ್ರಕಾರಂ ಮಮ ಪ್ರಕಾಶಯ' ಇತ್ಯುಕ್ತ್ವಾ ತತ್ಪ್ರಕಾಶಾಯ ಉಪಕ್ರಾಂತಂ ತಂ ಸ್ವಯಮಂತಃ ಪ್ರೇರ್ಯ ನಿಶ್ಶೇಷಖನನಮಕರೋತ್। ಸ್ವೈಃ ಸ್ವಕೀಯೈಃ ಶಿಷ್ಯೈಃ ಸಹ ಸ್ವೋ ಜ್ಞಾತಾವಾತ್ಮನಿ ಸ್ವಂ ತ್ರಿಷ್ವಾತ್ಮೀಯೇ ಸ್ವೋಸ್ತ್ರಿಯಾಂ ನಿಧೇ' ಇತ್ಯಮರಃ, ಅಪ್ಲವಃ ಪ್ಲವಶಬ್ದೇನ ಪ್ರವಾಹತರಣಸಾಧನ

ಮುಚ್ಯತೇ ನ ವಿದ್ಯತೇ ಪ್ಲವೋ ನೌಃ ಯಸ್ಯಾಸೌ ಅಪ್ಲವಃ ಸನ್, ಉಡುಪಂತು **ಪ್ಲವಃ ಕೋಲಃ** ಇತ್ಯಮರಃ ಗಂಗಾತಾರೀ ಗಂಗಾಂ ತರತೀತಿ ಗಂಗಾತಾರೀ ಶತ್ರುಶಂಕಯಾ ಪ್ಲವಹೀನಾಂ ಗಂಗಾಂ ಸ್ವಕಟಿಭಾಗಾ**ವಲಂಬಿಭಿಃ ಶಿಷ್ಯೈಃ** ಸಹ ಸ್ವಹಸ್ತಾಭ್ಯಾಂ ತೀರ್ಣವಾನ್ ಇತಿ ಭಾವಃ ಸ್ವರೀತ್ಯಾ ಸ್ವಶಬ್ದಃ ಸಮಭಿವ್ಯಾಹೃತಯವನರಾಜಪ**ರಾಮರ್ಶೀ, ತಥಾಚ** ಸ್ವಸ್ಯ ತ್ವರಕರಾಜಸ್ಯ ರೀತ್ಯಾ ತದೀಯಭಾಷಯಾ ಇತ್ಯರ್ಥಃ, ವಶಿತಯವನರಾಟ್, ವಶಿತಃ ಸ್ವವಶೀಕೃತಃ **ಯವನರಾಟ್** ಮ್ಲೇಂಛರಾಜಃ ಯೇನ ಸಃತಥಾ ರಿಪುನೃಪವೀರಶಂಕಯಾ ರಾಜಭಟೈರ್ಹನನೇಚ್ಛಯಾ ರಾಜಸಮೀಪಂ ನೀಯ**ಮಾನಃ** ಮಧ್ವಃ ರಾಜಾನಂ ದೃಷ್ಟ್ವಾ, ದೇಶಕಾಲೋಚಿತತದೀಯಭಾಷಯಾ ರಾಜ್ಞಃ ಸ್ವಸ್ಮಿನ್ ಪೂಜ್ಯತಾಬುದ್ಧಿಂ **ಉತ್ಪಾದ್ಯ** ಗತವಾನ್ ಇತಿ ಭಾವಃ (ಕ್ವಾಪಿ) ಕ್ವಚಿದ್‌ವರ್ತ್ಮನಿ ಮಾರ್ಗೇ ಸಶಿಷ್ಯಂ ಸ್ವಾತ್ಮಾನಂ ಹಂತುಂ ಯಾತಾನ್ **ಪ್ರಾಪ್ತಾನ್** ಚೋರಾನ್ ತಸ್ಕರಾನ್ ಸ್ವಯಂ ಸ್ವಯಮೇವ ಮಿಥಃ ಪರಸ್ಪರಂ ಅಹನ್ ಅಘಾತಯತ್ ಹನ ಹಿಂಸಾಗತ್ಯೋಃ ಲಙ್ ಶ್ರೀಮಧ್ವಃ ಕ್ವಚಿತ್ ಮಾರ್ಗೇ ಗಚ್ಛನ್ ಸ್ವಾತ್ಮಾನಂ ಹಂತುಮಾಗತಾಂಶ್ಚೋರಾನ್ ದೃಷ್ಟ್ವಾ ಸ್ವೀಯಾನ್ ಕ್ವಚಿನ್ನಿಕ್ಷಿಪ್ಯ ಸ್ವಕರೇ ಪಟಪಿಂಡಂ ನಿಧಾಯ ಸ್ವಯಂ ಚೋರಮಧ್ಯೇ ಗತ್ವಾ ದ್ರವ್ಯಬುದ್ಧಿಂ ತೇಷಾಂ ಉತ್ಪಾದ್ಯ ಪರಸ್ಪರಂ ಘಾತಯಾಮಾಸ ಇತಿ ಭಾವಃ ಕ್ವಚಿದಪಿ ಪುನಃ ಪ್ರದೇಶಾಂತರೇಽಪಿ ನಿಜಶಿಷ್ಯೇಣ ಉಪೇಂದ್ರತೀರ್ಥಾಖ್ಯಶಿಷ್ಯೇಣ ದ್ರಾಕ್ ಶೀಘ್ರಂ ಚೋರಾನದ್ರಾವಯತ್ ಪಲಾಯನ ಮಕಾರಯತ್ ದ್ರುಗತೌ ಲಙ್ ಪ್ರದೇಶಾಂತರೇ ಸರ್ವಾನ್ ಹಂತುಮಾಗತಾನ್ ಶತಸಂಖ್ಯಾಕಾನ್ ಚೋರಾನ್ ದೃಷ್ಟ್ವಾ, ಮಧ್ವಪ್ರಿಯಶಿಷ್ಯಃ ಕ್ವಚಿನ್ಮಧ್ವಾಜ್ಞಯಾ ತಾನ್ ಅಭಿದ್ರುತ್ಯ ಚೋರನಾಥಹಸ್ತಾತ್ ಖಡ್ಗಮಾಚ್ಛಿದ್ಯ ತಚ್ಛಿರಶ್ಛಿತ್ವಾ ತತ್ಪರಿವಾರಾನ್ ಅದ್ರಾವಯತ್ ಇತಿಭಾವಃ ಕ್ವಚಿದಪಿ ಪುನಃ ಪ್ರದೇಶಾಂತರೇಽಪಿ ಅನ್ಯಾನ್ ಚೋರಾನ್ ದೃಷ್ಟ್ವಾ ಇತಿಶೇಷಃ ಸಗಣಃ ಸಶಿಷ್ಯಸಂಘಃ, ಯೋಗೇನ ಸಾಮರ್ಥ್ಯವಿಶೇಷೇಣ ಶಿಲಾಭಃ ಪಾಷಾಣತುಲ್ಯಃ ಆಸೀತ್ ಅಸ್ತಿಸಿಚೋಽಪೃಕ್ತೇ ಇತಿ ಈಟ್ ಮಹೇಕ್ಷಂ ಮಹತೀ ಈಕ್ಷಾ ಯಸ್ಯ ತಂ ಪೂರ್ಣಪ್ರಜ್ಞಂ ಇತ್ಯರ್ಥಃ ದಿದೃಕ್ಷೇ ದ್ರಷ್ಟುಂ ಇಚ್ಛಾಮಿ ಜ್ಞಾಶ್ರುಸ್ಮೃದೃಶಾಂಸನಃ ಇತಿ ಆತ್ಮನೇ ಪದಂ.

**ಪದಚ್ಛೇದ** - ಸಾಗಸ್ತ್ವಾತ್ ಈಶದೇವಂ ಪರವಶಖುನನಂ ಯಃ ವ್ಯಧಾತ್ ಅಪ್ಲವಃಸ್ವೈಃ ಗಂಗಾತಾರೀ ಸ್ವರೀತ್ಯಾ ವಶಿತಯವನರಾಟ್ ವರ್ತ್ಮನಿ, ಕ್ವ ಅಪಿ ಚೋರಾನ್ ಹಂತುಂ ಯಾತಾನ್ ಮಿಥಃ ಅಹನ್, ಕ್ವಚಿತ್ ಅಪಿ ನಿಜಶಿಷ್ಯೇಣ, ಚ, ಅದ್ರಾವಯತ್ ದ್ರಾಕ್, ಯೋಗೇನ ಆಸೀತ್, ಶಿಲಾಭಃ ಕ್ವಚಿತ್ ಅಪಿ ಸಗಣಃ, ತಂ ಮಹೇಕ್ಷಂ ದಿದೃಕ್ಷೇ.

**ಅನ್ವಯ** - ಯಃ ಈಶದೇವಂ ಸಾಗಸ್ತ್ವಾತ್ ಪರವಶಖುನನಂ ವ್ಯಧಾತ್ ಸ್ವೈಃ (ಸಹ) ಅಪ್ಲವಃ (ಸನ್) ಗಂಗಾತಾರೀ, ಸ್ವರೀತ್ಯಾ ವಶಿತಯವನರಾಟ್ ಕ್ವಾಪಿ ವರ್ತ್ಮನಿ ಹಂತುಂ ಯಾತಾನ್ ಚೋರಾನ್ ಮಿಥಃ ಅಹನ್ ಕ್ವಚಿದಪಿ ನಿಜಶಿಷ್ಯೇಣ ಚ ದ್ರಾಕ್ ಅದ್ರಾವಯತ್ ಕ್ವಚಿದಪಿ ಸಗಣಃ ಯೋಗೇನ ಶಿಲಾಭಃ ಆಸೀತ್ ತಂ ಮಹೇಕ್ಷಂ ದಿದೃಕ್ಷೇ.

**ಅನ್ವಯಾರ್ಥ** - ಯಃ=ಯಾವ ಶ್ರೀಮಧ್ವಾಚಾರ್ಯರು, ಈಶದೇವಂ=ಈಶ್ವರದೇವನೆಂಬ ರಾಜನನ್ನು, ಸಾಗಸ್ತ್ವಾತ್= ಅಪರಾಧದಿಂದ ಕೂಡಿದ್ದರಿಂದ (ತನಗೆ ಅಪರಾಧ ಮಾಡಿದ್ದರಿಂದ) ಪರವಶಖುನನಂ=ತನಗೆ ಅಧೀನವಲ್ಲದ ಅಗೆಯುವಿಕೆ ಉಳ್ಳವನನ್ನಾಗಿ, ವ್ಯಧಾತ್=ಮಾಡಿದರೋ, ಸ್ವೈಃ (ಸಹ)=ತನ್ನವರಾದ ಶಿಷ್ಯರೊಡನೆ, ಅಪ್ಲವಃ (ಸನ್) ತೆಪ್ಪ ಮುಂತಾದ ನದಿದಾಟುವ ಸಾಧನವಿಲ್ಲದವರಾದಾಗ್ಯೂ, ಗಂಗಾತಾರೀ=ಗಂಗೆಯನ್ನು ದಾಟಿದ, ಸ್ವರೀತ್ಯಾ=ತುರುಕರಾಜನ ರೀತಿಯಿಂದ (ತುರುಕ ಭಾಷೆಯಿಂದ) ವಶಿತಯವನರಾಟ್=ಸ್ವಾಧೀನ ಮಾಡಿಕೊಳ್ಳಲ್ಪಟ್ಟ ಮ್ಲೇಂಛರಾಜನುಳ್ಳ, ಕ್ವಾಪಿ ವರ್ತ್ಮನಿ=ದಾರಿಯಲ್ಲಿ ಎಲ್ಲೋ ಒಂದು ಕಡೆ, ಹಂತುಂ=(ತನ್ನನ್ನು) ಕೊಲ್ಲಲು, ಯಾತಾನ್=ಬಂದಿರುವ, ಚೋರಾನ್=ಕಳ್ಳರನ್ನು, ಮಿಥಃ ಅಹನ್=ಪರಸ್ಪರವಾಗಿಯೇ ಕೊಂದರೋ, (ಒಬ್ಬರು ಇನ್ನೊಬ್ಬರನ್ನು ಹೊಡೆದು ಸಾಯುವಂತೆ ಮಾಡಿದರೋ) ಕ್ವಚಿದಪಿ= ಮತ್ತೆ ಎಲ್ಲೋ ಒಂದು ಕಡೆ, ನಿಜಶಿಷ್ಯೇಣ ಚ=ಉಪೇಂದ್ರತೀರ್ಥರೆಂಬ ತನ್ನ ಶಿಷ್ಯರಿಂದ ದ್ರಾಕ್=ಬೇಗನೆ, ಅದ್ರಾವಯತ್= (ಕಳ್ಳರನ್ನು) ಓಡಿಸಿದರೋ, ಕ್ವಚಿದಪಿ=ಮತ್ತೊಂದುಕಡೆ, (ಶಿಷ್ಯಸಮೂಹಸಹಿತರಾಗಿ) ಯೋಗೇನ=ಸಾಮರ್ಥ್ಯ ವಿಶೇಷದಿಂದ,

ಶಿಲಾಭಃ ಆಸೀತ್=ಬಂಡೆಕಲ್ಲಿನಂತೆ ಆದರೋ, ತಂ=ಅಂತಹ, ಮಹೇಕ್ಷಂ=ಶ್ರೀಪೂರ್ಣಪ್ರಜ್ಞರನ್ನು, ದಿದೃಕ್ಷೇ=ನೋಡಲು ಬಯಸುತ್ತೇನೆ.

**ತಾತ್ಪರ್ಯ** - ಶ್ರೀಮಧ್ವಾಚಾರ್ಯರು ಬದರೀಕಾಶ್ರಮಕ್ಕೆ ಹೋಗುತ್ತಾ ಇದ್ದರು. ಮಾರ್ಗಮಧ್ಯದಲ್ಲಿ ಈಶ್ವರದೇವನೆಂಬ ರಾಜನ ರಾಜ್ಯವು ಬಂದಿತು. ಅವನು ದಾರಿಗರನ್ನು ಬಲಾತ್ಕಾರವಾಗಿ ಹಿಡಿದು ನಿಲ್ಲಿಸಿ ಅವರಿಂದ ಕೆರೆಯನ್ನು ಅಗೆಸುತ್ತಿದ್ದನು. ಶ್ರೀಮಧ್ವಾಚಾರ್ಯರನ್ನು ಅವನು ನಿಲ್ಲಿಸಿ ಕೆರೆ ಅಗೆಯುವ ಕೆಲಸವನ್ನು ಮಾಡಬೇಕೆಂದು ಬಲಾತ್ಕರಿಸಿದನು. ಆಚಾರ್ಯರು ಆ ದುಷ್ಟರಾಜನಿಗೆ ಬುದ್ಧಿ ಕಲಿಸಬೇಕೆಂದು ನಿರ್ಧರಿಸಿದರು. ಅಯ್ಯಾ ರಾಜನೇ ನಮಗೆ ಅಗೆಯುವ ಕೆಲಸವು ತಿಳಿಯದು. ನೀನು ಅಗೆದು ತೋರಿಸು ಎಂದು ಹೇಳಿದಾಗ ಈಶ್ವರದೇವನು ತಾನೇ ಅಗೆಯಲು ಪ್ರಾರಂಭಿಸಿದನು. ಒಳಗೆ ನಿಂತು ತಾವೇ ಪ್ರೇರಿಸಿದ ಆಚಾರ್ಯರು ಅವನ ಮೂಲಕವೇ ಅಗೆಯುವ ಕೆಲಸವನ್ನು ಸಾಯಂಕಾಲದ ತನಕವೂ ಮಾಡಿಸಿದರು. ಅವನಿಂದ ಕೆಲಸ ಪ್ರಾರಂಭ ಮಾಡಿಸಿ ತಾವು ಶಿಷ್ಯ ಸಹಿತರಾಗಿ ಮುಂದಕ್ಕೆ ಹೋದರು. ಈ ರೀತಿ ಎಲ್ಲರ ಒಳಗೆ ನಿಂತು ಪ್ರೇರಿಸುವ ಶ್ರೀಮುಖ್ಯ ಪ್ರಾಣದೇವರ ಅವತಾರವೇ ಶ್ರೀಮಧ್ವಾಚಾರ್ಯರು ಎಂಬ ವಿಷಯವನ್ನು ತಮ್ಮ ಭಕ್ತ ಶಿಷ್ಯರಿಗೆ ಆಚಾರ್ಯರು ತಿಳಿಯಪಡಿಸಿದರು. ಮುಂದೆ ಆಚಾರ್ಯರ ಪ್ರಯಾಣದ ದಾರಿಯಲ್ಲಿ ಗಂಗಾ ನದಿಯು ಎದುರಾಯಿತು. ಶತ್ರುಗಳು ಅಥವಾ ಅವರ ಗೂಢಚಾರರು ನದಿ ದಾಟಿ ಬರಬಾರದೆಂದು ಗಂಗೆಯಲ್ಲಿ ಎಲ್ಲಾ ದೋಣಿಗಳನ್ನು ಅಲ್ಲಿಯ ರಾಜನು ತನ್ನ ವಶಮಾಡಿಕೊಂಡು ನದಿಯಲ್ಲಿ ಯಾವ ದಾಟುವ ಸಾಧನವನ್ನೂ ಇಟ್ಟಿರಲಿಲ್ಲ. ಆಚಾರ್ಯರು ನದಿಗೆ ಇಳಿದು ಒಬ್ಬ ಶಿಷ್ಯನಿಗೆ ತನ್ನ ಸೊಂಟವನ್ನು ಆಧರಿಸಲು ಹೇಳಿ, ಒಬ್ಬರನ್ನು ಆಧರಿಸಿ ಇನ್ನೊಬ್ಬರು ಬರುವಂತೆ ಮಾಡಿ ಎಲ್ಲರಿಗಿಂತಲೂ ಮುಂದೆ ತಾವೊಬ್ಬರೇ ಈಜಿ ಎಲ್ಲರನ್ನು ಕರೆದುಕೊಂಡು ಗಂಗೆಯನ್ನು ದಾಟಿದರು.

ಅಲ್ಲಿಂದ ಮುಂದೆ ನದಿಯ ಆಚೆಯ ದಡ ತಲುಪಿದ ಕೂಡಲೇ ಅಲ್ಲಿದ್ದ ತುರುಕ ಸೈನಿಕರು ಇವರು ಶತ್ರುಗಳ ಕಡೆಯ ಗೂಢಚಾರರು ಇರಬಹುದೆಂಬ ಸಂದೇಹದಿಂದ ಇವರನ್ನು ಶಿಕ್ಷಿಸಬೇಕೆಂದು ತಮ್ಮ ರಾಜನ ಬಳಿಗೆ ಕರೆದುಕೊಂಡು ಹೋದಾಗ ಶ್ರೀಮಧ್ವರು ತುರುಕ ರಾಜನನ್ನು ನೋಡಿ ದೇಶ ಕಾಲಗಳಿಗೆ ತಕ್ಕಂತೆ ಅವರ ತುರುಕ ಭಾಷೆಯಲ್ಲಿಯೇ ಮಾತನಾಡಿ ತುರುಕರಾಜನಿಗೆ ತನ್ನಲ್ಲಿ ಪೂಜ್ಯಬುದ್ಧಿ ಮತ್ತು ಗೌರವ ಉಂಟಾಗುವಂತೆ ಮಾಡಿದರು ಮತ್ತು ಅಲ್ಲಿಂದ ಮುಂದಕ್ಕೆ ಹೋದರು.

ಅಲ್ಲಿಂದ ಮುಂದೆ ಶ್ರೀಮಧ್ವಾಚಾರ್ಯರು ಬದರಿಗೆ ಹೋಗುವ ದಾರಿಯಲ್ಲಿ ಹೋಗುತ್ತಾ ಒಂದು ಸ್ಥಳದಲ್ಲಿ ನೂರಾರು ಕಳ್ಳರು ತಮ್ಮನ್ನು ಕೊಲ್ಲಲು ಬಂದಿರುವುದನ್ನು ನೋಡಿ ತನ್ನವರನ್ನು ಒಂದು ಕಡೆ ನಿಲ್ಲಿಸಿ, ತಮ್ಮ ಕೈಯಲ್ಲಿ ಒಂದು ಬಟ್ಟೆಯ ಗಂಟನ್ನು ಹಿಡಿದುಕೊಂಡು ತಾವೇ ಕಳ್ಳರ ಮಧ್ಯದಲ್ಲಿ ಹೋಗಿ ನಿಂತುಕೊಂಡರು. ಕಳ್ಳರು ಆ ಗಂಟಿನಲ್ಲಿ ಹಣವಿದೆಯೆಂದು ಭ್ರಾಂತಿ ಪಡುವಂತೆ ಮಾಡಿದರು. ಆಗ ಆ ಕಳ್ಳರು ತಮ್ಮ ತಮ್ಮಲ್ಲಿಯೇ ಆ ಗಂಟಿಗಾಗಿ ಹೊಡೆದಾಡುತ್ತಾ ಸತ್ತುಹೋದರು. ಆಚಾರ್ಯರು ಅವರ ಬುದ್ಧಿಯಲ್ಲಿ ನಿಂತು ಪ್ರೇರಿಸಿ ಒಬ್ಬರನ್ನೊಬ್ಬರು ಹೊಡೆದು ಕೊಲ್ಲುವಂತೆ ಮಾಡಿದರು.

ಮತ್ತೊಂದು ಪ್ರದೇಶದಲ್ಲಿ ಹೋಗುತ್ತಿರುವಾಗ ನೂರಾರು ಕಳ್ಳರು ಕೊಲ್ಲಲು ಬಂದರು. ಆಗ ಉಪೇಂದ್ರ ತೀರ್ಥರೆಂಬ ತಮ್ಮ ಶಿಷ್ಯನನ್ನು ಕುರಿತು ಆಚಾರ್ಯರು 'ಕಳ್ಳರ ನಾಯಕನ ಕೈಯಲ್ಲಿದ್ದ ಖಡ್ಗವನ್ನು ಕಿತ್ತುಕೋ' ಎಂದು ಹೇಳಿದಾಗ ಶ್ರೀ ಉಪೇಂದ್ರತೀರ್ಥರು ಧೈರ್ಯದಿಂದ ಮುನ್ನುಗ್ಗಿ ಕಳ್ಳರ ಮುಖಂಡನ ಕೈಯಲ್ಲಿದ್ದ ಖಡ್ಗವನ್ನು ಕಿತ್ತುಕೊಂಡು ಕಳ್ಳರ ಮುಖಂಡನ ತಲೆಯನ್ನೇ ಕತ್ತರಿಸಿ, ಕಳ್ಳರ ಗುಂಪನ್ನೆಲ್ಲಾ ಓಡಿಸಿದರು. ಹೀಗೆ ಆಚಾರ್ಯರು ತನ್ನ ಶಿಷ್ಯರಲ್ಲಿಯೂ ಆವಿಷ್ಟರಾಗಿ ಅದ್ಭುತ ಕಾರ್ಯಗಳನ್ನು ಮಾಡಿದ್ದಾರೆ.

ಅವರು ಮತ್ತೊಂದು ಪ್ರದೇಶದಲ್ಲಿ ಹೋಗುತ್ತಿದ್ದಾಗ ಬೇರೆ ಕೆಲವು ಕಳ್ಳರು ಇವರ ಮೇಲೆ ಬೀಳಲು

ದೂರದಿಂದ ಹೊಂಚು ಕಾಯುತ್ತಿದ್ದರು. ಆಗ ಆಚಾರ್ಯರು ತನ್ನ ಯೋಗಸಾಮರ್ಥ್ಯದಿಂದ ತಾನು ಮತ್ತು ತನ್ನ ಶಿಷ್ಯರೆಲ್ಲರೂ ಬಂಡೆಕಲ್ಲುಗಳ ರಾಶಿಗಳಂತೆ ಕಾಣುವಂತೆ ಮಾಡಿದರು. ಇಂತಹ ಶ್ರೀ ಪೂರ್ಣಪ್ರಜ್ಞರನ್ನು ನಾನು ನೋಡಬೇಕೆಂದು ತವಕಿಸುತ್ತೇನೆ.

**ವಿಗ್ರಹ** - ಆಗಸಾ ಸಹ ವರ್ತತೇ ಇತಿ ಸಾಗಾಃ ಸಾಗಸಃ ಭಾವಃ ಸಾಗಸ್ತ್ವಂ ತಸ್ಮಾತ್, ಪರಸ್ಯ ವಶಂ ಪರವಶಂ, ಪರವಶಂ ಖನನಂ ಯಸ್ಯಸಃ ಪರವಶಖನನಃ ತಂ, ನ ವಿದ್ಯತೇ ಪ್ಲವಃ ಯಸ್ಯಸಃ ಅಪ್ಲವಃ, ಗಂಗಾಂ ತರತೀತಿ ಗಂಗಾತಾರೀ ಸ್ವಸ್ಯರೀತಿಃ ಸ್ವರೀತಿಃ ತಯಾ ಸ್ವರೀತ್ಯಾ, ಯವನಾನಾಂ ರಾಟ್ ಯವನರಾಟ್ ವಶಿತಃ ಯವನರಾಟ್ ಯೇನ ಸಃ ವಶಿತಯವನರಾಟ್, ನಿಜಶ್ಚಾಸೌ ಶಿಷ್ಯಶ್ಚ ನಿಜಶಿಷ್ಯಃ ತೇನ, ಶಿಲಾಯಾಃ ಆಭಾ ಇವ ಆಭಾ ಯಸ್ಯಸಃ ಶಿಲಾಭಃ, ಗಣೇನ ಸಹವರ್ತತೇ ಇತಿ ಸಗಣಃ, ಮಹತೀ ಈಕ್ಷಾ ಯಸ್ಯ ಸಃ ಮಹೇಕ್ಷಃ, ವಿ+ಅಧಾತ್ ಅಧಾತಾಂ ಅಧುಃ, ಅಧಾಃ ಅಧಾತಂ ಅಧಾತ, ಅಧಾಂ ಅಧಾವ ಅಧಾಮ ಡುಧಾಞ ಧಾರಣಪೋಷಣಯೋಃ ಪರಸ್ಮೈ ಲುಜ್, ಅಹನ್ ಅಹತಾಂ ಅಘ್ನನ್, ಅಹನ್ ಅಹತಂ ಅಹತ, ಅಹನಂ ಅಹನ್ವ ಅಹನ್ಮ ಹನ ಹಿಂಸಾಗತ್ಯೋಃ ಪರಸ್ಮೈಪದೀ ಅನದ್ಯತನಭೂತೇ ಲಜ್ ಅದ್ರಾವಯತ್ ಅದ್ರಾವಯತಾಂ ಅದ್ರಾವಯನ್ ಅದ್ರಾವಯಃ ಅದ್ರಾವಯತಂ ಅದ್ರಾವಯತ, ಅದ್ರಾವಯಂ ಅದ್ರಾವಯಾವ ಅದ್ರಾವಯಾಮ ದ್ರುಗತೌಣಿಜಂತಾತ್ ಅನದ್ಯತನ ಭೂತೇ ಲಜ್ ಆಸೀತ್ ಆಸ್ತಾಂ ಆಸನ್, ಆಸೀಃ ಆಸ್ತಂ ಆಸ್ತ, ಆಸಂ ಆಸ್ವ ಆಸ್ಮ ಅಸ ಭುವಿ ಪರಸ್ಮೈಪದೀ ಅನದ್ಯತನಭೂತೇ ಲಜ್ ಪ್ರಥಮ ಏಕ.

**ಕ್ರಿಯಾಪದ** - ದಿದೃಕ್ಷೇ ದೃಷ್ಟುಂ ಇಚ್ಛಾಮಿ=ನೋಡಲು ಬಯಸುತ್ತೇನೆ. ದಿದೃಕ್ಷತೇ ದಿದೃಕ್ಷೇತೇ ದಿದೃಕ್ಷಂತೇ ದಿದೃಕ್ಷಸೇ ದಿದೃಕ್ಷೇಥೇ ದಿದೃಕ್ಷಧ್ವೇ ದಿದೃಕ್ಷೇ ದಿದೃಕ್ಷಾವಹೇ ದಿದೃಕ್ಷಾಮಹೇ ದೃಶಿರ್ ಪ್ರೇಕ್ಷಣೇ, ಪ್ರೇಕ್ಷಣಾರ್ಥಕ ದೃಶ್ ಧಾತು ಸನ್ನಂತ ಲಟ್ ಉತ್ತಮ ಪುರುಷ ಏಕವಚನ ಧಾತೋಃ ಕರ್ಮಣಃ ಸಮಾನ ಕರ್ತೃಕಾದಿಚ್ಛಾಯಾಂ ವಾ ಎಂಬ ಸೂತ್ರದಿಂದ ಸನ್ ಪ್ರತ್ಯಯ ಜ್ಞಾಶ್ರುಸ್ಮೃದಶಾಂ ಸನಃ ಎಂಬ ಸೂತ್ರದಿಂದ ಆತ್ಮನೇಪದ.

**ಪ್ರಯೋಗ** - ಯೇನ ಈಶದೇವಃ ಸಾಗಸ್ತ್ವಾತ್ ಪರವಶಖನನಃ ವ್ಯಧಾಯಿ, ಯೇನ ಅಪ್ಲವೇನ ಗಂಗಾತಾರಿಣಾ ಅಭೂಯತ, ಯೇನ ಸ್ವರೀತ್ಯಾ। ವಶಿತಯವನರಾಜಾ ಅಭೂಯತ, ಯೇನ ಕ್ವಾಪಿ ವರ್ತ್ಮನಿ ಹಂತುಂಯಾತಾಃ ಚೋರಾಃ ಮಿಥಃ ಅಹನ್ಯಂತ, ಕ್ವಚಿದಪಿ ನಿಜಶಿಷ್ಯೇಣ ಚೋರಾಃ ದ್ರಾಕ್ ಅದ್ರಾವ್ಯಂತ, ಕ್ವಚಿತ್ ಸಗಣೇನ ಯೇನ ಯೋಗೇನ ಶಿಲಾಭೇನ ಅಭೂಯತ ಸಃ ಮಹೇಕ್ಷಃ ಮಯಾ ದಿದೃಕ್ಷ್ಯತೇ.

**ಭಾವಪ್ರಕಾಶಿಕಾ ವ್ಯಾಖ್ಯಾನ ಕನ್ನಡ ಅನುವಾದ** - ಶ್ರೀಮಧ್ವಸ್ಯ=ಶ್ರೀಮಧ್ವಾಚಾರ್ಯರ, ಪುನಃ=ತಿರುಗಿ, ವ್ಯಾಸಾಶ್ರಮಂ ಪ್ರತಿ=ಬದರಿಯಲ್ಲಿರುವ ವೇದವ್ಯಾಸರ ಆಶ್ರಮವನ್ನು ಕುರಿತು, ಗಮನಾಗಮನಯೋಃ=ಹೋಗಿ ಬರುವಾಗ ಕೃತಚರಿತಾನಿ=ಮಾಡಿದ ಕಾರ್ಯಗಳನ್ನು ಆಹ=ಹೇಳುತ್ತಾರೆ ಸಾಗಸ್ತ್ವಾದಿತಿ=ಸಾಗಸ್ತ್ವಾತ್ ಇತ್ಯಾದಿ ಶ್ಲೋಕದಿಂದ ಯಃ ಮಧ್ವಃ=ಯಾವ ಶ್ರೀಮಧ್ವಾಚಾರ್ಯರು ಈಶದೇವಂ ಈಶ್ವರ ದೇವನಾಮಾನಂ=ಈಶದೇವಂ ಎಂದರೆ ಈಶ್ವರದೇವ ಎಂಬ ಹೆಸರುಳ್ಳ ರಾಜಾನಂ ರಾಜನನ್ನು, ಸಾಗಸ್ತ್ವಾತ್ ಎಂದರೆ, ಆಗಸಾ ಅಪರಾಧೇನ ಸಹವರ್ತತೇ ಇತಿ ಸಾಗಾಃ= ಆಗಸಾ ಅಂದರೆ ಅಪರಾಧದಿಂದ ಕೂಡಿಕೊಂಡು ಇರುತ್ತಾನೆ ಎಂದು ವಿಗ್ರಹ ಮಾಡಿದಾಗ ಸಾಗಾಃ ಎಂದು ರೂಪವಾಗುತ್ತದೆ. ತಸ್ಯ ಭಾವಃ ತತ್ತ್ವಂ ತಸ್ಮಾತ್=ಸಾಗಸಃ=ಅಪರಾಧದಿಂದ ಕೂಡಿದವನ ಭಾವಃ=ಧರ್ಮವು, ತತ್ತ್ವಂ=ಸಾಗಸ್ತ್ವವು ತಸ್ಮಾತ್=ಆ ಸಾಗಸ್ತ್ವವೆಂಬ ಧರ್ಮದಿಂದ, ಪರವಶಖನನಂ ಎಂದರೆ ಪರವಶಂ ಸ್ವಾವಶಂ=ಪರವಶ ಎಂದರೆ ತನ್ನ ಅಧೀನವಲ್ಲದ, ಖನನಂ=ಅಗೆಯುವಿಕೆಯು, ಯಸ್ಯ ತಂ=ಯಾವನಿಗೆ ಇದೆಯೋ ಅಂತಹವನನ್ನಾಗಿ ಪರವಶಖನನಂ ಎಂಬ ಶಬ್ದದಿಂದ ಹೇಳಲ್ಪಡುವವನನ್ನಾಗಿ, ವ್ಯಧಾತ್=ಅಕಾರ್ಷೀತ್=ಮಾಡಿದರೋ.

ಶ್ರೀಮಧ್ವಃ ಬದರಿಕಾಶ್ರಮಂ ಗಚ್ಛನ್=ಶ್ರೀಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ಹೋಗುತ್ತಾ, ಮಾರ್ಗಮಧ್ಯೇ

ಕ್ವಚಿತ್=ಮಾರ್ಗಮಧ್ಯದಲ್ಲಿ ಎಲ್ಲೋ ಒಂದು ಕಡೆ, ಪಾಂಥಾನ್ ಬಲಾತ್ ಗೃಹೀತ್ವಾ=ದಾರಿಹೋಕರನ್ನು ಬಲಾತ್ಕಾರದಿಂದ ಹಿಡಿದು ತಟಾಕಖನನಂ ಕಾರಯಂತಂ=ಕೆರೆ ತೋಡಿಸುವ ಕೆಲಸವನ್ನು ಮಾಡಿಸುತ್ತಿರುವ, ಸ್ವಾತ್ಮಾನಂ ಅಪಿ=ತನ್ನನ್ನೂ ಕೂಡ, ಪಥಿ ಗಚ್ಛಂತಂ=ದಾರಿಯಲ್ಲಿ ಹೋಗುತ್ತಿರುವವನನ್ನು, ಖನನಾರ್ಥಂ ಆಕರ್ಷಂತಂ=ಕೆರೆ ತೋಡುವುದಕ್ಕೋಸ್ಕರ ಎಳೆದಾಡುತ್ತಿರುವ (ಬಲಾತ್ಕರಿಸುತ್ತಿರುವ) ಈಶ್ವರ ದೇವಾಖ್ಯಂ ದುಷ್ಟಂ ರಾಜಾನಂ=ಈಶ್ವರದೇವನೆಂಬ ದುಷ್ಟರಾಜನನ್ನು, ದೃಷ್ಟ್ವಾ=ನೋಡಿ, ಖನನ ಪ್ರಕಾರಂ=ಅಗೆಯುವ ರೀತಿಯನ್ನು, ಮಮ ಪ್ರಕಾಶಯ=ನನಗೆ ತೋರಿಸು, ಇತಿ ಉಕ್ತ್ವಾ=ಎಂದು ಹೇಳಿ, ತತ್ಪ್ರಕಾಶಾಯ ಉಪಕ್ರಾಂತಂ=ಅಗೆಯುವ ರೀತಿಯನ್ನು ತೋರಿಸುವುದಕ್ಕೆ ಪ್ರಾರಂಭಿಸಿದ, ತಂ=ಆ ಈಶ್ವರದೇವನನ್ನು, ಸ್ವಯಂ=ತಾನೇ ಅಂತಃ ಪ್ರೇರ್ಯ=ಒಳಗೆ ನಿಂತು ಪ್ರೇರಿಸಿ ನಿಶ್ಶೇಷಖನನಮಕರೋತ್=ಸಂಪೂರ್ಣವಾದ ಕೆರೆ ತೋಡುವ ಕೆಲಸವನ್ನು ಮಾಡಿ(ಸಿ)ದರು.

ಸ್ವೈಃ ಸ್ವಕೀಯೈಃ=ಸ್ವೈಃ ಅಂದರೆ ತನ್ನವರಾದ, ಶಿಷ್ಯೈಃ, ಸಹ=ಶಿಷ್ಯರೊಡನೆ, ತ್ರಿಷ್ವಾತ್ಮೀಯೇ ಸ್ವೋಸ್ತ್ರಿಯಾಂಧನೇ ಇತ್ಯಮರಃ ಸ್ವಶಬ್ದವು ಆತ್ಮೀಯ ತನ್ನವರು ಎಂಬರ್ಥದಲ್ಲಿ ಮೂರು ಲಿಂಗಗಳಲ್ಲಿಯೂ ಇದೆ, ಹಣ ಎಂಬ ಅರ್ಥದಲ್ಲಿ ಸ್ತ್ರೀಲಿಂಗ ಬಿಟ್ಟು ಉಳಿದ ಎರಡು ಲಿಂಗಗಳಲ್ಲಿ ಇದೆ ಎಂಬ ಅಮರಕೋಶ ವಚನದಂತೆ ಇಲ್ಲಿರುವ ಸ್ವಶಬ್ದವು ಸ್ವಕೀಯವಾಚಕವು (ತನ್ನವರು ಎಂದು ಅರ್ಥ) ಅಪ್ಲವಃ ಎಂಬಲ್ಲಿ ಪ್ಲವಶಬ್ದೇನ=ಪ್ಲವಶಬ್ದದಿಂದ ಪ್ರವಾಹತರಣಸಾಧನಂ ಉಚ್ಯತೇ= ಪ್ರವಾಹವನ್ನು ದಾಟುವ ಸಾಧನವು ಹೇಳಲ್ಪಡುತ್ತದೆ. ನವಿದ್ಯತೇ ಪ್ಲವಃ ನೌಃ ಯಸ್ಯ ಅಸೌ=ಪ್ಲವಃ ಅಂದರೆ ದೋಣಿಯು, ಯಾವನಿಗೇ ಇಲ್ಲವೋ ಅವನು, ಅಪ್ಲವಃ ಸನ್='ಅಪ್ಲವ' ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ಶ್ರೀಮಧ್ವಾಚಾರ್ಯರೂ ದೋಣಿ ಮುಂತಾದ ದಾಟುವ ಸಾಧನ ಉಡುಪಂತು 'ಪ್ಲವಃ ಕೋಲಃ' ಇತ್ಯಮರಃ ಉಡುಪ, ಪ್ಲವ, ಕೋಲ ಈ ಶಬ್ದಗಳು ತೆಪ್ಪ (ದೋಣಿ) ಮುಂತಾದ ದಾಟುವ ಸಾಧನಗಳನ್ನು ಹೇಳುತ್ತವೆ ಎಂದು ಅಮರಕೋಶವಿದೆ. ಗಂಗಾತಾರೀ=ಗಂಗಾಂತರತೀತಿ ಗಂಗಾತಾರೀ, ಗಂಗಾತಾರೀ ಎಂದರೆ ಗಂಗೆಯನ್ನು ಯಾವನು ದಾಟುತ್ತಾನೋ ಅವನು 'ಗಂಗಾತಾರೀ' ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ.

ಶತ್ರುಶಂಕಯಾ=ಶತ್ರುಗಳು ಬಂದಾರೆಂಬ ಸಂದೇಹದಿಂದ, ಪ್ಲವಹೀನಾಂ ಗಂಗಾಂ=ತೆಪ್ಪವಿಲ್ಲದಿರುವ ಗಂಗೆಯನ್ನು, ಸ್ವಕಟಿಭಾಗಾವಲಂಬಿಭಿಃ=ತನ್ನ ಸೊಂಟದ ಭಾಗವನ್ನು ಆಧರಿಸಿರುವ, ಶಿಷ್ಯೈಃ ಸಹ=ಶಿಷ್ಯರೊಡನೆ ಸ್ವಹಸ್ತಾಭ್ಯಾಂ=ತನ್ನ ಎರಡು ಕೈಗಳಿಂದ (ಈಜಿ) ತೀರ್ಣವಾನ್ ಇತಿಭಾವಃ=ದಾಟಿದರು ಎಂದು ಅಭಿಪ್ರಾಯ.

ಸ್ವರೀತ್ಯಾ ಎಂಬಲ್ಲಿ ಸ್ವಶಬ್ದಃ=ಸ್ವ ಎಂಬ ಶಬ್ದವು ಸಮಭಿ ವ್ಯಾಹೃತಯವನರಾಜಪರಾಮರ್ಶೀ=ವಶಿತಯವನರಾಟ್ ಎಂಬ ಶಬ್ದದ ಅರ್ಥವಾದ ಯವನರಾಜನನ್ನು (ತುರುಕರಾಜನನ್ನು) ತಿಳಿಸುತ್ತದೆ. ತಥಾಚ=ಹೀಗಿರುವಾಗ, ಸ್ವಸ್ಯ=ತ್ವರಕರಾಜಸ್ಯ= ಸ್ವರೀತ್ಯಾ ಎಂಬಲ್ಲಿ ಸ್ವ ಎಂದರೆ ತ್ವರಕರಾಜಸ್ಯ=ತುರುಕ ರಾಜನ, ರೀತ್ಯಾ ಎಂದರೆ ತದೀಯಭಾಷಯಾ ಇತ್ಯರ್ಥಃ= ತುರುಕರಭಾಷೆಯಿಂದ ಎಂದು ಅರ್ಥ. ವಶಿತಯವನರಾಟ್ ಎಂಬಲ್ಲಿ ವಶಿತಃ=ಅಂದರೆಸ್ವವಶೀಕೃತಃ=ತನಗೆ ಅಧೀನನಾಗಿ ಮಾಡಲ್ಪಟ್ಟ, ಯವನರಾಟ್=ಮ್ಲೇಂಚ್ಛರಾಜಃಯೇನ ಸಃ=ತಥಾ=ಯವನರಾಟ್ ಎಂದರೆ ಮೇಂಚ್ಛರಾಜನು ಯಾವನಿಂದ (ಅಧೀನನಾಗಿ ಮಾಡಿಕೊಳ್ಳಲ್ಪಟ್ಟನೋ) ಸಃ=ಅವನು, ತಥಾ=ವಶಿತಯವನರಾಟ್ ಎಂಬ ಶಬ್ದದಿಂದ ವಾಚ್ಯನಾಗುತ್ತಾನೆ.

ರಿಪುನೃಪವೀರಶಂಕಯಾ=ಶತ್ರುರಾಜನ ಸೈನಿಕರೆಂಬ ಸಂದೇಹದಿಂದ, ರಾಜಭಟೈಃ=ರಾಜಸೇವಕರಿಂದ, ಹನನೇಚ್ಛಯಾ= ಕೊಲ್ಲುವ ಉದ್ದೇಶದಿಂದ, ರಾಜಸಮೀಪಂ=ರಾಜನ ಬಳಿಗೆ ನೀಯಮಾನಃ=ಒಯ್ಯಲ್ಪಡುತ್ತಿರುವ ಮಧ್ವಃ=ಶ್ರೀಮಧ್ವಾಚಾರ್ಯರು, ರಾಜಾನಂ=ದೃಷ್ಟ್ವಾ=ರಾಜನನ್ನು ನೋಡಿ, ದೇಶ ಕಾಲೋಚಿತತದೀಯ ಭಾಷಯಾ=ದೇಶ ಕಾಲಗಳೆರಡಕ್ಕೂ ಯೋಗ್ಯವಾದ ತುರುಕರ ಭಾಷೆಯಿಂದ, ರಾಜ್ಞಃ=ರಾಜನಿಗೆ, ಸ್ವಸ್ಮಿನ್=ತನ್ನಲ್ಲಿ, ಪೂಜ್ಯತಾಬುದ್ಧಿಂ=ಪೂಜ್ಯತ್ವದ ತಿಳುವಳಿಕೆಯನ್ನು, ಉತ್ಪಾದ್ಯ= ಉಂಟುಮಾಡಿ, ಗತವಾನ್=ಹೊರಟು ಹೋದರು ಇತಿಭಾವಃ=ಎಂದು ಅಭಿಪ್ರಾಯವು.

ಕ್ವಚಿತ್=ಮತ್ತೆಲ್ಲೋ ಒಂದು ಕಡೆ, ವರ್ತ್ಮನಿ=ಮಾರ್ಗೇ, ವರ್ತ್ಮನಿ ಎಂದರೆ ದಾರಿಯಲ್ಲಿ, ಸಶಿಷ್ಯಂ ಸ್ವಾತ್ಮಾನಂ ಹಂತುಂ=ಶಿಷ್ಯಸಮೇತನಾದ ತನ್ನನ್ನು ಕೊಲ್ಲಲು, ಯಾತಾನ್ ಪ್ರಾಪ್ತಾನ್='ಯಾತಾನ್' ಎಂದರೆ ಪ್ರಾಪ್ತರಾದ,

ಚೋರಾನ್=ತಸ್ಕರಾನ್, ಚೋರಾನ್ ಎಂದರೆ ಕಳ್ಳರನ್ನು, ಸ್ವಯಂ=ಸ್ವಯಮೇವ, ಸ್ವಯಂ ಎಂದರೆ ತಾವೇ, ಮಿಥಃ= ಪರಸ್ಪರಂ=ಅಂದರೆ ಅನ್ಯೋನ್ಯವಾಗಿ, ಅಹನ್=ಅಘಾತಯತ್=ಕೊಲ್ಲಿಸಿದರು. ಅಹನ್=ಎಂಬುದು. ಹನಹಿಂಸಾಗತ್ಯೋಃ - ಹಿಂಸಾಗತಿ ಎಂಬ ಎರಡು ಅರ್ಥವುಳ್ಳ 'ಹನ್' ಧಾತುವಿನ, ಲಙ್=ಲಙ್ ಲಕಾರವು. ಉತ್ಪಾದ್ಯ=ಉಂಟುಮಾಡಿ, ಪರಸ್ಪರಂ=ಒಬ್ಬರನ್ನು ಇನ್ನೊಬ್ಬರಿಂದ ಘಾತಯಾಮಾಸ ಇತಿ ಭಾವಃ=ಸಾಯಿಸಿದರು ಎಂದು ತಾತ್ಪರ್ಯವು.

ಕ್ವಚಿದಪಿಪುನಃ=ಪ್ರದೇಶಾಂತರೇ, ಕ್ವಚಿದಪಿ ಪುನಃ ಎಂದರೆ ಮತ್ತೊಂದು ಪ್ರದೇಶದಲ್ಲಿಯೂ, ನಿಜ ಶಿಷ್ಯೇಣ ಎಂದರೆ ಉಪೇಂದ್ರತೀರ್ಥಾಖ್ಯಶಿಷ್ಯೇಣ=ಉಪೇಂದ್ರತೀರ್ಥರೆಂಬ ಶಿಷ್ಯರಿಂದ, ದ್ರಾಕ್=ಶೀಘ್ರಂ, ದ್ರಾಕ್ ಎಂದರೆ ಬೇಗನೆ, ಚೋರಾನ್ ಅದ್ರಾವಯತ್ ಪಲಾಯನಮಕಾರಯತ್=ಚೋರಾನ್ ಅದ್ರಾವಯತ್ ಅಂದರೆ ಕಳ್ಳರನ್ನು ಓಡಿಸಿದರು. ಅದ್ರಾವಯತ್ ಎಂಬಲ್ಲಿ ದ್ರುಗತೌ ಗತ್ಯರ್ಥಕದ್ರು ಧಾತು (ಣಿಜಂತಾತ್ ಲಙ್)

ಪ್ರದೇಶಾಂತರೇ=ಮತ್ತೊಂದು ಪ್ರದೇಶದಲ್ಲಿ, ಸರ್ವಾನ್‌ಹಂತುಂ ಆಗತಾನ್=ಎಲ್ಲರನ್ನೂ ಕೊಲ್ಲಲು ಬಂದಿದ್ದ ಶತಸಂಖ್ಯಾನ್ ಚೋರಾನ್‌ದೃಷ್ಟ್ವಾ=ನೂರು ಸಂಖ್ಯೆಯ ಕಳ್ಳರನ್ನು ಕಂಡು ಮಧ್ವಪ್ರಿಯಶಿಷ್ಯ=ಶ್ರೀಮಧ್ವಾಚಾರ್ಯರ ಪ್ರೀತಿಯ ಶಿಷ್ಯರಾದ, ಉಪೇಂದ್ರತೀರ್ಥರು, ಕ್ವಚಿತ್=ಅಲ್ಲಿಯೇ ಎಲ್ಲೋ ಮಧ್ವಾಜ್ಞಯಾ ಶ್ರೀಮಧ್ವಾಚಾರ್ಯರ ಆಜ್ಞೆಯಿಂದ, ತಾನ್-ಅಭಿದ್ರುತ್ಯ=ಅವರ ಎದುರಾಗಿ ಹೋಗಿ, ಚೋರನಾಥಹಸ್ತಾತ್=ಕಳ್ಳರ ಯಜಮಾನನ ಕೈಯಿಂದ, ಖಡ್ಗಂ ಆಚ್ಛಿದ್ಯ= ಖಡ್ಗವನ್ನು ಕಿತ್ತುಕೊಂಡು, ತಚ್ಛಿರಃ ಛಿತ್ವಾ=ಅವನ ತಲೆಯನ್ನು ಕಡಿದು, ತತ್ಪರಿವಾರಾನ್ ಅದ್ರಾವಯತ್=ಕಳ್ಳರ ಯಜಮಾನನ ಪರಿವಾರವನ್ನು ಓಡಿಸಿದರು. ಇತಿ ಭಾವಃ=ಎಂದು ಅಭಿಪ್ರಾಯ.

ಕ್ವಚಿದಪಿ ಪುನಃ ಅಂದರೆ ಪ್ರದೇಶಾಂತರೇಪಿ=ಮತ್ತೊಂದು ಪ್ರದೇಶದಲ್ಲಿಯೂ ಕೂಡ, ಅನ್ಯಾನ್ ಚೋರಾನ್ (ದೃಷ್ಟ್ವಾ ಇತಿ ಶೇಷಃ=ಬೇರೆ ಕಳ್ಳರನ್ನು, ದೃಷ್ಟ್ವಾ=ನೋಡಿ ಎಂದು ದೃಷ್ಟ್ವಾ ಶಬ್ದವನ್ನು ಸೇರಿಸಿಕೊಳ್ಳಬೇಕು.

ಸಗಣಃ=ಅಂದರೆ ಸಶಿಷ್ಯಸಂಘಃ=ಶಿಷ್ಯ ಸಮೂಹ ಸಹಿತರಾದ (ಆಚಾರ್ಯರು) ಯೋಗೇನ ಅಂದರೆ=ಸಾಮರ್ಥ್ಯ ವಿಶೇಷೇಣ=ಸಾಮರ್ಥ್ಯ ವಿಶೇಷದಿಂದ, ಶಿಲಾಭಃ=ಪಾಷಾಣತುಲ್ಯಃ=ಶಿಲಾಭಃ ಅಂದರೆ ಬಂಡೆಕಲ್ಲಿಗೆ ಸಮಾನರಾಗಿ, ಆಸೀತ್=ಆದರು 'ಆಸೀತ್' ಎಂಬಲ್ಲಿ ಅಸ್ತಿಸಿಚೋಽಪೃಕ್ತೇ ವಿದ್ಯಮಾನಾತ್ ಸಿಚಃ ಅಸ್ತೇಶ್ಚ ಪರಸ್ಯ ಅಪೃಕ್ತಸ್ಯ ಹಲಃ ಈಟ್ ಆಗಮಃ ಸ್ಯಾತ್ ಲುಙ್‌ಲಕಾರದಲ್ಲಿ ವಿಕರಣ ಪ್ರತ್ಯಯ ಸ್ಥಾನದಲ್ಲಿ ಬರುವ ಸಿಚ್ (ಸ್) ಎಲ್ಲಿ ಉಳಿದಿರುತ್ತದೆಯೋ (ಲೋಪ ಹೊಂದಿರುವುದಿಲ್ಲವೋ, ಅದರ ಮುಂದಿರುವ ಅಪೃಕ್ತ ಅಂದರೆ ಒಂದೇ ಅಲ್ (ಅಕ್ಷರವುಳ್ಳ) ಪ್ರತ್ಯಯದ ಹಿಂದೆ ಈಟ್ (ಈ) ಎಂಬ ಆಗಮವು ಬರುತ್ತದೆ ಎಂಬ ಅರ್ಥದ ಸೂತ್ರದಿಂದ (ಆಸ್+ಈತ್) ಆಸೀತ್ ಎಂಬಲ್ಲಿ ಈಟ್ ಆಗಮ. ಮಹೇಕ್ಷಂ ಎಂಬಲ್ಲಿ ಮಹತೀ=ಮಹತ್ತಾದ, ಈಕ್ಷಾ=ಎಂದರೆ ಬುದ್ಧಿಯು, ಯಸ್ಯತಂ=ಯಾರಿಗೆ ಇದೆಯೋ, ಅಂತಹ ಪೂರ್ಣಪ್ರಜ್ಞಂ ಇತ್ಯರ್ಥಃ=ಮಹೇಕ್ಷಂ ಅಂದರೆ ಪೂರ್ಣಪ್ರಜ್ಞರನ್ನು ಎಂದು ಅರ್ಥ. ದಿದೃಕ್ಷೇ=ದ್ರಷ್ಟುಮಿಚ್ಛಾಮಿ, ದಿದೃಕ್ಷೇ ಅಂದರೆ ನೋಡಲು ಆಸೆ ಪಡುತ್ತೇನೆ ಎಂದು ಅರ್ಥ. ದಿದೃಕ್ಷೇ ಎಂಬಲ್ಲಿ ಜ್ಞಾಶ್ರುಸ್ಮೃದೃಶಾಂ ಸನಃ=ಇತಿ ಆತ್ಮನೇಪದಂ, ಸನ್ನಂತವಾದ ಜ್ಞಾ, ಸ್ಮೃ, ದೃಶ್ ಧಾತುಗಳಿಗೆ ಆತ್ಮನೇಪದ ಪ್ರತ್ಯಯ ಬರುತ್ತದೆ ಎಂಬ ಸೂತ್ರದಿಂದ, ಆತ್ಮನೇಪದ ಪ್ರತ್ಯಯವು ಬಂದು ದಿದೃಕ್ಷೇ ಎಂದಾಗಿದೆ.

**ಅವತರಣಿಕಾ** - ಆಚಾರ್ಯರು ಬದರಿಕಾಶ್ರಮದಿಂದ ಹಿಂತಿರುಗಿ ಬರುವಾಗ ಮಾಡಿದ ಅದ್ಭುತ ಕಾರ್ಯಗಳನ್ನು ಹೇಳುತ್ತಾರೆ.

**ದೈತ್ಯವ್ಯಾಘ್ರೋಪಘಾತಿ ನರಸಖಕರತೋ ಲಬ್ಧಗೌರೋಪಲಾರ್ಚೋ**
**ವ್ಯಾಸಾಜ್ಞಾಹೃತ್ ಸುತರ್ತಾ ಲಘುಸುರಸರಿತೋ ವಾರಿಸಂಸ್ತಂಭಯೋಗಾತ್।**
**ಭಿತ್ವಾ ಭೂಮಿಂದ್ಯುನದ್ಯಾ ಮಠಮುಪಗತಯಾ ವಂದಿತೋ ಮೂರ್ತಿಮತ್ಯಾ**
**ಯೂನೋನೇಕಾನ್ ವಿಜಿಗ್ಯೇ ಯುಗಪದುಪಗತಾನ್ ಯಸ್ಸಲೀಲಂತಮೀಡೇ ।।೨೦।।**

**ಗೂಢಭಾವ ಪ್ರಕಾಶಿಕಾ ವ್ಯಾಖ್ಯಾನ** - ದೈತ್ಯೇತಿ ಯಃ ಮಧ್ವಃ ದೈತ್ಯವ್ಯಾಘ್ರೋಪಘಾತೀ ದೈತ್ಯವ್ಯಾಘ್ರಂ ದೈತ್ಯಶ್ರೇಷ್ಠಂ ಉಪಹಂತೀತಿ ತಥಾ, ಹಿಮಾಚಲಸಮೀಪೇ ಸಾಲಗ್ರಾಮಪೇಟಿಕಾಂ ಗೃಹೀತ್ವಾ ಪುರತೋ ಗಚ್ಛಂತಂ ಸತ್ಯತೀರ್ಥಂ ಹಂತುಂ ಆಗತಂ ವ್ಯಾಘ್ರಾಕಾರಂ ಕಂಚನ ದೈತ್ಯವರಂ ಸ್ವಪಾಣಿನಾ ಮಧ್ವೋ ಹತವಾನಿತಿ ಭಾವಃ।

ನರಸಖಕರತಃ ನರಸ್ಯಸಖಾ (ನರಸಖಃ) ನರನಾರಾಯಣಃ ಇತ್ಯರ್ಥಃ, ತಸ್ಯಕರಾತ್ ಲಬ್ಧಗೌರೋಪಲಾರ್ಚಃ, ಲಬ್ಧಾಃ ಪ್ರಾಪ್ತಾಃ ಗೌರಾಃ (ಗೌರ್ಯಃ) ಶುಕ್ಲಾಃ ಉಪಲಾರ್ಚಾಃ ಪಾಷಾಣಪ್ರತಿಮಾಃ ಯೇನ ಸಃ ತಥಾ, ಪೂಜಾಪ್ರತಿಮಯೋರುಪಲಃ ಇತ್ಯಮರಃ ಬದರಿಕಾಶ್ರಮವಾಸೀ ನಾರಾಯಣಃ ಮಧ್ವಾಯ ಅನೇಕಾಃ ಶಿಲಾಮಯೀಃ ಅತ್ಯಂತಂ ಶುಭ್ರಾಃ ಪ್ರತಿಮಾಃ ದತ್ತವಾನ್ ಅಷ್ಟೌ ಶಿಲಾಮುಷ್ಟೀಃ ದತ್ತವಾನ್ ಇತಿ ಲೋಕಪ್ರವಾದಃ

ವ್ಯಾಸಾಜ್ಞಾಹೃತ್ ವ್ಯಾಸಸ್ಯ ಆಜ್ಞಾಂ ಮಹಾಭಾರತತಾತ್ಪರ್ಯನಿರ್ಣಯಂ ಕುರು ಇತ್ಯನುಜ್ಞಾಂ ಹರತಿ ಬಿಭರ್ತಿ ಇತಿ ಸಃ ತಥಾ। ವ್ಯಾಸಾಜ್ಞಾಮಾದಾಯ ಗಚ್ಛತೋ ಮಧ್ವಸ್ಯ ಚರಿತಾನಿ ಆಹ ಸುರಸರಿತಃ ಇತ್ಯಾದಿನಾ। ಸುರಸರಿತಃ ದೇವಾನಾಂ ಸರಿತಃ ನದ್ಯಾಃ, ಕರ್ಮಣಿ ಷಷ್ಠೀ, ವಾರಿಸಂಸ್ತಂಭಯೋಗಾತ್ ವಾರಿಣಃ ಜಲಸ್ಯ ಸಂಸ್ತಂಭನರೂಪೋಪಾಯಾತ್। ಯೋಗಃ ಸನ್ನಹನೋಪಾಯೇತ್ಯಭಿಧಾನಾತ್। ಲಘುಯಥಾ ತಥಾ ಸುತರ್ತಾ, ಅನಾಯಾಸೇನ ತೀರ್ಣವಾನ್। ಶತ್ರುಶಂಕಯಾ ಅಪ್ಲವೋಪೇತಾಂ ಗಂಗಾಂ ಜಲಸಂಸ್ತಂಭನಂ ಕೃತ್ವಾ ತೀರ್ಣವಾನಿತಿ ಭಾವಃ

ಭೂಮಿಂ ಭಿತ್ವಾ ವಿದಾರ್ಯ, ಮಠಂ ಉಪಗತಯಾ ಮೂರ್ತಿಮತ್ಯಾ ವಿಗ್ರಹವತ್ಯಾ ದ್ಯುನದ್ಯಾ ಗಂಗಯಾ ವಂದಿತಃ ನತಃ। ಶ್ರೀಮಧ್ವಃ ಹಸ್ತಿನಪುರಗತಮಠೇ ಸಂಕಲ್ಪಾರ್ಥಂ ಯದಾತಸ್ಥೌ ತದಾ ಗಂಗಾ ತಂ ಸೇವಿತುಂ ಭೂಮಿಂ ಭಿತ್ವಾ ಲಾವಣ್ಯಾದ್ಯುಪೇತವಿಗ್ರಹಂ ಧೃತ್ವಾ, ಸರ್ವೇಷಾಂ ಪುರತಃ ಆಗತ್ಯ ಮಧ್ವಂ ನತವತೀತ್ಯರ್ಥಃ। ಯುಗಪದುಪಗತಾನ್ ತರುಣಾನ್ ಅನೇಕಾನ್ ಅನೇಕಸಂಖ್ಯೋಪೇತಾನ್ ವಿಜಿಗ್ಯೇ ಜಿತವಾನ್, ವಿಪರಾಭ್ಯಾಂಜೇಃ ಇತಾತ್ಮನೇಪದಮ್। ಸನ್‌ಲಿಟೋರ್ಜೇಃ ಇತಿಕುತ್ವಂ। ಬಲಗರ್ವಿತಾನ್ ಸ್ವಶಿಷ್ಯಾನ್ ದೃಷ್ಟ್ವಾ ಕದಾಚಿತ್ ತೈಃ ಪಂಚದಶಭಿಃ ಯುವಭಿಃ ಯುಗಪದೇವ ನಿರ್ಯುಧ್ಯ ಜಿತವಾನ್ ಇತಿಭಾವಃ। ತಂ ಮಧ್ವಂ ಈಡೇ (ಸ್ತೌಮಿ) ಈಡಸ್ತುತೌ ಲಟ್ ॥೨೦॥

**ಪದಚ್ಛೇದ** - ದೈತ್ಯವ್ಯಾಘ್ರೋಪಘಾತೀ, ನರಸಖಕರತಃ, ಲಬ್ಧಗೌರೋಪಲಾರ್ಚಃ, ವ್ಯಾಸಾಜ್ಞಾಹೃತ್ ಸುತರ್ತಾ, ಲಘು, ಸುರಸರಿತಃ, ವಾರಿಸಂಸ್ತಂಭಯೋಗಾತ್, ಭಿತ್ವಾ, ಭೂಮಿಂ ದ್ಯುನದ್ಯಾ, ಮಠಂ, ಉಪಗತಯಾ, ವಂದಿತಃ, ಮೂರ್ತಿಮತ್ಯಾ, ಯೂನಃ, ಅನೇಕಾನ್, ವಿಜಿಗ್ಯೇ, ಯುಗಪತ್, ಉಪಗತಾನ್, ಯಃ, ಸಲೀಲಂ, ತಂ, ಈಡೇ.

**ಅನ್ವಯ** - ದೈತ್ಯವ್ಯಾಘ್ರೋಪಘಾತೀ, ನರಸಖಕರತಃ ಲಬ್ಧಗೌರೋಪಲಾರ್ಚಃ, ವ್ಯಾಸಾಜ್ಞಾಹೃತ್, ಸುರಸರಿತಃ ವಾರಿಸಂಸ್ತಂಭಯೋಗಾತ್ ಲಘುಸುತರ್ತಾ, ಭೂಮಿಂ ಭಿತ್ವಾ ಮಠಂ ಉಪಗತಯಾ ಮೂರ್ತಿಮತ್ಯಾ ದ್ಯುನದ್ಯಾ ವಂದಿತಃ ಯಃ ಯುಗಪದುಪಗತಾನ್ ಅನೇಕಾನ್ ಯೂನಃ ಸಲೀಲಂ ವಿಜಿಗ್ಯೇ, ತಂ ಈಡೇ.

**ಅನ್ವಯಾರ್ಥ** - ದೈತ್ಯವ್ಯಾಘ್ರೋಪಘಾತೀ=ಹುಲಿಯ ರೂಪದಿಂದ ಬಂದ ದೈತ್ಯಶ್ರೇಷ್ಠನನ್ನು ಘಾತಿಸಿದ, ನರಸಖ=ನರನೆಂಬ ಮುನಿಯ ಮಿತ್ರನಾದ ಶ್ರೀನಾರಾಯಣಮುನಿಯ, ಕರತಃ=ಕೈಯಿಂದ, ಲಬ್ಧ=ಪ್ರಾಪ್ತವಾದ, ಗೌರ=ಬಿಳಿಯ ಬಣ್ಣದ, ಉಪಲಾರ್ಚಃ=ಕಲ್ಲಿನ ಪ್ರತಿಮೆಯುಳ್ಳ (ವ್ಯಾಸಮುಷ್ಟಿಯುಳ್ಳ) ವ್ಯಾಸಾಜ್ಞಾಹೃತ್=ಶ್ರೀವೇದವ್ಯಾಸರ ಆಜ್ಞೆಯನ್ನು ಹೃದಯದಲ್ಲಿ ಧರಿಸಿದ, ಸುರಸರಿತಃ=ದೇವಗಂಗಾನದಿಯ, ವಾರಿಸಂಸ್ತಂಭಯೋಗಾತ್=ನೀರಿನ ಸ್ತಂಭನ (ಶಿಲೆಯಂತೆ ಘನೀಭಾವವನ್ನು ಮಾಡುವಿಕೆ) ಎಂಬ ಉಪಾಯದಿಂದ, ಲಘು=ಶೀಘ್ರವಾಗಿ, ಸುತರ್ತಾ=ಸುಖವಾಗಿ ದಾಟಿದ, ಭೂಮಿಂ=ನೆಲವನ್ನು, ಭಿತ್ವಾ=ಸೀಳಿ, ಮಠಂ=ಮಠವನ್ನು ಕುರಿತು, ಉಪಗತಯಾ=ಸಮೀಪಕ್ಕೆ ಬಂದಿರುವ, ಮೂರ್ತಿಮತ್ಯಾ=(ಮಾನವರಿಂದ ದೃಶ್ಯವಾದ) ಶರೀರವುಳ್ಳ, ದ್ಯುನದ್ಯಾ=ದೇವಲೋಕದ ಗಂಗೆಯಿಂದ ವಂದಿತಃ ನಮಸ್ಕರಿಸಲ್ಪಟ್ಟ, ಯಃ=ಯಾರು, ಯುಗಪತ್=ಏಕಕಾಲದಲ್ಲಿ, ಉಪಗತಾನ್=ಪ್ರಾಪ್ತರಾದ, ಅನೇಕಾನ್=ಬಹುಸಂಖ್ಯೆಯುಳ್ಳ, ಯೂನಃ=ಯುವಕರನ್ನು ಸಲೀಲಂ=ಅನಾಯಾಸವಾಗಿ, ವಿಜಿಗ್ಯೇ=ಜಯಿಸಿದರೋ, ತಂ=ಅಂತಹ ಮಹಿಮೋಪೇತರಾದ

ಶ್ರೀಮಧ್ವಾಚಾರ್ಯರನ್ನು, ಈಡೇ=ಸ್ತುತಿಸುವೆನು.

**ತಾತ್ಪರ್ಯ** - ಈ ೨೦ನೆಯ ಶ್ಲೋಕದಿಂದ, ಶ್ರೀಸುಮಧ್ವ ವಿಜಯದ ೧೧ನೆಯ ಸರ್ಗದ ೨೫ನೆಯ ಶ್ಲೋಕದಿಂದ ೪೧ನೇ ಶ್ಲೋಕದವರೆಗಿನ ಅರ್ಥವಿಶೇಷವನ್ನು ಸಂಗ್ರಹಿಸಿರುವರು.

ಆಚಾರ್ಯರು ಹಿಮಾಲಯ ಪರ್ವತದ ದಾರಿಯಾಗಿ ಅನೇಕ ಮಂದಿ ಶಿಷ್ಯರೊಡನೆ ಹೋಗುತ್ತಿದ್ದರು. ಆಗ ಶಾಲಿಗ್ರಾಮ ಪ್ರತಿಮಾದಿಗಳಿಂದ ಕೂಡಿದ ದೇವರ ಪೆಟ್ಟಿಗೆಯನ್ನು ಸತ್ಯತೀರ್ಥರು ತೆಗೆದುಕೊಂಡು ಮುಂದೆ ಹೋಗುತ್ತಿದ್ದರು. ಒಬ್ಬ ದೈತ್ಯನು ಅವರ ಮೇಲೆ ಆಕ್ರಮಿಸಿ ಕೊಲ್ಲಲು, ಹುಲಿಯ ಆಕಾರವನ್ನು ಸ್ವೀಕರಿಸಿ ಬಂದು ಅವರ ಮೇಲೆ ಎರಗಿದನು. ಆ ದೈತ್ಯವ್ಯಾಘ್ರನನ್ನು ಆಚಾರ್ಯರು ಕೈಯ ಒಂದೇಟಿನಿಂದಲೇ, ಆ ಹುಲಿಯ ಕಪಾಳಕ್ಕೆ ಹೊಡೆದು ನಿಗ್ರಹಿಸಿದರು.

ಆಚಾರ್ಯರು ಉತ್ತರಬದರಿಗೆ ಹೋದರು. ಅಲ್ಲಿ ಶ್ರೀಮನ್ನಾರಾಯಣ ಮುನಿಗಳು ಅವರಿಂದ ಅಭಿನ್ನರಾದ ಶ್ರೀವೇದವ್ಯಾಸರು ತಮ್ಮನ್ನು ಅಗಲಿ ಹೋಗಲು ಇಷ್ಟಪಡದಿರುವ ಶ್ರೀಮಧ್ವರಿಗೆ ಶುದ್ಧಶಿಲಾಮಯವಾದ ಮರಳಿನ ಎಂಟು ಮುಷ್ಟಿಗಳನ್ನು ಕೊಟ್ಟರು. (ಅನೇಕವಾದ ಭಗವಂತನ ಶಾಲಿಗ್ರಾಮ ಶಿಲಾಸದೃಶವಾದ ವ್ಯಾಸಮುಷ್ಟಿಗಳನ್ನು ಕೊಟ್ಟರು) ಅವರು ಮಹಾಭಾರತತಾತ್ಪರ್ಯನಿರ್ಣಯವನ್ನು ಬರೆಯುವಂತೆ ವ್ಯಾಸರು ನೀಡಿದ ಆಜ್ಞೆಯನ್ನು ಶಿರಸಾಮಾನ್ಯ ಮಾಡಿ ಹೃದಯದಲ್ಲಿ ಧರಿಸಿ ಅಲ್ಲಿಂದ ಹಿಂದಿರುಗಿದರು. ಹಿಂದಿರುಗಿ ಬರುವಾಗ ಗಂಗಾನದಿ ನೀರನ್ನು ಜಲಸ್ತಂಭನ ಯೋಗದಿಂದ ಸ್ತಂಭಿಸಿ ಸೇತುವೆಯಂತೆ ಘನೀಭೂತವಾಗಿ ಮಾಡಿ ತಾವೊಬ್ಬರೇ ದಾಟಿ ಬಂದರು. ಅನಂತರ ತಮ್ಮ ಶಿಷ್ಯರನ್ನೂ ದಾಟಿಸಿದರು. ಅವರು ಹಸ್ತಿನಾವತಿಯ ಮಠದಲ್ಲಿ ಚಾತುರ್ಮಾಸ್ಯಕ್ಕಾಗಿ ಕುಳಿತಿದ್ದಾಗ ಗಂಗಾದೇವಿಯು ನೆಲವನ್ನು ಸೀಳಿ ಮಠದವರೆಗೆ ಹರಿದುಬಂದು ಅಲ್ಲಿಂದ ಒಂದು ವೃಕ್ಷದ ಕೊಂಬೆಯಿಂದಲೂ ಹರಿದು ದಿವ್ಯಸ್ತ್ರೀರೂಪದಿಂದ ಕಾಣಿಸಿಕೊಂಡಳು. ಆಚಾರ್ಯರು ಅವಳ ವಂದನೆಯನ್ನು ಸ್ವೀಕರಿಸಿದರು. ಅವರು ಕಾಶಿಯಲ್ಲಿರುವಾಗ ತಾವೇ ಬಲಾಢ್ಯರೆಂಬ ಅಭಿಮಾನವುಳ್ಳ ದೃಢಕಾಯರಾದ ಹತ್ತಾರು ತರುಣ ಶಿಷ್ಯರು ಅವರ ಆಣತಿಯಂತೆ ಏಕಕಾಲದಲ್ಲಿ ತನ್ನ ಮೇಲೆ ಬಂದು ಎರಗಿದರೂ ಅವರೆಲ್ಲರನ್ನೂ ಲೀಲೆಯಿಂದಲೇ ಸೋಲಿಸಿದರು. ಇಂತಹ ಶ್ರೀಮನ್ಮಧ್ವಮುನಿಯನ್ನು ನಾನು ಸ್ತುತಿಸುತ್ತೇನೆ.

**ವಿಗ್ರಹ** - **ದೈತ್ಯಃ ವ್ಯಾಘ್ರ ಇವ ದೈತ್ಯವ್ಯಾಘ್ರಃ**, (ದೈತ್ಯ ಏವ ವ್ಯಾಘ್ರಃ ದೈತ್ಯವ್ಯಾಘ್ರಃ) ದೈತ್ಯ ವ್ಯಾಘ್ರಂ **ಉಪಹಂತೀತಿ ದೈತ್ಯವ್ಯಾಘ್ರೋಪಘಾತೀ, ನರಸ್ಯಸಖಾ ನರಸಖಃ, ನರಸಖಸ್ಯಕರಃ ನರಸಖಕರಃ, ನರಸಖಕರಾತ್ ಇತಿ ನರಸಖಕರತಃ, ಉಪಲಸ್ಯ ಅರ್ಚಾಃ ಉಪಲಾರ್ಚಾಃ ಗೌರ್ಯಶ್ಚ ತಾಃ ಉಪಲಾರ್ಚಾಶ್ಚ ಗೌರೋಪಲಾರ್ಚಾಃ, ಲಬ್ಧಾಃ ಗೌರೋಪಲಾರ್ಚಾಃ ಯೇನ ಸಃ ಲಬ್ಧಗೌರೋಪಲಾರ್ಚಃ**, ವ್ಯಾಸಸ್ಯ ಆಜ್ಞಾ ವ್ಯಾಸಾಜ್ಞಾ, ವ್ಯಾಸಾಜ್ಞಾಂ ಹರತೀತಿ ವ್ಯಾಸಾಜ್ಞಾಹೃತ್, ಸುಶೋಭನಂ ಯಥಾಭವತಿ ತಥಾ ತರ್ತಾ ಸುತರ್ತಾ, ಸುರಾಣಾಂ ಸರಿತ್ ಸುರಸರಿತ್, ತಸ್ಯಾಃ, ವಾರಿಣಃ ಸಂಸ್ತಂಭಃ ವಾರಿಸಂಸ್ತಂಭಃ ತಸ್ಮಾತ್, ದಿವಃ ನದೀ ದ್ಯುನದೀ ತಯಾ, ಮೂರ್ತಿಃ ಅಸ್ಯಾಃ ಅಸ್ತೀತಿ ಮೂರ್ತಿಮತೀ ತಯಾ, ನ ಏಕೇ ಅನೇಕೇ ತಾನ್, ಲೀಲಯಾ ಸಹಿತಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ ಸಲೀಲಂ,

**ಕ್ರಿಯಾಪದ** - ವಿ+ಜಿಗ್ಯೇ ಜಿಗ್ಯಾತೇ ಜಿಗ್ಯಿರೇ, ಜಿಗ್ಯಿಷೇ ಜಿಗ್ಯಾಥೇ ಜಿಗ್ಯಿಢ್ವೇ, ಜಿಗ್ಯೇ ಜಿಗ್ಯಿವಹೇ ಜಿಗ್ಯಿಮಹೇ, ಜಿಅಭಿಭವೇ ವಿಉಪಸರ್ಗ, ಸಕರ್ಮಕ ಆತ್ಮನೇಪದೀ ಲಿಟ್ ಪ್ರಥಮ ಪುರುಷ ಏಕವಚನ, ವಿಪರಾಭ್ಯಾಂಜೇಃ' ಎಂಬ ಸೂತ್ರದಿಂದ ವಿಎಂಬ ಉಪಸರ್ಗವಿದ್ದಾಗ ಆತ್ಮನೇ ಪದ.

ಈಟ್ಟೇ ಈಡಾತೇ ಈಡತೇ, ಈಡಿಷೇ ಈಡಾಥೇ ಈಡಿಧ್ವೇ ಈಡೇ ಈಡ್ವಹೇ ಈಡ್ಮಹೇ. ಈಡಸ್ತುತೌ ಸಕರ್ಮಕಸೇಟ್ ಆತ್ಮನೇ ಪದೀ to praise ವರ್ತಮಾನೇ ಲಟ್, ಉತ್ತಮಪುರುಷ ಏಕವಚನ.

**ಪ್ರಯೋಗ** - ದೈತ್ಯವ್ಯಾಘ್ರೋಪಘಾತಿನಾ, ನರಸಖಕರತಃ ಲಬ್ಧಗೌರೋಪಲಾರ್ಚೇನ, **ವ್ಯಾಸಾಜ್ಞಾಭೃತಾ,** ಸುರಸರಿತಃ ವಾರಿಸಂಸ್ತಂಭಯೋಗಾತ್ ಸುತರ್ತ್ರಾ, ಭೂಮಿಂ ಭಿತ್ವಾ ಮಠಂ ಉಪಗತಯಾ **ಮೂರ್ತಿಮತ್ಯಾ** ದ್ಯುನದ್ಯಾ ವಂದಿತೇನ ಯೇನ, ಯುಗಪತ್ ಉಪಗತಾಃ ಅನೇಕೇ ಯುವಾನಃ ಸಲೀಲಂ ವಿಜಿಗ್ಯಿರೇ, **ಸಃ ಮಯಾ** ಈಡ್ಯತೇ.

## ಗೂಢಭಾವ ವ್ಯಾಖ್ಯಾನದ ಪದ-ಪದಾರ್ಥಗಳ ಭಾಷಾವ್ಯಾಖ್ಯಾನ

ಯಃಮಧ್ವಃ=ಯಾವ ಶ್ರೀಮಧ್ವಾಚಾರ್ಯರು, ದೈತ್ಯವ್ಯಾಘ್ರೋಪಘಾತೀ=ದೈತ್ಯ ಶ್ರೇಷ್ಠಂ ಉಪಹಂತೀತಿ ತಥಾ= ದೈತ್ಯವ್ಯಾಘ್ರೋಪಘಾತೀ ಎಂದರೆ ದೈತ್ಯ ಶ್ರೇಷ್ಠನನ್ನು ನಿಗ್ರಹಿಸಿರುತ್ತಾರೋ ಆದುದರಿಂದ ದೈತ್ಯವ್ಯಾಘ್ರೋಪಘಾತೀ ಎಂಬ ವಿಶೇಷಣವನ್ನು ಹೊಂದಿರುತ್ತಾರೋ ಅಂತಹವರು.

ಹಿಮಾಚಲ ಸಮೀಪೇ=ಹಿಮಾಲಯ ಪರ್ವತ ಸಮೀಪದಲ್ಲಿ, ಸಾಲಗ್ರಾಮಪೇಟಿಕಾಂ=ಸಾಲಗ್ರಾಮದ ಪೆಟ್ಟಿಗೆಯನ್ನು, ಗೃಹೀತ್ವಾ=ಹಿಡಿದುಕೊಂಡು ಪುರತಃ=ಮುಂದುಗಡೆ, ಗಚ್ಛಂತಂ=ಹೋಗುತ್ತಿರುವ, ಸತ್ಯತೀರ್ಥಂ=ಸತ್ಯತೀರ್ಥರನ್ನು, ಹಂತುಂ ಆಗತಂ=ಕೊಲ್ಲಲು ಬಂದಿರುವ, ವ್ಯಾಘ್ರಾಕಾರಂ=ಹುಲಿಯ ಆಕಾರವುಳ್ಳ, ಕಂಚನ ದೈತ್ಯವರಂ=ಯಾವನೋ ಒಬ್ಬ ದೈತ್ಯಶ್ರೇಷ್ಠನನ್ನು, ಸ್ವಪಾಣಿನಾ=ತಮ್ಮ ಕೈಯಿಂದ, ಮಧ್ವಃ=ಶ್ರೀಮಧ್ವಾಚಾರ್ಯರು, ಹತವಾನ್=ನಿಗ್ರಹಿಸಿದರು. ಇತಿ ಭಾವಃ=ಎಂದು ಅಭಿಪ್ರಾಯ.

ನರಸಖಕರತಃ, ಎಂಬಲ್ಲಿ ನರಸ್ಯ ಸಖಾ=ನರನಾಮಕನಾದ ಶೇಷಾವತಾರನಾದ ಮುನಿಯ ಸ್ನೇಹಿತನಾದ, ನರಸಖಃ=ನರಸಖ ಎಂದು ಹೇಳಲ್ಪಡುವ, ನಾರಾಯಣಃ=(ನರ) ನಾರಾಯಣ ಮುನಿಯು ಎಂದು ಅರ್ಥ. ತಸ್ಯ=ಆ ನಾರಾಯಣ ಮುನಿಯ, ಕರಾತ್=ಕೈಯಿಂದ, ಲಬ್ಧಗೌರೋಪಲಾರ್ಚಃ ಎಂದರೆ, ಲಬ್ಧಾಃ ಪ್ರಾಪ್ತಾಃ=ಲಬ್ಧಾಃ **ಎಂದರೆ** ಹೊಂದಲ್ಪಟ್ಟ, ಗೌರಾಃ (ಗೌರ್ಯಃ) ಶುಕ್ಲಾಃ=ಬೆಳ್ಳಗಿರುವ (ಶುದ್ಧವಾದ) ಉಪಲಾರ್ಚಾಃ ಎಂದರೆ, ಪಾಷಾಣ **ಪ್ರತಿಮಾಃ=** ಶಿಲಾತ್ಮಕಪ್ರತಿಮೆಗಳು, ಯೇನಸಃ=ಯಾವನಿಂದ ಹೊಂದಲ್ಪಟ್ಟಿವೆಯೋ ಸಃ=ಅವನು, ತಥಾ=ಲಬ್ಧಗೌರೋಪ**ಲಾರ್ಚಃ** ಎಂಬ ಪದದಿಂದ ವಾಚ್ಯನಾದ, (ಪೂಜಾಪ್ರತಿಮಯೋಃ ಉಪಲಃ ಇತ್ಯಮರಃ=ಪೂಜಾ ಪ್ರತಿಮೆಗಳಲ್ಲಿ ಉಪಲ ಎಂಬ ಶಬ್ದವಿದೆ ಎಂದು ಅಮರ) ಬದರಿಕಾಶ್ರಮವಾಸೀ=ಬದರಿಕಾಶ್ರಮದಲ್ಲಿರುವ, ನಾರಾಯಣಃ=ನಾರಾಯಣ **ಮುನಿಗಳು,** ಮಧ್ವಾಯ=ಶ್ರೀಮಧ್ವಾಚಾರ್ಯರಿಗೆ, ಅನೇಕಾಃ=ಬಹಳವಾದ, ಶಿಲಾಮಯೀಃ=ಕಲ್ಲಿನ ಸ್ವರೂಪದಲ್ಲಿರು**ವ, ಅತ್ಯಂತಂ** ಶುಭ್ರಾಃ=ಬಹಳ ಶುದ್ಧವಾದ, ಪ್ರತಿಮಾಃ=ಪ್ರತಿಮೆಗಳನ್ನು ದತ್ತವಾನ್=ಕೊಟ್ಟರು. ಅಷ್ಟೌ=ಎಂಟು ಶಿಲಾ**ಮುಷ್ಟೀಃ=ಮರಳಿನ** ರೂಪದಲ್ಲಿರುವ ಕಲ್ಲಿನ ಮುಷ್ಟಿಗಳನ್ನು, ದತ್ತವಾನ್ ಇತಿ ಕೊಟ್ಟರೆಂದು, ಲೋಕಪ್ರವಾದಃ=ಐತಿಹ್ಯವು. **ವ್ಯಾಸಾಜ್ಞಾಭೃತ್** ಎಂದರೆ, ವ್ಯಾಸಸ್ಯ=ಶ್ರೀವೇದವ್ಯಾಸದೇವರ, ಆಜ್ಞಾಂ=ಆಜ್ಞೆಯನ್ನು ಅಂದರೆ, ಮಹಾಭಾರತ**ತಾತ್ಪರ್ಯನಿರ್ಣಯಂ** ಕುರು=ಮಹಾಭಾರತತಾತ್ಪರ್ಯನಿರ್ಣಯವನ್ನು ಮಾಡು, ಇತ್ಯನುಜ್ಞಾಂ ಹರತಿ ಬಿಭರ್ತಿ ಇತಿ ಸ **ತಥಾ=ಈ ಆಜ್ಞೆಯನ್ನು** ಹರತಿ ಅಂದರೆ ಧರಿಸುತ್ತಾರೆ ಎಂಬ ವ್ಯುತ್ಪತ್ತಿಯಿಂದ, ಆ ಶ್ರೀಮಧ್ವಾಚಾರ್ಯರು 'ವ್ಯಾಸಾಜ್ಞಾಭೃತ್ **ಎಂದು ಹೇಳಲ್ಪಡುತ್ತಾರೆ.**

ವ್ಯಾಸಾಜ್ಞಾಂ ಆದಾಯ=ಶ್ರೀ ವೇದವ್ಯಾಸರ ಅಪ್ಪಣೆಯನ್ನು ಸ್ವೀಕರಿಸಿ, **ಗಚ್ಛತಃ=ಹೋಗುತ್ತಿರುವ, ಮಧ್ವಸ್ಯ** ಚರಿತಾನಿ ಆಹ=ಶ್ರೀಮಧ್ವಾಚಾರ್ಯರ ಚರಿತ್ರೆಗಳನ್ನು ಹೇಳುತ್ತಾರೆ. ಸುರಸರಿತಃ **ಇತ್ಯಾದಿನಾ=ಸುರಸರಿತಃ** ಇತ್ಯಾದಿ ವಿಶೇಷಣದಿಂದ, ಸುರಸರಿತಃ, ಎಂದರೆ, ಸುರಾಣಾಂ ದೇವಾನಾಂ=ಸುರಾಣಾಂ **ಎಂದರೆ ದೇವತೆಗಳ, ಸರಿತಃ ನದ್ಯಾಃ**=ಸರಿತಃ ಎಂದರೆ ನದಿಯ, ಕರ್ಮಣಿ ಷಷ್ಠೀ, ಸುರಸರಿತಃ ಎಂಬುದು **'ಸುತರ್ತಾ' ಅನಾಯಾಸವಾಗಿ ದಾಟುವವರು.** ಎಂಬುದರ ಕರ್ಮವಾದುದರಿಂದ ಕರ್ತೃಕರ್ಮಣೋಃಕೃತಿ ಎಂಬ **ಸೂತ್ರದಿಂದ ಷಷ್ಠೀ, ವಾರಿಸಂಸ್ತಂಭಯೋಗಾತ್,** ಎಂಬಲ್ಲಿ ವಾರಿಣಃ ಜಲಸ್ಯ=ವಾರಿಣಃ ಎಂದರೆ ನೀರಿನ, ಸಂಸ್ತಂಭ**ಯೋಗಾತ್ ಎಂದರೆ ಸಂಸ್ತಂಭನರೂಪೋಪಾಯಾತ್**=ಚೆನ್ನಾಗಿ ಸ್ತಂಭನ ಮಾಡುವಿಕೆ ಎಂಬ ಉಪಾಯದ ದೆಸೆಯಿಂದ, **ವಾರಿಸಂಸ್ತಂಭಯೋಗಾತ್ ಎಂಬಲ್ಲಿ** ಯೋಗ ಎಂದರೆ

ಉಪಾಯ, ಯೋಗಃ ಸನ್ನಹನೋಪಾಯ ಇತ್ಯಭಿಧಾನಾತ್, ಯೋಗ ಎಂದರೆ ಸನ್ನಾಹ ಉಪಾಯ ಇತ್ಯಾದಿ ಅರ್ಥಗಳು ಎಂದು ಹೇಳುವ ಕೋಶವಿರುವುದರಿಂದ ಈ ಅರ್ಥವು ಯುಕ್ತವಾಗಿದೆ. ಲಘು ಯಥಾ=ವೇಗದಿಂದ ಹೇಗೆ ಆದೀತೋ ಹಾಗೆ, ಸುತರ್ತಾ=ಅನಾಯಾಸೇನ ತೀರ್ಣವಾನ್=ಆಯಾಸವಿಲ್ಲದೆ ದಾಟಿದವರಾದ, ಶತ್ರುಶಂಕಯಾ=ಶತ್ರುಗಳು ಬಂದಾರು ಎಂಬ ಸಂದೇಹದಿಂದ, ಅಪ್ಲವ್ರೋಪೇತಾಂ=ತೆಪ್ಪ ಮುಂತಾದುದು ಇಲ್ಲದಿರುವ, ಗಂಗಾಂ=ಗಂಗೆಯನ್ನು, ಜಲಸ್ತಂಭನಂ ಕೃತ್ವಾ=ಜಲಸ್ತಂಭನವನ್ನು ಮಾಡಿ, ತೀರ್ಣವಾನ್ ಇತಿ ಭಾವಃ=ಶ್ರೀಮಧ್ವಾಚಾರ್ಯರು ದಾಟಿದರು ಎಂದು ಅಭಿಪ್ರಾಯ. ಭೂಮಿಂ=ನೆಲವನ್ನು, ಭಿತ್ವಾ=ವಿದಾರ್ಯ ಎಂದರೆ ಸೀಳಿ, ಮಠಂ=ಮಠವನ್ನು ಕುರಿತು, ಉಪಗತಯಾ=ಪ್ರಾಪ್ತಳಾದ, ಮೂರ್ತಿಮತ್ಯಾ=ವಿಗ್ರಹವತ್ಯಾ, ಮೂರ್ತಿಮತ್ಯಾ ಎಂದರೆ ಶರೀರಧಾರಿಣಿಯಾದ, ದ್ಯುನದ್ಯಾ=ಗಂಗಯಾ, ದ್ಯುನದ್ಯಾ ಎಂದರೆ ಗಂಗೆಯಿಂದ, ವಂದಿತಃ=ನತಃ, ವಂದಿತಃ ಎಂದರೆ ನಮಸ್ಕರಿಸಲ್ಪಟ್ಟ.

ಶ್ರೀಮಧ್ವಃ=ಶ್ರೀಮಧ್ವಾಚಾರ್ಯರು ಹಸ್ತಿನಪುರಗತಮಠೇ=ಹಸ್ತಿನಪುರದಲ್ಲಿದ್ದ ಮಠದಲ್ಲಿ, ಸಂಕಲ್ಪಾರ್ಥಂ=ಚಾತುರ್ಮಾಸ್ಯ ಸಂಕಲ್ಪಕ್ಕಾಗಿ, ಯದಾ ತಸ್ಥೌ=ಯಾವಾಗ ಇದ್ದರೋ, ತದಾ=ಆಗ, ಗಂಗಾ=ಗಂಗೆಯು, ತಂ=ಅವರನ್ನು ಸೇವಿತುಂ=ಸೇವಿಸುವುದಕ್ಕೋಸ್ಕರ, ಭೂಮಿಂ=ನೆಲವನ್ನು, ಭಿತ್ವಾ=ಸೀಳಿ, ಲಾವಣ್ಯಾದ್ಯುಪೇತವಿಗ್ರಹಂ ಧೃತ್ವಾ=ಕಾಂತಿವಿಶೇಷ ಸೌಂದರ್ಯ ಮುಂತಾದ ಗುಣಗಳಿಂದ ಕೂಡಿದ ಶರೀರವನ್ನು ಧರಿಸಿ, ಸರ್ವೇಷಾಂ=ಎಲ್ಲರ, ಪುರತಃ=ಮುಂದುಗಡೆ, ಆಗತ್ಯ=ಬಂದು, ಮಧ್ವಂ=ಶ್ರೀಮಧ್ವಾಚಾರ್ಯರನ್ನು, ನತವತೀ=ನಮಸ್ಕಾರ ಮಾಡಿದಳು. ಇತ್ಯರ್ಥಃ=ಎಂದು ಅರ್ಥವು. ಅನೇಕಾನ್=ಬಹುಸಂಖ್ಯೋಪೇತಾನ್=ಅನೇಕಾನ್ ಎಂದರೆ ಬಹುಸಂಖ್ಯೆಯಿಂದ ಕೂಡಿದ, ಯೂನಃ=ತರುಣಾನ್, ಯೂನಃ ಎಂದರೆ ತರುಣರನ್ನು ಯುವನ್ ಶಬ್ದ ಯುವಾನಂ ಯುವಾನೌ ಯೂನಃ) ವಿಜಿಗ್ಯೇ=ಜಿತವಾನ್=ವಿಜಿಗ್ಯೇ ಎಂದರೆ ಜಯಿಸಿದರು. ವಿಪರಾಭ್ಯಾಂಜೇಃ ಇತ್ಯಾತ್ಮನೇಪದಂ ವಿಜಿಗ್ಯೇ ಎಂಬಲ್ಲಿ ವಿಪರಾಭ್ಯಾಂಜೇಃ ವಿ,ಪರಾ ಎಂಬ ಉಪಸರ್ಗಗಳ ಮುಂದಿರುವ ಜಿಧಾತುವಿಗೆ ಆತ್ಮನೇ ಪದಪ್ರತ್ಯಯ ಬರುತ್ತದೆ ಎಂಬ ಸೂತ್ರದಿಂದ ಆತ್ಮನೇಪದ ಬಂದಿದೆ. ಲಿಟ್=ಈ ಧಾತುವಿನ ಲಿಟ್ ರೂಪವು ವಿಜಿಗ್ಯೇ ಎಂದಾಗಿದೆ. 'ಸನ್‌ಲಿಟೋರ್ಜೇಃ' ಇತಿಕುತ್ವಂ=ವಿಜಿಗ್ಯೇ ಎಂಬಲ್ಲಿ 'ಸನ್‌ಲಿಟೋರ್ಜೇಃ' ಈ ಸೂತ್ರದಿಂದ, ಜಯತೇಃ ಸನ್‌ಲಿಟ್ ನಿಮಿತ್ತಃ ಯೋಭ್ಯಾಸಃತತಃ ಪರಸ್ಯ ಕುತ್ವಂಸ್ಯಾತ್, ಜಿಧಾತುವಿಗೆ ಸನ್ ಮತ್ತು ಲಿಟ್‌ಲಕಾರನಿಮಿತ್ತವಾಗಿ ಬಂದಿರುವ ದ್ವಿರುಕ್ತಿಯಲ್ಲಿ ಬಂದಿರುವ ಮೊದಲನೆಯ ಅಭ್ಯಾಸ ಎಂಬ ಹೆಸರುಳ್ಳ ಭಾಗದ ಮುಂದಿರುವ ಚವರ್ಗಕ್ಕೆ ಕವರ್ಗ ಬರುತ್ತದೆ ಎಂಬ ಅರ್ಥದ ಸೂತ್ರದಿಂದ ಜಕಾರವು ಗಕಾರವಾಗಿದೆ.

ಬಲಗರ್ವಿತಾನ್=ತಮ್ಮ ದೇಹ ಸಾಮರ್ಥ್ಯದಿಂದ ಅಹಂಕಾರಪಟ್ಟಿರುವ, ಸ್ವಶಿಷ್ಯಾನ್=ತಮ್ಮ ಶಿಷ್ಯರನ್ನು, ದೃಷ್ಟ್ವಾ= ನೋಡಿ, ಕದಾಚಿತ್=ಒಂದಾನೊಂದು ದಿನ, ತೈಃ=ಅಂತಹ, ಪಂಚದಶಭಿಃ ಯುವಭಿಃ=ಹದಿನೈದು ಮಂದಿ ಯುವಕರೊಂಡನೆ, ಯುಗಪದೇವ=ಏಕಕಾಲದಲ್ಲಿಯೇ, ನಿಯುರ್ಧ್ಯ=ಮಲ್ಲಯುದ್ಧ ಮಾಡಿ, ಜಿತವಾನ್=ಜಯಿಸಿದರು, ಇತಿ ಭಾವಃ=ಎಂದು ಅಭಿಪ್ರಾಯವು. ತಂ=ಅಂತಹ, ಮಧ್ವಂ=ಶ್ರೀಮಧ್ವಾಚಾರ್ಯರನ್ನು, ಈಡೇ=ಸ್ತುತಿಸುತ್ತೇನೆ. ಈಡಸ್ತು ತೌ ಲಟ್, ಈಡ್ ಎಂಬ ಸ್ತುತಿ ಎಂಬ ಅರ್ಥವುಳ್ಳ ಧಾತುವಿನ ಲಟ್ ಲಕಾರವು.

**ಅವತರಣಿಕಾ** - ಶ್ರೀಮಧ್ವಾಚಾರ್ಯರು ಸಂಚಾರ ಕಾಲದಲ್ಲಿ ಮಾಡಿದ ಇನ್ನೂ ಅನೇಕ ಮಹಿಮೆಗಳನ್ನು ವರ್ಣಿಸುತ್ತಾರೆ.

**ಸ್ವರ್ಗಾಹ್ವೋಕ್ತಿಪ್ರಖಂಡೀ ಸಕಲಸಮಯಿಜಿದ್ ವ್ಯಾಖ್ಯಯಾಭಾತ್ ಪುರಾಜೌ**
**ಶಿಷ್ಯಾಣಾಮಾಯುಧಾನಿ ಪ್ರಕಟಯತಿ ಪುರಾಪೂಜಿತಃ ಶೂಲಿನಾಲಂ ।**
**ಪ್ರತ್ಯಕ್ಷೇಣ ಕ್ವಚಿದ್ಯೋ ದಶಶತಗುರುರಂಭಾಪಯೋಭುಕ್ ಕ್ಷಣಾತ್ ಸದ್**
**ಗಾನ್ಯೈಃ ಪುಷ್ಪಾದಿಕಾರೀತ್ಯಭಿಹಿತಚರಿತೋ ಯಃ ಶುಭೈಸ್ತಂ ಪ್ರಪದ್ಯೇ ।।೨೧।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಸ್ವರ್ಗೇತಿ। ಸ್ವರ್ಗಾಹ್ವೋಕ್ತಿಪ್ರಖಂಡೀ, ಸ್ವರ್ಗಸ್ಯ ಆಹ್ವಾನಾಮ। ಆಖ್ಯಾಹ್ವೇ ಅಭಿಧಾನಂ ಚ ಇತ್ಯಮರಃ, ತದ್ವನ್ನಾಮ ಯಸ್ಯ ಅಮರಾವತ್ಯಾಖ್ಯಸ್ಯ ಕಸ್ಯಚಿತ್ ಯತೇಃ ಉಕ್ತೇಃ ಜ್ಞಾನಕರ್ಮಣೋಃ

ಮೋಕ್ಷಸಾಧನತಾಂ ಪ್ರಸಾಧಯ ಇತ್ಯೇವಂರೂಪವಚನಸ್ಯ, ಪ್ರಖಂಡೀ ಛೇದಕಃ। ಜ್ಞಾನಕರ್ಮಣೋಃ ಮೋಕ್ಷಹೇತುತ್ವೇ ಮಧ್ವೇನ ಸಯುಕ್ತಿಕಂ ಸಾಧಿತೇ ಸತಿ ಯುಕ್ತ್ಯನಭಿಜ್ಞೇನ ತೇನ ಯತಿನಾ ಜ್ಞಾನಪದಾರ್ಥೇ ಪೃಷ್ಟೇ ಸತಿ ತ್ವಂ ಜ್ಞಾನೀ ಅಸಿ (ನ) ವೇತಿ ವಿಕಲ್ಪ್ಯ ದೂಷಣಾಭಿಧಾನೇನ ಖಂಡಿತವಾನ್ ಇತಿಭಾವಃ। ಸಕಲಸಮಯಿಜಿತ್ ತತ್ರ ತತ್ರ ಸಭಾಸು ಸಕಲಾನ್ ಸಮಯಿನಃ ಸಿದ್ಧಾಂತಿನಃ ವಾದಿನಃ ಇತಿ ಯಾವತ್, ಜಯತೀತಿ ಸಃ ತಥಾ, ವ್ಯಾಖ್ಯಯಾ ವೇದವ್ಯಾಖ್ಯಾನೇನ ಅಭಾತ್ ಅರಾಜತ, ಭಾ ದೀಪ್ತೌ ಲಙ್ ಪುರಾ ಭೀಮಾವತಾರೇ ಆಜೌಯುದ್ಧೇ ಆಯುಧಾನಿ ಸ್ವಕೀಯಗದಾದ್ಯಾಯುಧಾನಿ, ಶಿಷ್ಯಾಣಾಂ ಏಕಸ್ಯ ಪ್ರಕಟಯತಿ ದರ್ಶಿತವಾನ್, ಯಾವತ್‌ಪುರಾನಿಪಾತಯೋರ್ಲಡಿತಿ ಲಟ್ ।

ಕುರುಕ್ಷೇತ್ರಂ ಗತ್ವಾ ತತ್ರತ್ಯಾನಿ ಸ್ವಕೀಯಭೀಮಾವತಾರಾಯುಧಾನಿ ಶಿಷ್ಯಾಣಾಂ ದರ್ಶಯಾಮಾಸ ಇತಿಭಾವಃ॥

ಪ್ರತ್ಯಕ್ಷೇಣ ಜನದೃಷ್ಟಿಗೋಚರೇಣ ಶೂಲಿನಾ ಅಲಂ ಸಾಧು ಷಡ್ರಸೋಪೇತಭಕ್ಷ್ಯಭೋಜ್ಯಾದಿನಾ ಪೂಜಿತಃ। ರುದ್ರೋ ವಿಪ್ರವೇಷೋ ಭೂತ್ವಾ ಕುರುಕ್ಷೇತ್ರಗತಾಯ ಮಧ್ವಾಯ ಕ್ಷಣಂ ದತ್ವಾ ಸಮ್ಯಗ್ ಭಿಕ್ಷಾಂ ದತ್ತವಾನ್ ಇತಿ ಭಾವಃ।

ಕ್ವಚಿತ್ ಸ್ಥಲಾಂತರೇ ದಶಶತಗುರುರಂಭಾಪಯೋಭುಕ್ ಗುರ್ವ್ಯಶ್ಚ ತಾಃ ರಂಭಾಶ್ಚ ದಶಶತಾನಿ ಸಹಸ್ರಾಣಿ ಚ ತಾನಿ, ತಾಃ ಗುರುರಂಭಾಶ್ಚ ಅನೇಕ ಸಹಸ್ರಪೃಥುಕದಲೀಫಲಾನೀತ್ಯರ್ಥಃ=ಫಲೇ ಲುಕ್। ಪಯಃ, ತ್ರಿಂಶತ್ ಪೂರ್ಣಕುಂಭಕ್ಷೀರಂ ಭುಂಕ್ತೇ ಇತಿ ಸಃ ತಥಾ।

ಕಸ್ಮಿಂಶ್ಚಿತ್ ಪ್ರದೇಶಾಂತರೇ ಕೇನಚಿತ್ ಪ್ರಭುಣಾ ಪರೀಕ್ಷಕೇಣ ಚ ದತ್ತಾನಿ ಚತುಸ್ಸಹಸ್ರಗುರುಕದಲೀ ಫಲಾನಿ ತ್ರಿಂಶತ್‌ಕುಂಭಪೂರ್ಣಕ್ಷೀರಂ ಚ ಬುಭುಜೇ ಇತಿ ಭಾವಃ। ಕ್ಷಣಾತ್ ಸದ್ಭಾಗ್ನ್ಯೈಃ ಸಮೀಚೀನಗಾನ್ಯೈಃ ಪುಷ್ಪಾದಿಕಾರೀ ಪುಷ್ಪಫಲಾದಿಕಾರೀ।

ಕ್ವಚಿತ್ ಶುಷ್ಕಪೂಗತರುಂ ದೃಷ್ಟ್ವಾ ಜನಸಂಘೇನ ಪ್ರಾರ್ಥಿತಃ ಸನ್ ಶ್ರಾವ್ಯಗಾನಂ ಕೃತ್ವಾ ಪುಷ್ಪ ಫಲಾದಿಮಂತಂ ಕ್ಷಣೇನ ಅಕರೋತ್ ಇತಿ ಭಾವಃ। ಇತಿ ಏವಂ ಪ್ರಕಾರೇಣ ಶುಭ್ಯೈಃ ಸಜ್ಜನ್ಯೈಃ ಅಭಿಹಿತಚರಿತಃ ಆಸೀದಿತಿ ಶೇಷಃ, ತಂ ಮಧ್ವಂ ಪ್ರಪದ್ಯೇ ಪ್ರಾಪ್ನೋಮಿ ಪದಗತೌಲಟ್।

**ಪದಚ್ಛೇದ** - ಸ್ವರ್ಗಾಹ್ವೋಕ್ತಿಪ್ರಖಂಡೀ, ಸಕಲಸಮಯಿಜಿತ್, ವ್ಯಾಖ್ಯಯಾ, ಅಭಾತ್, ಪುರಾ, ಆಜೌ, ಶಿಷ್ಯಾಣಾಂ, ಆಯುಧಾನಿ ಪ್ರಕಟಯತಿ, ಪುರಾ, ಪೂಜಿತಃ, ಶೂಲಿನಾ, ಅಲಂ, ಪ್ರತ್ಯಕ್ಷೇಣ, ಕ್ವಚಿತ್, ಯಃ ದಶಶತಗುರು ರಂಭಾಪಯೋಭುಕ್, ಕ್ಷಣಾತ್, ಸದ್ಭಾಗ್ನ್ಯೈಃ ಪುಷ್ಪಾದಿಕಾರೀ ಇತಿ ಅಭಿಹಿತಚರಿತಃ, ಯಃ ಶುಭ್ಯೈಃ ತಂ ಪ್ರಪದ್ಯೇ.

**ಅನ್ವಯ** - (ಯಃ ಮಧ್ವಃ) ಸ್ವರ್ಗಾಹ್ವೋಕ್ತಿಪ್ರಖಂಡೀ (ಸನ್) ಸಕಲಸಮಯಿಜಿತ್ (ಸನ್) ವ್ಯಾಖ್ಯಯಾ ಅಭಾತ್, ಪುರಾ ಆಜೌ ಆಯುಧಾನಿ ಶಿಷ್ಯಾಣಾಂ ಪ್ರಕಟಯತಿ ಪುರಾ, ಪ್ರತ್ಯಕ್ಷೇಣ ಶೂಲಿನಾ ಅಲಂ ಪೂಜಿತಃ, ಕ್ವಚಿತ್ ದಶಶತಗುರುರಂಭಾಪಯೋಭುಕ್, ಕ್ಷಣಾತ್ ಸದ್ಭಾಗ್ನ್ಯೈಃ ಪುಷ್ಪಾದಿಕಾರೀ ಇತಿ ಶುಭ್ಯೈಃ ಯಃ ಅಭಿಹಿತಚರಿತಃ, ತಂ ಪ್ರಪದ್ಯೇ.

**ಅನ್ವಯಾರ್ಥ** - (ಯಃ ಮಧ್ವಃ=ಯಾವ (ಶ್ರೀಮಧ್ವಾಚಾರ್ಯರು) ಸ್ವರ್ಗಾಹ್ವೋಕ್ತಿಪ್ರಖಂಡೀ ಸನ್)='ಅಮರಾವತೀ' ಎಂಬ ಹೆಸರಿನ ಯತಿಯ ಮಾತುಗಳನ್ನು ಚೆನ್ನಾಗಿ ಖಂಡಿಸುವವರಾಗಿ, ಸಕಲಸಮಯಿಜಿತ್ (ಸನ್)=ಎಲ್ಲಾ ಸಿದ್ಧಾಂತಿಗಳನ್ನೂ ಜಯಿಸುವವರಾಗಿ, ವ್ಯಾಖ್ಯಯಾ=ವೇದವ್ಯಾಖ್ಯಾನದಿಂದ, ಅಭಾತ್=ಶೋಭಿಸಿದರೋ, ಪುರಾ=ಹಿಂದೆ ಭೀಮಾವತಾರ ಕಾಲದಲ್ಲಿ, ಆಜೌ=ಯುದ್ಧದಲ್ಲಿ, ಆಯುಧಾನಿ=ತನ್ನ ಗದೆ ಮುಂತಾದ ಆಯುಧಗಳನ್ನು, ಶಿಷ್ಯಾಣಾಂ=ಶಿಷ್ಯರಿಗೆ, (ಶಿಷ್ಯಾಣಾಂ ಮಧ್ಯೇ ಏಕಸ್ಯ=ಶಿಷ್ಯರಲ್ಲಿ ಒಬ್ಬನಿಗೆ,) ಪ್ರಕಟಯತಿ ಪುರಾ=ತೋರಿಸಿದರೋ, ಪ್ರತ್ಯಕ್ಷೇಣ=ಜನರ ಕಣ್ಣಿಗೆ ಕಾಣಿಸಿದ, ಶೂಲಿನಾ=ಈಶ್ವರನಿಂದ, ಅಲಂ=ಚೆನ್ನಾಗಿ, ಪೂಜಿತಃ=ಪೂಜಿಸಲ್ಪಟ್ಟ, ಕ್ವಚಿತ್=ಮತ್ತೊಂದು ಸ್ಥಳದಲ್ಲಿ, ದಶಶತ=ಒಂದು

ಸಾವಿರ, ಗುರುರಂಭಾ=ದೊಡ್ಡ ಬಾಳೆಹಣ್ಣುಗಳನ್ನು (ರಾಜ ಬಾಳೆಹಣ್ಣುಗಳನ್ನು) ಪಯಃ=ಹಾಲನ್ನೂ, ಭುಕ್=ಭುಜಿಸಿದ, ಕ್ಷಣಾತ್=ಅಲ್ಪಕಾಲದಲ್ಲಿಯೇ, ಸದ್ಗಾನೈಃ=ಉತ್ತಮವಾದ ಸಂಗೀತಗಾನಗಳಿಂದ ಪುಷ್ಪಾದಿಕಾರೀ=ಹೂವುಹಣ್ಣು ಇತ್ಯಾದಿಗಳನ್ನು ಮಾಡಿದವರು, ಇತಿ=ಈ ರೀತಿಯಾಗಿ, ಶುಭೈಃ=ಸಜ್ಜನರಿಂದ, ಅಭಿಹಿತಚರಿತಃ=ಹೊಗಳಲ್ಪಟ್ಟ ಚರಿತ್ರೆಯುಳ್ಳವರು (ಆಸೀತ್= ಆದರೋ) ತಂ=ಆ ಶ್ರೀಮಧ್ವಾಚಾರ್ಯರನ್ನು, ಪ್ರಪದ್ಯೇ=ಶರಣು ಹೊಂದುತ್ತೇನೆ.

**ತಾತ್ಪರ್ಯ** - ಅಮರಾವತೀತೀರ್ಥ ಅಥವಾ ಅಮರೇಂದ್ರಪುರೀ ಎಂಬ ವಾದಿಯ ಜತೆಗೆ ಆಚಾರ್ಯರು ಕಾಶಿಯಲ್ಲಿ ವಾದಿಸಿದರು. ಆಚಾರ್ಯರು ಜ್ಞಾನ ಮತ್ತು ಕರ್ಮ ಇವೆರಡೂ ಮೋಕ್ಷಕ್ಕೆ ಸಾಕ್ಷಾತ್ ಮತ್ತು ಪರಂಪರೆಯಿಂದ ಕಾರಣವೆಂದು ಸಮರ್ಥಿಸಿದರು. ಆಗ ಯುಕ್ತಿಯನ್ನು ತಿಳಿಯದ ಆ ಅಮರೇಂದ್ರಪುರಿಯು ಜ್ಞಾನವೆಂದರೆ ಏನೆಂದು ಪ್ರಶ್ನಿಸಿದನು. ಆಗ ಆಚಾರ್ಯರು ನೀನು ಜ್ಞಾನಿಯಾಗಿದ್ದೀಯೋ ಇಲ್ಲವೊ? ಜ್ಞಾನಿಯಾದರೆ ಜ್ಞಾನವೆಂದರೆ ಏನು? ಎಂಬ ಪ್ರಶ್ನೆಯು ಕೂಡುವುದಿಲ್ಲ, ಜ್ಞಾನಿಯಲ್ಲದಿದ್ದರೂ ಜ್ಞಾನವೆಂದರೆ ಏನು? ಎಂಬ ಪ್ರಶ್ನೆಯು ಕೂಡುವುದಿಲ್ಲ ಎಂದು ಜ್ಞಾನಪದಾರ್ಥವನ್ನು ವಿಕಲ್ಪಿಸಿ ಅವನನ್ನು ಖಂಡಿಸಿದರು. ಅಲ್ಲಲ್ಲಿ ಸಭೆಗಳಲ್ಲಿ ಇತರ ವಾದಿಗಳ ಸಿದ್ಧಾಂತಗಳನ್ನು ಖಂಡಿಸಿ, ಅವರನ್ನು ಗೆಲಿದರು. ತನ್ನ ಪ್ರವಚನದ ಸೊಬಗಿನಿಂದ ಎಲ್ಲಾ ಸಭೆಗಳಲ್ಲಿ ಶೋಭಿಸಿದರು. ಅವರು ಅಲ್ಲಲ್ಲಿ ಸಭೆಗಳಲ್ಲಿ ವಿಶೇಷವಾದ ವೇದ ವ್ಯಾಖ್ಯಾನ ಮಾಡಿದರು. ಅವರು ಕುರುಕ್ಷೇತ್ರಕ್ಕೆ ಹೋದಾಗ ಹಿಂದೆ ತಾನು ಭೀಮಾವತಾರದಲ್ಲಿ ಬಳಸಿದ್ದ ಈಗ ಅದೇ ಕ್ಷೇತ್ರದಲ್ಲಿ ಭೂಗತವಾಗಿದ್ದ ಗದೆ ಮುಂತಾದ ಆಯುಧಗಳನ್ನು ತೆಗೆದು ತೋರಿಸಿದರು. ಆಚಾರ್ಯರು ಕುರುಕ್ಷೇತ್ರದಲ್ಲಿರುವಾಗಲೇ ಒಂದುದಿನ ಮಹಾರುದ್ರದೇವರು ಬ್ರಾಹ್ಮಣ ರೂಪವನ್ನು ಧರಿಸಿ ಬಂದು ಆಚಾರ್ಯರನ್ನು ಭಿಕ್ಷೆಗಾಗಿ ಆಹ್ವಾನಿಸಿ, ಅವರಿಗೆ ಭಿಕ್ಷೆ ಮಾಡಿಸಿ ಚೆನ್ನಾಗಿ ಪೂಜಿಸಿದರು. ಅವರು ಇಷುಪಾತವೆಂಬ ಕ್ಷೇತ್ರಕ್ಕೆ ಹೋಗಿ ಅಲ್ಲಿ ಒಂದುಸಾವಿರ ದೊಡ್ಡ ಬಾಳೆಹಣ್ಣುಗಳನ್ನು ತಿಂದು ಜೀರ್ಣಿಸಿಕೊಂಡರು. ಗೋವೆಯಲ್ಲಿ ನಾಲ್ಕು ಸಾವಿರ ಬಾಳೆಹಣ್ಣುಗಳ ಜತೆಗೆ ಮೂವತ್ತು ಕೊಡ ಹಾಲನ್ನು ಕುಡಿದು ತಮ್ಮ ಜಠರಾಗ್ನಿಯ ಅತಿಮಾನುಷ ಶಕ್ತಿಯನ್ನು ಪ್ರಕಟಿಸಿದರು. ಪಸುಪೆ ಎಂಬ ಊರಿನಲ್ಲಿ ತೆಂಗು ಕಂಗು ಮುಂತಾದ ಮರಗಳು ಬೇಸಿಗೆಯಲ್ಲಿ ಒಣಗಿ ಹೋಗಿದ್ದುವು. ಅಲ್ಲಿನ ಜನರು ಪ್ರಾರ್ಥಿಸಿದಾಗ ಆಚಾರ್ಯರು ದಿವ್ಯಗಾನವನ್ನು ಪ್ರಾರಂಭಿಸಿ ಸಂಗೀತತರಂಗದಿಂದ ಕ್ಷಣ ಮಾತ್ರದಲ್ಲಿಯೇ ಆ ಗಿಡಗಳಲ್ಲಿ ಹೂವು ಹಣ್ಣುಗಳನ್ನು ಬರಿಸಿದರು. ಹೀಗೆ ಅವರ ಪ್ರಯಾಣದ ಪವಾಡಗಳನ್ನು ಅವರ ಜತೆಗೆ ಸಂಚಾರಕ್ಕೆ ತೆರಳಿದ್ದ ಶಿಷ್ಯರು ಪ್ರತ್ಯಕ್ಷವಾಗಿ ತಾವು ಕಂಡು ವಿಸ್ಮಿತರಾಗಿ, ಜನತೆಗೆ ಅವನ್ನೆಲ್ಲಾ ಬಣ್ಣಿಸಿ ಅವರನ್ನು ವಿಸ್ಮಯಗೊಳಿಸುತ್ತಿದ್ದರು. ದೇವತೆಗಳೂ ಮೇಲಿನ ಲೋಕಗಳಲ್ಲಿ ಆಚಾರ್ಯರನ್ನು ಹಾಡಿ ಕೊಂಡಾಡುತ್ತಿದ್ದರು. ಅಂತಹ ಶ್ರೀಮಧ್ವಮುನಿಗಳನ್ನು ನಾನು ಶರಣು ಹೊಂದುತ್ತೇನೆ ಎಂದು ಶ್ರೀ ನಾರಾಯಣಪಂಡಿತಾಚಾರ್ಯರು ಹೇಳುತ್ತಿದ್ದಾರೆ.

**ವಿಗ್ರಹ** – ಸ್ವರ್ಗಸ್ಯ ಆಹ್ವಾ ಇವ ಆಹ್ವಾಯಸ್ಯಸಃ ಸ್ವರ್ಗಾಹ್ವಃ ಸ್ವರ್ಗದ ಹೆಸರು ಅಮರಾವತೀ, ಅಥವಾ ಅಮರೇಂದ್ರಪುರೀ ಎಂದು, ಅದೇ ಯಾವನಿಗೆ ಹೆಸರು ಆಗಿದೆಯೋ ಅವನೇ ಸ್ವರ್ಗಾಹ್ವನು. ಅಮರಾವತೀಯತಿ, ಅಥವಾ ಅಮರೇಂದ್ರ ಪುರೀಯತಿ ಎಂದು ಅರ್ಥ. ಆಹ್ವಾ ಎಂದರೆ ಹೆಸರು ಆಖ್ಯಾಹ್ವೇ ಅಭಿಧಾನಂ ಚ ಎಂದರೆ ಅಮರ. ಸ್ವರ್ಗಾಹ್ವಸ್ಯಉಕ್ತಿಃ ಸ್ವರ್ಗಾಹ್ವೋಕ್ತಿಃ, ಸ್ವರ್ಗಾಹ್ವೋಕ್ತಿಂ ಪ್ರಖಂಡಯತೀತಿ ಸ್ವರ್ಗಾಹ್ವೋಕ್ತಿಪ್ರಖಂಡೀ, ಸಮಯಾಃ ಏಷಾಂ ಸಂತೀತಿ ಸಮಯಿನಃ, ಸಕಲಾಶ್ಚತೇ ಸಮಯಿನಶ್ಚ ಸಕಲಸಮಯಿನಃ, ಸಕಲಸಮಯಿನಃ ಜಯತೀತಿ ಸಕಲಸಮಯಿಜಿತ್ ಶೂಲಂ ಅಸ್ಯ ಅಸ್ತೀತಿ ಶೂಲೀ ಈಶ್ವರನು, 'ಶಂಭುಃ ಈಶಃ ಪಶುಪತಿಃ ಶಿವಃಶೂಲೀ ಮಹೇಶ್ವರಃ ಅಮರ. ದಶಗುಣಿತಂ ಶತಂ ದಶಶತಾನಿ, ದಶಶತಾನಿ ಚ ತಾಃ ಗುರ್ವ್ಯಶ್ಚರಂಭಾಃ ದಶಶತಗುರು ರಂಭಾಃ (ಒಂದು ಸಾವಿರ ದೊಡ್ಡ ಬಾಳೆಹಣ್ಣುಗಳು) ದಶಶತ ಗುರುರಂಭಾಶ್ಚ ಪಯಶ್ಚದಶಶತಗುರುರಂಭಾಪಯಾಂಸಿ, ತಾನಿ ಭುಂಕ್ತೇ ಇತಿ ದಶಶತಗುರುರಂಭಾಪಯೋಭುಕ್, ಸಂತಿ (ಸಮೀಚೀನಾನಿ) ಚ ತಾನಿ ಗಾನಾನಿ ಚ ಸದ್ಗಾನಾನಿ ತೈಃ, ಪುಷ್ಪಂ ಆದಿ ಯೇಷಾಂತಾನಿ ಪುಷ್ಪಾದೀನಿ, ಪುಷ್ಪಾದೀನಿ ಕರೋತೀತಿ ಪುಷ್ಪಾದಿಕಾರೀ, ಅಭಿಹಿತಾನಿ ಚರಿತಾನಿ ಯಸ್ಯಸಃ ಅಭಿಹಿತಚರಿತಃ, ಕ್ರಿಯಾಪದ ಪ್ರ+ಪದ್ಯೇ, ಪದ್ಯತೇ ಪದ್ಯೇತೇ ಪದ್ಯಂತೇ, ಪದ್ಯಸೇ ಪದ್ಯೇಥೇ ಪದ್ಯಧ್ವೇ, ಪದ್ಯೇ ಪದ್ಯಾವಹೇ

ಪದ್ಯಾಮಹೇ, ಪ್ರಉಪಸರ್ಗ, ಪದಗತೌ ಆತ್ಮನೇಪದಿ (ಸಕರ್ಮಕ) ಉತ್ತಮ ಪುರುಷ ಏಕವಚನ ಅಭಾತ್ ಅಭಾತಾಂ ಅಭುಃ, ಅಭಾಃ ಅಭಾತಂ ಅಭಾತ, ಅಭಾಂ ಅಭಾವ ಅಭಾಮ, ಭಾದೀಪ್ತೌ ಅಕರ್ಮಕಪರ. ಲಜ್, ಪ್ರಕಟಯತಿ ಕಟಯತಃ ಕಟಯಂತಿ, ಕಟಯಸಿ, ಕಟಯಥಃ ಕಟಯಥ, ಕಟಯಾಮಿ, ಕಟಯಾಮಃ, ಕಟೇ ವರ್ಷಾವರಣಯೋಃಣಿಜಂತ, ಕರ್ತರಿ ಲಟ್, ಪ್ರಕಟಯತಿ ಪುರಾ ಎಂಬಲ್ಲಿ ಯಾವತ್ ಪುರಾನಿಪಾತಯೋರ್ಲಟ್ ಎಂಬ ಸೂತ್ರದಿಂದ ಪುರಾಶಬ್ದದ ಯೋಗವಿದ್ದಾಗ ಲಟ್‌ಲಕಾರಕ್ಕೆ ಭೂತಕಾಲದ ಅರ್ಥ ಬರುತ್ತದೆ.

**ವ್ಯಾಖ್ಯಾಂ ಶ್ರುತ್ವಾ ಮುನಿಭ್ಯೋऽಭ್ಯಧಿತ ಸಮಯತೋ ಯಸ್ಯ ಲಭ್ಯಂ ಫಣೀಂದ್ರೋ**
**ವೈಕುಂಠಂ ಹೇಮನಾನಾಮಣಿಮಯಸದನಂ ಶ್ರೀಶಧಾಮಾಸ್ತದೋಷಮ್ ।**
**ಸಾಯುಜ್ಯಾಪ್ತಸೌಖ್ಯೈರ್ವಿವಿಧವಿಷಯಿಭಿಃ ಸುಂದರೀಭೋಗಭಾಗ್ಭಿಃ**
**ಬ್ರಹ್ಮಾದ್ಯೈರ್ನಾಥದೃಗ್ಭಿಃ ವಿಲಸಿತಮತುಲಂ ಸೋऽನುಗೃಹ್ಣಾತು ನೋऽಲಮ್ ॥೨೨॥**

**ಪದಚ್ಛೇದ** - ವ್ಯಾಖ್ಯಾಂ, ಶ್ರುತ್ವಾ, ಮುನಿಭ್ಯಃ, ಅಭ್ಯಧಿತ, ಸಮಯತಃ, ಯಸ್ಯ, ಲಭ್ಯಂ, ಫಣೀಂದ್ರಃ, ವೈಕುಂಠಂ, ಹೇಮನಾನಾಮಣಿಮಯಸದನಂ, ಶ್ರೀಶಧಾಮ, ಅಸ್ತದೋಷಂ, ಸಾಯುಜ್ಯಾಪ್ತಸೌಖ್ಯೈಃ, ವಿವಿಧವಿಷಯಿಭಿಃ, ಸುಂದರೀಭೋಗಭಾಗ್ಭಿಃ, ಬ್ರಹ್ಮಾದ್ಯೈಃ, ನಾಥದೃಗ್ಭಿಃ, ವಿಲಸಿತಂ, ಅತುಲಂ, ಸಃ, ಅನುಗೃಹ್ಣಾತು, ನಃ, ಅಲಂ.

**ಅನ್ವಯ** - ಫಣೀಂದ್ರಃ ವ್ಯಾಖ್ಯಾಂ ಶ್ರುತ್ವಾ ಯಸ್ಯ ಸಮಯತಃ ಲಭ್ಯಂ ಹೇಮನಾನಾಮಣಿ ಮಯಸದನಂ, ಶ್ರೀಶಧಾಮ ಅಸ್ತದೋಷಂ ಸಾಯುಜ್ಯಾದ್ಯಾಪ್ತಸೌಖ್ಯೈಃ ವಿವಿಧ ವಿಷಯಿಭಿಃ ಸುಂದರೀ ಭೋಗಭಾಗ್ಭಿಃ ನಾಥದೃಗ್ಭಿಃ=ಬ್ರಹ್ಮಾದ್ಯೈಃ ವಿಲಸಿತಂ ಅತುಲಂ ವೈಕುಂಠಂ ಮುನಿಭ್ಯಃ ಅಭ್ಯಧಿತ, ಸಃ ನಃ ಅಲಂ ಅನುಗೃಹ್ಣಾತು.

**ಅನ್ವಯಾರ್ಥ** - ಫಣೀಂದ್ರಃ=ಶೇಷದೇವರು, ವ್ಯಾಖ್ಯಾಂ=ಶ್ರೀಮಧ್ವಾಚಾರ್ಯರು ಪ್ರವಚನವನ್ನು, ಶ್ರುತ್ವಾ=ಕೇಳಿ, ಯಸ್ಯ=ಯಾವಶ್ರೀಮಧ್ವಾಚಾರ್ಯರ, ಸಮಯತಃ=ಸಿದ್ಧಾಂತದ ದೆಸೆಯಿಂದ, ಲಭ್ಯಂ=ಹೊಂದಲು ಸಾಧ್ಯವಾದ, ಹೇಮ=ಬಂಗಾರವೂ, ನಾನಾಮಣಿಮಯ=ಅನೇಕ ವಿಧವಾದ ರತ್ನಗಳು ಇವುಗಳ ಸ್ವರೂಪವಾದ, ಸದನಂ=ಭವನಗಳುಳ್ಳ, ~~ಶ್ರೀಶಧಾಮ=ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನ ಆವಾಸಸ್ಥಾನವಾದ, ಅಸ್ತದೋಷಂ=ಮುಪ್ಪು ಸಾವು ಮುಂತಾದ~~ ಯಾವ ದೋಷಗಳೂ ಇಲ್ಲದ, ಸಾಯುಜ್ಯಾದಿ=ಸಾಯುಜ್ಯ ಸಾರೂಪ್ಯ ಮುಂತಾದುವುಗಳಿಂದ, ಆಪ್ತ=ಹೊಂದಲ್ಪಟ್ಟ, ಸೌಖ್ಯೈಃ=(ಸುಖವುಳ್ಳ) ಸ್ವರೂಪಾನಂದಾವಿರ್ಭಾವವುಳ್ಳ) ವಿವಿಧ ವಿಷಯಿಭಿಃ=ಅನೇಕ ಪ್ರಕಾರವಾದ ಭೋಗ್ಯವಸ್ತುಗಳುಳ್ಳ, ಸುಂದರೀ=ರೂಪಲಾವಣ್ಯಾದಿ ಪೂರ್ಣರಾದ ಸ್ತ್ರೀಯರ, ಭೋಗ=ಅನುಭವವನ್ನು, ಭಾಗ್ಭಿಃ=ಹೊಂದಿರುವ, ನಾಥದೃಗ್ಭಿಃ=ಸ್ವಾಮಿಯಾದ ಶ್ರೀಮನ್ನಾರಾಯಣನನ್ನು ನೋಡುತ್ತಿರುವ, ಬ್ರಹ್ಮಾದ್ಯೈಃ=(ಮುಕ್ತರಾದ) ಬ್ರಹ್ಮಾದಿ ದೇವತೆಗಳಿಂದ ವಿಲಸಿತಂ=ಶೋಭಿತವಾದ, ಅತುಲಂ=ಎಣೆಯಿಲ್ಲದ, ವೈಕುಂಠಂ=ಮುಕ್ತ ವೈಕುಂಠಸ್ಥಾನವನ್ನು, ಮುನಿಭ್ಯಃ=ಸನಕಾದಿ ಮುನಿಗಳಿಗೆ ಅಭ್ಯಧಿತ=ಹೇಳಿದರೋ (ವರ್ಣಿಸಿದರೋ), ಸಃ=ಮೋಕ್ಷಸ್ಥಾನವಾದ ನಿತ್ಯ ವೈಕುಂಠ ಪ್ರಾಪಕವಾದ ಶಾಸ್ತ್ರವನ್ನು ರಚಿಸಿರುವ ಅಂತಹ ಶ್ರೀಮಧ್ವರು, ನಃ=ನಮ್ಮನ್ನು, ಅಲಂ=ಅತಿಶಯವಾಗಿ, ಅನುಗೃಹ್ಣಾತು=ಅನುಗ್ರಹಿಸಲಿ.

**ತಾತ್ಪರ್ಯ** - ಶ್ರೀಮತ್ ಆನಂದತೀರ್ಥರು ಒಂದು ದಿನ ಭಾಷ್ಯಗ್ರಂಥವನ್ನು ಶಿಷ್ಯರಿಗೆ ಪ್ರವಚನ ಮಾಡುತ್ತಿದ್ದಾಗ ಸನಕಾದಿ ಮುನಿಸಹಿತರಾಗಿ ಶೇಷದೇವರು ತಮ್ಮ ಲೋಕದಿಂದ ಬಂದು ಆಚಾರ್ಯರ ಪ್ರವಚನವನ್ನು ಕೇಳಿದರು. ಅಲ್ಲಿಂದ ತಮ್ಮ ಲೋಕಕ್ಕೆ ಹೋಗಿ ಅಲ್ಲಿ ಉತ್ತಮವಾದ ಆಸನದಲ್ಲಿ ಕುಳಿತಿದ್ದ ಶೇಷದೇವರನ್ನು ಸನಕಾದಿ ಮುನಿಗಳು ನಮಿಸಿ ಆಚಾರ್ಯರ ಶಾಸ್ತ್ರವನ್ನು ಅಧ್ಯಯನ ಮಾಡಿದವರಿಗೆ ಹಾಗೂ ಪ್ರವಚನ ಮಾಡಿದವರಿಗೆ ಏನು ಫಲವುಂಟಾಗುತ್ತದೆಯೆಂದು ಕೇಳಿದಾಗ, ಶೇಷದೇವರು ಆಚಾರ್ಯರ ಶಾಸ್ತ್ರಶ್ರವಣಮನನಾದಿಗಳಿಗೆ ಮುಖ್ಯಫಲವು ವೈಕುಂಠವು ಎಂದು ಹೇಳಿ ಮುಕ್ತವೈಕುಂಠದ ವರ್ಣನೆಯನ್ನು ಮಾಡಿದರು. ವೈಕುಂಠದಲ್ಲಿ ಬಂಗಾರ ಮತ್ತು ನಾನಾ ವಿಧವಾದ ನವರತ್ನ ಖಚಿತವಾದ ಭವನಗಳಿವೆ. ಅಲ್ಲಿ ಯಾವಾಗಲೂ ಸಮಸ್ತದೋಷರಹಿತನಾದ **ಸಮಸ್ತಗುಣಪೂರ್ಣನಾದ** ಲಕ್ಷ್ಮೀಪತಿಯಾದ ನಾರಾಯಣನು ಸನ್ನಿಹಿತನಾಗಿರುತ್ತಾನೆ. ವೈಕುಂಠದಲ್ಲಿರುವ ಮುಕ್ತಚೇತನರಿಗೆ **ಮುಪ್ಪುಮರಣ**

ಮುಂತಾದ ಯಾವ ದೋಷಗಳೂ ಇಲ್ಲ. ಮುಕ್ತಚೇತನರು ಸಾಯುಜ್ಯ ಸಾರೂಪ್ಯ ಸಾನ್ನಿಧ್ಯ ಸಾಲೋಕ್ಯ ಎಂಬ ಮೋಕ್ಷಗಳಲ್ಲಿ ತಮ್ಮ ಯೋಗ್ಯತಾನುಸಾರವಾದ ಮೋಕ್ಷವನ್ನು ಪಡೆದು ಯಾವಾಗಲೂ ನಿರಂತರವಾದ ಆನಂದದಿಂದ ಭರಿತರಾಗಿರುತ್ತಾರೆ. ಅವರಿಗೆ ಅಪ್ರಾಕೃತವಾದ ಚೇತನ ಸ್ವರೂಪವೇ ಆಗಿರುವ ವಿಷಯಗಳು ಇಷ್ಟಬಂದಂತೆ ಒದಗುತ್ತವೆ. ಅಲ್ಲಿ ಆಯಾ ಚೇತನರ ಸ್ವರೂಪಪತ್ನಿಯರಾದ ಸುಂದರಿಯರು ಮುಕ್ತರನ್ನು ಆನಂದಪಡಿಸುತ್ತಾರೆ. ತಾವೂ ಆನಂದ ಪಡುತ್ತಾರೆ. ಇದೆಲ್ಲವೂ ಮುಕ್ತರ ಸ್ವರೂಪವಾಗಿರುವ ಆನಂದವೇ ಆಗಿದೆ. ಅಲ್ಲಿದ್ದ ಮುಕ್ತರು ಯಾವಾಗಲೂ ಪರಮಾತ್ಮನನ್ನು ನೋಡುತ್ತಲೇ ಇರುತ್ತಾರೆ. ಬ್ರಹ್ಮಶೇಷ ಗರುಡ ಮುಂತಾದ ಮುಕ್ತರೂ ಅಲ್ಲಿ ನಾನಾ ವಿಲಾಸಗಳಿಂದ ವಿಲಸಿತರಾಗಿ ಓಡಾಡುತ್ತಾರೆ ಎಂದು ಶೇಷದೇವರು ವೈಕುಂಠವನ್ನು ವರ್ಣಿಸಿದರು. ಇಂತಹ ಅತ್ಯಂತ ಶ್ರೇಷ್ಠವಾದ ವೈಕುಂಠವನ್ನು ಕೊಡುವ ಶಾಸ್ತ್ರವನ್ನು ಮಾಡಿರುವ ಶ್ರೀಮಧ್ವಾಚಾರ್ಯರು ನಮ್ಮನ್ನು ಅನುಗ್ರಹಿಸಲಿ.

**ವಿಗ್ರಹ** - ಸಮಯಾತ್ ಇತಿ ಸಮಯತಃ (ಪಂಚಮ್ಯಾಃ ತಸಿಃ) ಲಬ್ಧುಂ ಯೋಗ್ಯಃ ಲಭ್ಯಃ ತಂ, ಫಣಾಃ ಏಷಾಂ ಸಂತೀತಿ ಫಣಿನಃ ಫಣಿನಾಂ ಇಂದ್ರಃ ಫಣೀಂದ್ರಃ, ಹೇಮ ಚ ನಾನಾಮಣಯಶ್ಚ ಹೇಮನಾನಾಮಣಯಃ, ಹೇಮನಾನಾ ಮಣಿಭಿಃ ಪ್ರಚುರಾಣಿ ಸದನಾನಿ ಯಸ್ಮಿನ್ ಸಃ ಹೇಮನಾನಾಮಣಿಮಯಸದನಃ ತಂ, ಶ್ರಿಯಃ ಈಶಃ ಶ್ರೀಶಃ ಶ್ರೀಶಸ್ಯ ಧಾಮ ಶ್ರೀಶಧಾಮ, ಅಸ್ತಾಃ ದೋಷಾಃ ಯಸ್ಮಾತ್ ಸಃ ಅಸ್ತದೋಷಃ ತಂ, (ಸಹಯುಜ್ಯತೇ ಇತಿ ಸಯುಕ್) ಸಹಯುಜ್ಯೇತೇ ಇತಿ ಸಯುಜೌ ಸಯುಜೋಃ ಭಾವಃ ಸಾಯುಜ್ಯಂ, ಆದೌ ಭವಂ ಆದ್ಯಂ, ಸಾಯುಜ್ಯಂ ಆದ್ಯಂ ಯೇಷಾಂ ತೇ ಸಾಯುಜ್ಯಾದ್ಯಾಃ ಸುಖಮೇವ ಸೌಖ್ಯಂ, ಸಾಯುಜ್ಯಾದ್ಯೈಃ ಆಪ್ತಂ ಸಾಯುಜ್ಯಾದ್ಯಾಪ್ತಂ, ಸಾಯುಜ್ಯಾದ್ಯಾಪ್ತಂ ಸೌಖ್ಯಂ ಯೈಃ ತೇ ಸಾಯುಜ್ಯಾದ್ಯಾಪ್ತಸೌಖ್ಯಾಃ ತೈಃ, ವಿವಿಧಾಶ್ಚತೇ ವಿಷಯಾಶ್ಚ ವಿವಿಧವಿಷಯಾಃ, ವಿವಿಧ ವಿಷಯಾಃ ಏಷಾಂ ಸಂತೀತಿ ವಿವಿಧವಿಷಯಿಣಃ ತೈಃ, ಸುಂದರೀಭಿಃ ಭೋಗಃ ಸುಂದರೀಭೋಗಃ ಸುಂದರೀಭೋಗಂ ಭಜಂತೀತಿ ಸುಂದರೀಭೋಗಭಾಜಃ ತೈಃ ಸುಂದರೀ ಭೋಗಭಾಗ್ಭಿಃ, ಆದೌ ಭವಃ ಆದ್ಯಃ ಬ್ರಹ್ಮಾ ಆದ್ಯಃ ಯೇಷಾಂ ತೇ ಬ್ರಹ್ಮಾದ್ಯಾಃ ತೈಃ, ನಾಥಂ ಪಶ್ಯಂತೀತಿ ನಾಥದೃಶಃ, ತೈಃ, ನ ವಿದ್ಯತೇ ತುಲಾ ಯಸ್ಯಸಃ ಅತುಲಃ ತಂ,

**ಕ್ರಿಯಾಪದ** - ಅನು+ಗೃಹ್ಣಾತು ಗೃಹ್ಣೀತಾತ್, ಗೃಹ್ಣೀತಾಂ ಗೃಹ್ಣಂತು, ಗೃಹಾಣ ಗೃಹ್ಣೀತಾತ್, ಗೃಹ್ಣೀತಂ ಗೃಹ್ಣೀತ, ಗೃಹ್ಣಾನಿ ಗೃಹ್ಣಾವ ಗೃಹ್ಣಾಮ. ಅನು ಉಪಸರ್ಗಪೂರ್ವಕ ಗ್ರಹ ಉಪಾದಾನೇ ಉಪಾದಾನಾರ್ಥಕ ಗ್ರಹ್ ಧಾತು ಪರಸ್ಮೈಪದೀ, ಪ್ರಾರ್ಥನಾಯಾಂ ಲೋಟ್ ಪ್ರಥಮ ಪುರುಷ ಏಕವಚನಂ, ಅಭಿ+ಅಧತ್ತ ಅದಧಾತಾಂ ಅದಧತ, ಅಧತ್ಥಾಃ ಅದಧಾಥಾಂ ಅಧದ್ಧ್ವಂ ಅದಧಿ ಅದಧ್ವಹಿ ಅದಧ್ಮಹಿ, ಅಭಿ ಉಪಸರ್ಗಪೂರ್ವಕ, ಡುಧಾಞ್ ಧಾರಣ ಪೋಷಣಯೋಃ ಧಾರಣಪೋಷಣಾರ್ಥಕ ಧಾತು, ಆತ್ಮನೇ ಪದೀ ಭೂತೇ ಲುಙ್ ಪ್ರಥಮ ಪುರುಷ ಏಕವಚನಂ.

**ಪ್ರಯೋಗ** - ಫಣೀಂದ್ರೇಣ ಯಸ್ಯ ವ್ಯಾಖ್ಯಾಂ ಶ್ರುತ್ವಾಯಸ್ಯ ಸಮಯತಃ ಲಭ್ಯಃ ಹೇಮನಾನಾಮಣಿಮಯಸದನಃ, ಶ್ರೀಶಧಾಮ ಅಸ್ತದೋಷಃ ಸಾಯುಜ್ಯಾದ್ಯಾಪ್ತಸೌಖ್ಯೈಃ ವಿವಿಧವಿಷಯಿಭಿಃ ಸುಂದರೀಭೋಗಭಾಗ್ಭಿಃ ನಾಥದೃಗ್ಭಿಃ ಬ್ರಹ್ಮಾದ್ಯೈಃ ವಿಲಸಿತಃ ಅತುಲಃ ವೈಕುಂಠಃ (ಲೋಕಃ) ಅಭ್ಯಧಾಯಿ, ಶೇಷದೇವರಿಂದ ಯಾರ ಪ್ರವಚನವನ್ನು ಕೇಳಿ ಯಾರ ಸಿದ್ಧಾಂತ ಶ್ರವಣಾದಿಗಳಿಂದ ಲಭ್ಯವಾದ ವೈಕುಂಠಲೋಕವು ಹೇಳಲ್ಪಟ್ಟಿತೋ ತೇನವಯಂ ಅಲಂ ಅನುಗೃಹ್ಯಾಮಹೈ=ಅಂತಹ ಆಚಾರ್ಯರಿಂದ ನಾವು ಚೆನ್ನಾಗಿ ಅನುಗ್ರಹಿಸಲ್ಪಡುವಂತಾಗಲಿ.

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನದ ಪದಪದಾರ್ಥ** - ವ್ಯಾಖ್ಯಾಂ ಇತಿ=ವ್ಯಾಖ್ಯಾಂ ಎಂದು ಶ್ಲೋಕದ ಆರಂಭ. ಫಣೀಂದ್ರಃ ಶೇಷಃ=ಫಣೀಂದ್ರಃ ಎಂದರೆ ಶೇಷನು, ವ್ಯಾಖ್ಯಾಂ=ವ್ಯಾಖ್ಯಾನವನ್ನು (ಪ್ರವಚನವನ್ನು) ಮಾಧ್ವೀಂ ಇತಿ ಶೇಷಃ= 'ಮಾಧ್ವೀಂ' ಎಂದು ಶೇಷವನ್ನು ಪೂರಣ ಮಾಡಿಕೊಳ್ಳಬೇಕು. ಮಧ್ವಾಚಾರ್ಯರು ಮಾಡಿದ ಪ್ರವಚನವನ್ನು, ಶ್ರುತ್ವಾ= ಕೇಳಿ, ಯಸ್ಯ ಶ್ರೀಮಧ್ವಸ್ಯ=ಯಾವ ಶ್ರೀಮಧ್ವಾಚಾರ್ಯರ, ಸಮಯತಃ=ಸಿದ್ಧಾಂತ (ಶ್ರವಣ)ದಿಂದ, ಲಭ್ಯಂ=ಹೊಂದಲು ಸಾಧ್ಯವಾದ, ವೈಕುಂಠಂ=ವೈಕುಂಠ ಲೋಕವನ್ನು, ಮುನಿಭ್ಯಃ=ಸನಕಾದಿಮುನಿಗಳಿಗೆ, ಅಭ್ಯಧಿತ

ಉಕ್ತವಾನ್=ಅಭ್ಯಧಿತ ಎಂದರೆ ಉಕ್ತವಾನ್=ಹೇಳಿದರು ಎಂದು ಅರ್ಥ. ಡುಧಾಞ್ ಧಾರಣ **ಪೋಷಣಯೋಃ** ಲುಙ್=ಅಭ್ಯಧಿತ ಎಂಬಲ್ಲಿ ಡುಧಾಞ್ ಧಾರಣ ಪೋಷಣಯೋಃ, ಧಾರಣಪೋಷಣಾರ್ಥಕವಾದ **ಧಾತುವಿನ** ಲುಙ್ ಲಕಾರವು, ಶೇಷಃ=ಶೇಷದೇವರು, ಸ್ವಲೋಕಾತ್=ತನ್ನ ಲೋಕದಿಂದ ಆಗತ್ಯ=ಬಂದು, ಅಂತರಿಕ್ಷೇ=**ಆಕಾಶದಲ್ಲಿ**, ಸ್ಥಿತ್ವಾ=ನಿಂತು ಮಧ್ವವ್ಯಾಖ್ಯಾಂ=ಶ್ರೀಮಧ್ವಾಚಾರ್ಯರ ಪ್ರವಚನವನ್ನು, ಶ್ರುತ್ವಾ=ಕೇಳಿ, ಸ್ವಲೋಕಂ=ತಮ್ಮ **ಲೋಕವನ್ನು**, ಪ್ರಾಪ್ಯ=ತಲುಪಿ, ಮಧ್ವಶಾಸ್ತ್ರಂ=ಶ್ರೀಮಧ್ವಾಚಾರ್ಯರ ಶಾಸ್ತ್ರವನ್ನು, ಅಧ್ಯೇತುಃ=ಅಧ್ಯಯನ ಮಾಡಿದವನಿಗೆ, ಕಿಂ ಫಲಂ=**ಏನು** ಫಲವು, ಇತಿ ಪೃಷ್ಟವದ್ಭ್ಯಃ=ಎಂದು ಕೇಳಿದ, ಸನಕಾದಿಭ್ಯಃ=ಸನಕಾದಿಮುನಿಗಳಿಗೆ, ವೈಕುಂಠಾಖ್ಯಂ=ವೈಕುಂಠ **ಎಂಬ**, ಫಲಂ=ಪ್ರಯೋಜನವನ್ನು, ಅವೋಚತ್=ಹೇಳಿದರು, ಇತಿ ಭಾವಃ=ಎಂದು ಅಭಿಪ್ರಾಯವು. ವೈಕುಂಠಂ=ವೈಕುಂಠ ಲೋಕವನ್ನು, ವಿಶಿನಷ್ಟಿ=ವರ್ಣಿಸುತ್ತಾರೆ. ಹೇಮನಾನಾಮಣಿ ಮಯಸದನಂ ಇತಿ=ಹೇಮನಾನಾಮಣಿಮಯಸದನಂ ಇತ್ಯಾದಿ ವಿಶೇಷಣಗಳಿಂದ (ವರ್ಣಿಸುತ್ತಾರೆ) ಹೇಮ ನಾನಾಮಣಿಮಯಾನಿ ಸದನಾನಿ=ಚಿನ್ನ, ನಾನಾ ಪ್ರಕಾರದ ರತ್ನ ಖಚಿತವಾದ ಮನೆಗಳು, ಯಸ್ಮಿನ್=ಯಾವ ವೈಕುಂಠಲೋಕದಲ್ಲಿ ಇವೆಯೋ, ಸಃ=ಆ ವೈಕುಂಠಲೋಕವು ಹೇಮನಾನಾಮಣಿಮಯಸದನ ಎಂದು ಹೇಳಲ್ಪಡುತ್ತದೆ. ತಂ=ಅಂತಹ ವೈಕುಂಠವನ್ನು ಶ್ರೀಶಧಾಮ=ಶ್ರೀಶಸ್ಯ=ವಿಷ್ಣೋಃ, ಶ್ರೀಶ ಅಂದರೆ ವಿಷ್ಣುವಿನ, ಧಾಮ=ಆವಾಸಭೂತಂ, ಧಾಮ ಅಂದರೆ ಆವಾಸಸ್ಥಾನವಾಗಿರುವ ವೈಕುಂಠವನ್ನು, ಅಸ್ತದೋಷಂ ಎಂದರೆ ಅಸ್ತಾಃ=ದೂರಮಾಡಲ್ಪಟ್ಟ ದೋಷಾಃ=ಜರಾ ಮರಣಾದಯಃ, ದೋಷ ಅಂದರೆ ಮುಪ್ಪು ಮರಣ ಮುಂತಾದುವುಗಳು, ಯಸ್ಮಿನ್=ಯಾವ ವೈಕುಂಠಲೋಕದಲ್ಲಿ ಇವೆಯೋ, ಅದು ಅಸ್ತದೋಷ ಎಂದು ಹೇಳಲ್ಪಡುತ್ತದೆ, ತಂ=ಅಂತಹ ವೈಕುಂಠಲೋಕವನ್ನು, ಸಾಯುಜ್ಯಾದ್ಯಾಪ್ತಸೌಖ್ಯೈಃ=ಈಗ ಸಾಯುಜ್ಯಾದ್ಯಾಪ್ತಸೌಖ್ಯೈಃ ಎಂಬ ವಿಶೇಷಣದ ಅರ್ಥವನ್ನು, ಹೇಳುತ್ತಾರೆ, ಸಾಯುಜ್ಯಂ=ಸಾಯುಜ್ಯವೆಂಬ ಮೋಕ್ಷವೇ, ಆದ್ಯಂ=ಮೊದಲನೆಯದು, ಯೇಷಾಂ=ಯಾವ, ಸಾರೂಪ್ಯಾದೀನಾಂ=ಸಾರೂಪ್ಯ ಮೊದಲಾದ ಮೋಕ್ಷಗಳಿಗೆ ಇದೆಯೋ, ಅಂತಹ ಸಾರೂಪ್ಯಾದಿ ಮೋಕ್ಷಗಳು, "ಸಾಯುಜ್ಯಾದಿ" ಎಂದು ಹೇಳಲ್ಪಡುತ್ತವೆ, ತೈಃ=ಅಂತಹ ಸಾಯುಜ್ಯಾದಿ ಮೋಕ್ಷಗಳಿಂದ, ಆಪ್ತಂ=**ಹೊಂದಲ್ಪಟ್ಟ**, ಸೌಖ್ಯಂ=ಸುಖಂ=ಸುಖವು, ಯೇಷಾಂ=ಯಾರಿಗೆ ಇದೆಯೋ ಅವರು 'ಸಾಯುಜ್ಯಾದ್ಯಾಪ್ತಸೌಖ್ಯಾಃ' ಎಂದು **ಹೇಳಲ್ಪಡುತ್ತಾರೆ**, ತೈಃ=ಅಂತಹವರಿಂದ, ವಿವಿಧವಿಷಯಿಭಿಃ=ವಿವಿಧ ವಿಷಯಿಭಿಃ ಎಂಬ ಪದಕ್ಕೆ ವ್ಯಾಖ್ಯಾನ ಮಾಡುತ್ತಾರೆ. ವಿವಿಧಾಃ=ನಾನಾ ~~ಪ್ರಕಾರವಾದ, ವಿಷಯಾಃ=ಭೋಗ್ಯಾಃ=ವಿಷಯಾಃ ಎಂದರೆ ಅನುಭವಿಸಲು ಯೋಗ್ಯವಾಗಿರುವ ವಸ್ತುಗಳು, **ಏಷಾಂ=ಈ**~~ ಮುಕ್ತರಿಗೆ, ಸಂತಿ=ಇವೆ, ಇತಿ=ಎಂದು, ಹೀಗೆ ಮುಕ್ತಿಯಲ್ಲಿ ಅನುಭವಿಸಲು ಯೋಗ್ಯವಾದ ಅನೇಕ ಭೋಗ್ಯ**ವಸ್ತುಗಳುಳ್ಳವರು** 'ವಿವಿಧವಿಷಯಿಣಃ' ವಿವಿಧ ವಿಷಯಿಗಳು ಎಂದು ಹೇಳಲ್ಪಡುತ್ತಾರೆ, ತೈಃ=ಅಂತಹವರಿಂದ, ಸುಂದರೀ**ಭೋಗಭಾಗ್ಭಿಃ**= ಮೂಲದಲ್ಲಿರುವ ಸುಂದರೀ ಭೋಗಭಾಗ್ಭಿಃ ಎಂಬ ಪದಕ್ಕೆ ವ್ಯಾಖ್ಯಾನ ಮಾಡುತ್ತಾರೆ, ಸುಂದರೀಭಿಃ **ಸ್ತ್ರೀಭಿಃ=ಸುಂದರೀಭಿಃ** ಎಂದರೆ ಸುಂದರಿಯರಾದ ಮುಕ್ತಸ್ತ್ರೀಯರಿಂದ, ಭೋಗಂ=ಸುಖಾನುಭವವನ್ನು, ಭಜಂತಿ ಇತಿ=**ಹೊಂದುತ್ತಾರೆ**, **ಇತಿ=ಎಂದು**, ತೈಃ=ಸುಂದರೀಭೋಗಭಾಗ್ಭಿಃ ಎಂಬ ಪದದಿಂದ ಹೇಳಲ್ಪಡುವ ಮುಕ್ತರಿಂದ ನಾಥದೃಗ್ಭಿಃ=**ನಾಥದೃಗ್ಭಿಃ ಎಂದರೆ**, ನಾಥಂ=ವಿಷ್ಣುಂ=ನಾಥಂ ಎಂದರೆ ಸ್ವಾಮಿಯಾದ ಶ್ರೀಹರಿಯನ್ನು ಪಶ್ಯಂತಿ=ನೋಡುತ್ತಾರೆ, ಇತಿ=**ಎಂದು**, **ತೈಃ='ನಾಥದೃಕ್'** ಎಂದು ಹೇಳಿಸಿಕೊಳ್ಳುವ, ಬ್ರಹ್ಮಾದ್ಯೈಃ, ಮುಕ್ತೈಃ ಇತಿ ಶೇಷಃ=ಬ್ರಹ್ಮದೇವರೇ **ಮೊದಲಾದ ಮುಕ್ತರಿಂದ ಎಂದು** ಅಧ್ಯಾಹಾರ ಮಾಡಿಕೊಳ್ಳಬೇಕು, ವಿಲಸಿತಂ=ಶೋಭಿತಂ=ಬ್ರಹ್ಮಾದಿ ಮುಕ್ತರಿಂದ **ಶೋಭಿತವಾದ ಅತುಲಂ**=ಅಸದೃಶಂ, ಅತುಲಂ ಎಂದರೆ ಹೋಲಿಕೆ ಇಲ್ಲದ, ಇತಿ=ಈ ರೀತಿಯಾಗಿರುವ (ವೈಕುಂಠಂ, **ಯಸ್ಯ ವ್ಯಾಖ್ಯಾಂ ಶ್ರುತ್ವಾ ಫಣೀಂದ್ರಃ** ಮುನಿಭ್ಯಃ ಅಭ್ಯಧಿತ=ವೈಕುಂಠನನ್ನು ಯಾವ ಮಧ್ವರ ವ್ಯಾಖ್ಯಾನವನ್ನು **ಕೇಳಿ ಶೇಷದೇವರು ಮುನಿಗಳಿಗೆ ಹೇಳಿದರೋ** (ಸಃ) =ಅಂತಹ ಶ್ರೀಮಧ್ವಃ=ಶ್ರೀಮಧ್ವಾಚಾರ್ಯರು, ನಃ=ಅಸ್ಮಾನ್ **ನಃ ಅಂದರೆ ನಮ್ಮನ್ನು**, ಅಲಂ=ಚೆನ್ನಾಗಿ, ಅನುಗೃಹ್ಣಾತು=ಅನುಗ್ರಹಿಸಲಿ. ಅನುಗೃಹ್ಣಾತು ಎಂಬಲ್ಲಿ ಗ್ರಹ **ಉಪಾದಾನೇ ಎಂಬ ಧಾತುವು**, ಲೋಟ್=ಆ ಧಾತುವಿನ ಲೋಟ್ ಲಕಾರವು ॥೨೨॥

**ಅವತಾರಿಕಾ** - ಈಗ ೨೩ನೆಯ **ಶ್ಲೋಕದಿಂದ ಶ್ರೀ ಸುಮಧ್ವವಿಜಯದ** ೧೨ನೆಯ ಸರ್ಗದ ಆದಿ ಭಾಗದ ಕಥೆಯನ್ನು ಸಂಗ್ರಹಿಸುತ್ತಾರೆ.

**ನಾನಾದುರ್ನೀತಿವಾದ್ಯೈರ್ವಿಹಿತಮುರುಮದಂ ಮಾಯಿಭೂತಾಸುರೇಂದ್ರೈ**
**ರ್ಯೋsಯಂವೇದಾಂತಿಸಿಂಹೋ ವ್ಯಜಯತ ಕುರವಂ ಪುಂಡರೀಕಂ (ಚ) (ಪ್ರ) ಕಾಂಡಂ।**
**ವಿಶ್ವಾಶ್ಚರ್ಯಪ್ರಕಾರಪ್ರವಚನಮಕರೋಚ್ಛಂದಸಾಂ ಯತ್ಸ್ಪೃಧಾನ್ಯ**
**ಸ್ತತ್ಕುರ್ವನ್ ಹಾಸ್ಯ ಆಸೀದ್ ದ್ವಿಜವರನಿಕರೇ ಸ್ಯಾಮ ತದ್ದಾಸದಾಸಾಃ ।।೨೩।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ ನಾನೇತಿ** - ಯೋsಯಂ ವೇದಾಂತಿಸಿಂಹಃ ವೇದಾಂತಿನಾಂ ಶ್ರೇಷ್ಠಃ ಶ್ರೀಮಧ್ವಃ, ನಾನಾದುರ್ನೀತಿವಾದ್ಯೈಃ ನಾನಾ ಪ್ರಕಾರಾಃ ದುರ್ಜಯವಾದಾಃ ಯೇಷಾಂತೈಃ ಮಾಯಿಭೂತಾಸುರೇಂದ್ರೈಃ ಮಾಯಾವಾದ್ಯಾಖ್ಯಾಸುರ ಶ್ರೇಷ್ಠೈಃ। ವ್ರೀಹ್ಯಾದಿತ್ವಾತ್ ಮಾಯೀತಿ ಸಾಧು, ವಿಹಿತಂ ಕೃತಂ ಪ್ರೇಷಿತಮಿತಿಯಾವತ್, ಉರುಮದಂ ಉತ್ಕೃಷ್ಟಗರ್ವೋಪೇತಂ, ಕುರವಂ ಕುತ್ಸಿತಭಾಷಣಂ, ಪ್ರಕಾಂಡಂ (ಪ್ರಕೃಷ್ಟ) ಬಾಣಸದೃಶಂ, (ಚ=ಮತ್ತು, ಕಾಂಡಂ=ಬಾಣದಂತಿರುವ) ಕಾಂಡೋಸ್ತ್ರೀ ದಂಡಬಾಣಾರ್ವ (ಸರ್ಗಾವಸರವಾರಿಷು) ಇತ್ಯಮರಃ। ಪುಂಡರೀಕಂ ಪುಂಡರೀಕಾಖ್ಯವಾದಿನಂ ವ್ಯಜಯತ ಜಿತವಾನ್. ಜಿಜಯೇ (ಅಭಿಭವೇ) 'ವಿಪರಾಭ್ಯಾಂಜೇಃ' ಇತ್ಯಾತ್ಮನೇಪದಮ್. ಶ್ರೀಮಧ್ವಪರಾಕ್ರಮಂ ಅಸಹಮಾನಾಃ ಮಾಯಾವಾದಿನಃ ಏಕತ್ರ ಮಿಲಿತ್ವಾ ದುರ್ಮಂತ್ರೈಃ ಆಲೋಚ್ಯ ಪುಂಡರೀಕಾಖ್ಯಂ ಪ್ರಚಂಡಪಂಡಿತಂ ಶ್ರೀಮಧ್ವಂ ಜೇತುಂ ಪ್ರೇಷಿತವಂತಃ। ಶ್ರೀಮಧ್ವಶ್ಚ ತಮಾಗತಂ ಸಿಂಹೋ ಜಂಬುಕಮಿವ ಕ್ಷಣೇನ ಆಕ್ಷಿಪ್ತವಾನ್ ಇತಿ ಭಾವಃ।। ಯಶ್ಚ ವಿಶ್ವಾಶ್ಚರ್ಯಪ್ರಕಾರಪ್ರವಚನಂ ವಿಶ್ವೇಷಾಂ ಆಶ್ಚರ್ಯಃ ಪ್ರಕಾರಃ ಯಸ್ಯ ತತ್ ತಾದೃಶಪ್ರವಚನಂ ಅಕರೋತ್ ಕೃತವಾನ್। ಲಙ್। ಅನ್ಯಃ ಶಾರ್ದೂಲಾಖ್ಯಃ ಕಶ್ಚಿನ್ಮಾಯೀ ಯತ್ಸ್ಪೃಧಾ ಯಸ್ಯ ಮಧ್ವಸ್ಯ ಸ್ಪರ್ಧಯಾ ಛಂದಸಾಂ ವೇದಾನಾಂ ತತ್ವ್ಯಾಖ್ಯಾನಂ ಕುರ್ವನ್ ದ್ವಿಜವರನಿಕರೇ ಹಾಸ್ಯಃಹಾಸವಿಷಯಃ ಆಸೀತ್। ಶ್ರೀಮಧ್ವಕೃತವೇದವ್ಯಾಖ್ಯಾನಚಾತುರ್ಯಂ ಶ್ರುತವಂತಃ ಪಂಡಿತಾಃ ಶಾರ್ದೂಲಾಖ್ಯಮಾಯಾವಾದಿನಂ ಚ ಪ್ರಾಪ್ಯ ವೇದಾರ್ಥಂ ಪಪ್ರಚ್ಛುಃ। ತದಾ ಸ ಮಧ್ವಸಾಮ್ಯಂ ಪ್ರಾಪ್ತುಂ ವೇದವ್ಯಾಖ್ಯಾನಮುಪಕ್ರಮ್ಯ ಅಗ್ನಿನಾರಯಿಮಶ್ನವದಿತಿ ಮಂತ್ರೇ ಅಗ್ನೀತಿ ಪದಚ್ಛೇದಂ ಕೃತ್ವಾ ನಾರಮಿತಿ ಪದಚ್ಛೇದಂ ಶೈಘ್ರ್ಯಾತ್ ಕೃತವಾನ್। ತಮೇವಂವಿಧಂ ವೀಕ್ಷ್ಯ ವಿಪ್ರಾಃ ಸಭಾಯಾಂಜಹಸುಃ ಇತಿ ಭಾವಃ। ತದ್ದಾಸದಾಸಾಃ ತಸ್ಯ ಶ್ರೀಮಧ್ವಸ್ಯ ದಾಸದಾಸಾಃ ಸ್ಯಾಮ ಭವೇಮ। ಅಸ ಭುವಿ ಲಿಙ್ ।।೨೩।।

**ಪದಚ್ಛೇದ** - ನಾನಾದುರ್ನೀತಿವಾದ್ಯೈಃ, ವಿಹಿತಂ, ಉರುಮದಂ, ಮಾಯಿಭೂತಾಸುರೇಂದ್ರೈಃ, ಯಃ, ಅಯಂ, ವೇದಾಂತಿಸಿಂಹಃ, ವ್ಯಜಯತ, ಕುರವಂ, ಪುಂಡರೀಕಂ, ಚ, (ಪ್ರ) ಕಾಂಡಂ, ವಿಶ್ವಾಶ್ಚರ್ಯಪ್ರಕಾರ ಪ್ರವಚನಂ, ಅಕರೋತ್, ಛಂದಸಾಂ, ಯತ್ಸ್ಪೃಧಾ, ಅನ್ಯಃ, ತತ್, ಕುರ್ವನ್, ಹಾಸ್ಯಃ, ಆಸೀತ್, ದ್ವಿಜವರನಿಕರೇ, ಸ್ಯಾಮ, ತದ್ದಾಸದಾಸಾಃ।।

**ಅನ್ವಯ** - ಯಃ ಅಯಂ ವೇದಾಂತಿಸಿಂಹಃ ನಾನಾದುರ್ನೀತಿವಾದ್ಯೈಃ ಮಾಯಿಭೂತಾಸುರೇಂದ್ರೈಃ ವಿಹಿತಂ ಉರುಮದಂ ಕುರವಂ ಪ್ರಕಾಂಡಂ (ಚ) (ಕಾಂಡಂ) ಪುಂಡರೀಕಂ ವ್ಯಜಯತ, ಛಂದಸಾಂ ಯತ್ ಸ್ಪೃಧಾ ಅನ್ಯಃ ತತ್ ಕುರ್ವನ್ ದ್ವಿಜವರನಿಕರೇ ಹಾಸ್ಯಃ ಆಸೀತ್, ತದ್ದಾಸದಾಸಾಃ, ಸ್ಯಾಮ।

**ಅನ್ವಯಾರ್ಥ** - ಯಃ=ಯಾವ, ಅಯಂ=ಈ, ವೇದಾಂತಿಸಿಂಹಃ=ವೇದಾಂತಿಗಳಲ್ಲಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರು, ನಾನಾದುರ್ನೀತಿವಾದ್ಯೈಃ, ನಾನಾ=ಅನೇಕ ಪ್ರಕಾರವಾದ, ದುರ್ನೀತಿವಾದ್ಯೈಃ=ದುಷ್ಟವಾದ ಯುಕ್ತಿವಾದಗಳುಳ್ಳ, ಮಾಯಿಭೂತಾಸುರೇಂದ್ರೈಃ=ಮಾಯಾವಾದಿಗಳಾದ ಅಸುರಶ್ರೇಷ್ಠರುಗಳಿಂದ, ವಿಹಿತಂ=ಮಾಡಲ್ಪಟ್ಟ, (ಪ್ರೇರಿಸಲ್ಪಟ್ಟ) ಉರುಮದಂ= ಅತಿಶಯವಾದ ಗರ್ವದಿಂದ ಕೂಡಿದ, ಕುರವಂ=ಕುತ್ಸಿತವಾದ ಮಾತುಗಳುಳ್ಳ (ನೀಚವಾದ ಶಬ್ದಗಳುಳ್ಳ) ಪ್ರಕಾಂಡಂ= ಉತ್ಕೃಷ್ಟ ಬಾಣದಂತಿರುವ, (ಚ=ಮತ್ತು ಕಾಂಡಂ=ಬಾಣದಂತಿರುವ) ಪುಂಡರೀಕಂ=ಪುಂಡರೀಕಪುರಿ ಎಂಬ ವಾದಿಯನ್ನು, ವ್ಯಜಯತ=ಜಯಿಸಿದರು. ಯಶ್ಚ=ಯಾವ ಶ್ರೀಮಧ್ವಾಚಾರ್ಯರು, ಛಂದಸಾಂ=ವೇದಗಳಿಗೆ, ವಿಶ್ವಾಶ್ಚರ್ಯಪ್ರಕಾರ ಪ್ರವಚನಂ, ವಿಶ್ವ=ಎಲ್ಲರಿಗೂ, ಆಶ್ಚರ್ಯ=ಆಶ್ಚರ್ಯಕರವಾದ, ಪ್ರಕಾರ=ರೀತಿಯುಳ್ಳ, ಪ್ರವಚನಂ=ವ್ಯಾಖ್ಯಾನವನ್ನು, ಅಕರೋತ್= ಮಾಡಿದರು. ಯತ್ಸ್ಪೃಧಾ=ಯಾವ ಆಚಾರ್ಯರೊಡನೆ ಸ್ಪರ್ಧೆಯಿಂದ, ಅನ್ಯಃ=ಆ ಪುಂಡರೀಕಪುರಿ ಎಂಬ ವಾದಿಯು,

ದ್ವಿಜವರನಿಕರೇ=ಬ್ರಾಹ್ಮಣಶ್ರೇಷ್ಠರ ಸಮೂಹದಲ್ಲಿ, (ಛಂದಸಾಂ=ವೇದಗಳಿಗೆ) ತತ್=ವ್ಯಾಖ್ಯಾನವನ್ನು, ಕುರ್ವನ್=ಮಾಡುತ್ತಾ, ಹಾಸ್ಯಃ=ಅಪಹಾಸಕ್ಕೆ ವಿಷಯನಾಗಿ, ಆಸೀತ್=ಆದನು. (ವಯಂ=ನಾವು) ತದ್ದಾಸದಾಸಾಃ=ಇಂತಹ ಶ್ರೀಮಧ್ವಾಚಾರ್ಯರ ಸೇವಕರ ಸೇವಕರಾಗಿ, ಸ್ಯಾಮ=ಆಗೋಣ. **ಆಗುವಂತೆ ಆಗಲಿ.**

**ತಾತ್ಪರ್ಯ** - ಶ್ರೀಮಧ್ವಾಚಾರ್ಯರ ಪಾಂಡಿತ್ಯದ ಪ್ರೌಢಿಮೆಯನ್ನೂ ಅವರ ದಿಗಂತ ವಿಶ್ರಾಂತಕೀರ್ತಿಯನ್ನೂ ಸಹಿಸಲಾರದ ಮಾಯಾವಾದಿಗಳು ಒಂದು ಏಕಾಂತ ಪ್ರದೇಶದಲ್ಲಿ ಸೇರಿ ಮಂತ್ರಾಲೋಚನೆ ಮಾಡಿದರು. ಶ್ರೀಮಧ್ವಾಚಾರ್ಯರನ್ನು ಹೇಗಾದರೂ ಸೋಲಿಸಬೇಕೆಂದು ನಿರ್ಧರಿಸಿ ಪುಂಡರೀಕಪುರಿ ಎಂಬ ಅದ್ವೈತಿ ಪಂಡಿತನನ್ನು ಶ್ರೀಮಧ್ವಾಚಾರ್ಯರನ್ನು ಜಯಿಸಲು ಕಳುಹಿಸಿದರು. ಪ್ರಕಾಂಡಪಂಡಿತನಾದ ಆ ಪುಂಡರೀಕಪುರಿಯು ತನ್ನ ಪಾಂಡಿತ್ಯದ ದುರಹಂಕಾರದಿಂದ ಬೀಗಿ ಮೆರೆಯುತ್ತಿದ್ದನು. ಕೆಟ್ಟ ಶಬ್ದಗಳಿಂದ ಕೂಗುತ್ತಿದ್ದನು. ವೇದಾಂತಿ ಶ್ರೇಷ್ಠರಾದ ಶ್ರೀಮಧ್ವಾಚಾರ್ಯರು ತಮ್ಮನ್ನು ಜಯಿಸಲು ಬಂದ ಆ ಪುಂಡರೀಕಪುರಿಯನ್ನು ಸಿಂಹವು ತನ್ನ ಬಳಿಗೆ ಬಂದ ನರಿಯನ್ನು ಒಂದು ಕ್ಷಣದಲ್ಲಿ ಜಯಿಸಿ ಓಡಿಸುವಂತೆ ಆಕ್ಷೇಪಿಸಿ ಒಂದು ಕ್ಷಣದಲ್ಲಿ ಜಯಿಸಿದರು. ಅನಂತರ ಆಚಾರ್ಯರು ಎಲ್ಲರಿಗೂ ಆಶ್ಚರ್ಯವಾಗುವ ರೀತಿಯಿಂದ ವೇದಗಳ ನಿರರ್ಗಳವಾದ ಪ್ರವಚನವನ್ನು ಮಾಡಿದರು. ಆಚಾರ್ಯರ ವೇದವ್ಯಾಖ್ಯಾನವನ್ನು ಕೇಳಿ ಆ ಪುಂಡರೀಕಪುರಿಯನ್ನು ಅವನ ಅಭಿಮಾನಿಗಳಾದ ಜನರು ವೇದವ್ಯಾಖ್ಯಾನ ಮಾಡುವಂತೆ ಹುರಿದುಂಬಿಸಿದರು. ಆಗ ಆ ವಾದಿಯು ಶ್ರೀಮಧ್ವಾಚಾರ್ಯರ ಸಾಮ್ಯವನ್ನು ಹೊಂದಬೇಕೆಂದು ಬಯಸಿ ವೇದವ್ಯಾಖ್ಯಾನವನ್ನು ಮಾಡಲು ಉಪಕ್ರಮಿಸಿದನು. ಅವನು ಮೊಟ್ಟಮೊದಲು 'ಅಗ್ನಿನಾರಯಿಮಶ್ನವತ್' ಎಂಬ ಋಗ್ವೇದದ ಪ್ರಥಮಾಷ್ಟಕದ ಪ್ರಥಮಾಧ್ಯಾಯದ ಪ್ರಥಮವರ್ಗದ ಮೂರನೇ ಸೂಕ್ತವನ್ನು ಪಠಿಸಿ, ಅಲ್ಲಿ ಅಗ್ನಿ+ನಾರಯಿಂ ಎಂದು ಪದಚ್ಛೇದವನ್ನು ಮಾಡಿದನು. ಅಲ್ಲಿ ವಾಸ್ತವವಾಗಿ ಅಗ್ನಿನಾ+ರಯಿಂ ಎಂದು ಪದಚ್ಛೇದವನ್ನು ಮಾಡಬೇಕಾಗಿತ್ತು. ಅವಸರದಿಂದ ಅವನು ಬೇರೆ ರೀತಿ ತಪ್ಪು ತಪ್ಪಾಗಿ ಪದಚ್ಛೇದ ಮಾಡಿದಾಗ ಅವನ ಆ ಅಜ್ಞಾನವನ್ನೂ, ಪ್ರಮಾದವನ್ನೂ, ಗಡಿಬಿಡಿಯನ್ನೂ ನೋಡಿ, ಶಾಸ್ತ್ರಜ್ಞರಾದ ಬ್ರಾಹ್ಮಣರು ಆ ಪುಂಡರೀಕಪುರಿಯನ್ನು ಅಪಹಾಸಮಾಡಿ ನಕ್ಕರು. ಶ್ರೀಮಧ್ವಾಚಾರ್ಯರ ದಾಸಿಯಾದ ಭಾರತೀದೇವಿಯೇ ಪುಂಡರೀಕಪುರಿಯನ್ನು ಪ್ರೇರಿಸಿ ತಪ್ಪು ನುಡಿಸಿದ್ದಳು. ಈ ರೀತಿ ಒಂದು ಕ್ಷಣದಲ್ಲಿ ವಾದಿಯನ್ನು ಜಯಿಸಿ, ಅದ್ಭುತವಾಗಿ ವೇದ ಪ್ರವಚನವನ್ನು ಮಾಡಿ, ವಾದಿಯು ವೇದಪ್ರವಚನ ಮಾಡಲು ಹೊರಟಾಗ ಅವನ ಅಜ್ಞಾನ, ಭ್ರಮಪ್ರಮಾದಾದಿಗಳನ್ನು ಪ್ರಕಟಗೊಳಿಸಿ ಅವನಿಗೆ ತಿರಸ್ಕಾರವುಂಟಾಗುವಂತೆ ಮಾಡಿದ ಮಹಾ ಮಹಿಮರಾದ ಶ್ರೀಮಧ್ವಾಚಾರ್ಯರ ಸೇವಕರ ಸೇವಕರಾಗಿಯಾದರೂ ನಾವು ಆಗುವಂತೆ ಅವರು ಅನುಗ್ರಹಿಸಲಿ. (ಇಲ್ಲಿ ಶ್ರೀಮಧ್ವಾಚಾರ್ಯರ ಸೇವಕರು ತ್ರಿವಿಕ್ರಮ ಪಂಡಿತಾಚಾರ್ಯರು ಅವರ ಮಕ್ಕಳಾದ ಶ್ರೀನಾರಾಯಣ ಪಂಡಿತಾಚಾರ್ಯರು ತನ್ನ ತಂದೆಯ ಸೇವಕರು, ಮತ್ತು ಶಿಷ್ಯರು. ಆದ್ದರಿಂದ ನಾವು ನಾರಾಯಣಪಂಡಿತಾಚಾರ್ಯರು.) ಶ್ರೀಮಧ್ವಾಚಾರ್ಯರ ದಾಸರಾದ ತ್ರಿವಿಕ್ರಮ ಪಂಡಿತಾಚಾರ್ಯರ ದಾಸರಾಗಿ ಜನ್ಮಜನ್ಮಗಳಲ್ಲಿಯೂ ಹುಟ್ಟುವಂತಾಗಲಿ ಎಂದು ಶ್ರೀಮನ್ನಾರಾಯಣ ಪಂಡಿತಾಚಾರ್ಯರೇ ಪ್ರಾರ್ಥನೆ ಮಾಡುತ್ತಿದ್ದಾರೆ ಎಂದೂ ಒಂದು ಅಭಿಪ್ರಾಯವು ಭಾಸವಾಗುತ್ತಿದೆ. ಮೊದಲನೆಯ ತಾತ್ಪರ್ಯದಲ್ಲಿ ವೈಷ್ಣವರೆಲ್ಲರೂ ಆಚಾರ್ಯರ ಶಿಷ್ಯರ (ಯತಿಗಳ ಅಥವಾ ಗೃಹಸ್ಥರ) ಶಿಷ್ಯರಾಗಿ ಆಗುವಂತೆ ಭಗವಂತನನ್ನೂ ವಾಯುದೇವರನ್ನೂ ಪ್ರಾರ್ಥಿಸಬೇಕು ಎಂದು ಆಶಯವನ್ನು ಇಟ್ಟುಕೊಳ್ಳಬೇಕು.

**ವಿಗ್ರಹ** - ದುಷ್ಟಾನೀತಿಃ ಯೇಷು ತೇ ದುರ್ನೀತಯಃ, ದುರ್ನೀತಯಶ್ಚತೇ ವಾದಾಶ್ಚ ದುರ್ನೀತಿವಾದಾಃ, ನಾನಾದುರ್ನೀತಿವಾದಾಃ ಯೇಷಾಂತೇ ನಾನಾದುರ್ನೀತಿವಾದಾಃ ತೈಃ, ಉರುಃಮದಃ ಯಸ್ಯಸಃ ಉರುಮದಃ, ತಂ ಮಾಯಾ ಏಷಾಂ ಅಸ್ತೀತಿ ಮಾಯಿನಃ, ಮಾಯಿನಃ ಭೂತಾಃ ಮಾಯಿಭೂತಾಃ, ಅಸುರಾಣಾಂ ಇಂದ್ರಾಃ ಅಸುರೇಂದ್ರಾಃ ಮಾಯಿಭೂತಾಶ್ಚತೇ ಅಸುರೇಂದ್ರಾಶ್ಚ ಮಾಯಿಭೂತಾಸುರೇಂದ್ರಾಃ ತೈಃ, ವೇದಾಂತಃ ಏಷಾಂ ಅಸ್ತೀತಿ ವೇದಾಂತಿನಃ, ವೇದಾಂತಿಷು ಸಿಂಹಃ ಇವ ವೇದಾಂತಿಸಿಂಹಃ, ಕುತ್ಸಿತಃ ರವಃ ಯಸ್ಯ ಸಃ ಕುರವಃ, ತಂ, ಪ್ರಕೃಷ್ಟಶ್ಚಾಸೌಕಾಂಡಶ್ಚ ಪ್ರಕಾಂಡಃ ತಂ, ವಿಶ್ವೇಷಾಂ ಆಶ್ಚರ್ಯಃ ವಿಶ್ವಾಶ್ಚರ್ಯಃ ವಿಶ್ವಾಶ್ಚರ್ಯಃ ಪ್ರಕಾರಃ ಯಸ್ಯತತ್ ವಿಶ್ವಾಶ್ಚರ್ಯಪ್ರಕಾರಂ,

ವಿಶ್ವಾಶ್ಚರ್ಯಪ್ರಕಾರಂ, ಚ ತತ್ ಪ್ರವಚನಂ ಚ ವಿಶ್ವಾಶ್ಚರ್ಯಪ್ರಕಾರಪ್ರವಚನಂ ತತ್, ಯಸ್ಮಿನ್ ಸ್ಪೃತ್ ಯತ್‌ಸ್ಪೃತ್‌ತಯಾ ಯತ್‌ಸ್ಪೃಧಾ (ಯಸ್ಯಸ್ಪೃತ್ ಯತ್‌ಸ್ಪೃತ್, ತಯಾಯತ್‌ಸ್ಪೃಧಾ ಎಂದಾದರೂ ವಿಗ್ರಹ) ಹಾಸಸ್ಯಯೋಗ್ಯಃ ಹಾಸ್ಯಃ, ದ್ವಿಜೇಷು ವರಾಃ ದ್ವಿಜವರಾಃ ದ್ವಿಜವರಾಣಾಂ ನಿಕರಃ ದ್ವಿಜವರನಿಕರಃ ತಸ್ಮಿನ್, ತಸ್ಯ ದಾಸಾಃ ತದ್ದಾಸಾಃ ತದ್ದಾಸಾನಾಂ ದಾಸಾಃ ತದ್ದಾಸದಾಸಾಃ,

**ಧಾತುರೂಪ** - ವಿ+ಅಜಯತ ವ್ಯಜಯತ, ವ್ಯಜಯೇತಾಂ ವ್ಯಜಯಂತ ವ್ಯಜಯಥಾಃ ವ್ಯಜಯೇಥಾಂ ವ್ಯಜಯಧ್ವಂ, ವ್ಯಜಯೇ ವ್ಯಜಯಾವಹಿ ವ್ಯಜಯಾಮಹಿ, ವಿ ಉಪಸರ್ಗ ಪೂರ್ವಕ ಜಿ ಅಭಿಭವೇ ಎಂಬ ಅಭಿಭವ (ತಿರಸ್ಕಾರ, ಸೋಲಿಸುವುದು) ಎಂಬ ಅರ್ಥವುಳ್ಳ ಜಿಧಾತುವಿನ ಅನದ್ಯತನ ಭೂತಾರ್ಥಕವಾದ ಲಙ್ ಲಕಾರ ಪ್ರಥಮ ಪುರುಷ ಏಕವಚನಂ. ಇಲ್ಲಿ ವಿಪರಾಭ್ಯಾಂ ಜೇಃ ಎಂಬ ಸೂತ್ರದಿಂದ ಜಿ ಧಾತುವಿಗೆ ಆತ್ಮನೇ ಪದ ಬಂದಿದೆ.

ಅಕರೋತ್ ಅಕುರುತಾಂ ಅಕುರ್ವನ್, ಅಕರೋಃ ಅಕುರುತಂ ಅಕುರುತ, ಅಕರವಂ ಅಕುರ್ವ ಅಕುರ್ಮ, ಡುಕೃಞ್‌ಕರಣೇ ಕರಣಾರ್ಥಕ ಕರಣ=ಮಾಡುವುದು ಕೃಧಾತು ಪರಸ್ಮೈಪದಿ ಅನದ್ಯತನ ಭೂತೇ ಲಙ್ ಪ್ರಥಮ ಪುರುಷ ಏಕವಚನಂ ಆಸೀತ್ ಆಸ್ತಾಂ ಆಸನ್, ಆಸೀಃ ಆಸ್ತಂ ಆಸ್ತ, ಆಸಂ ಆಸ್ವ ಆಸ್ಮ ಅಸ ಭುವಿ ಸತ್ತಾರ್ಥಕ ಅಸ್ ಧಾತು ಅಕರ್ಮಕ ಪರಸಮ್ಮೈಪದಿ ಅನದ್ಯತನಭೂತೇ ಲಙ್ ಪ್ರಥಮ ಪುರುಷ ಏಕವಚನೇ 'ಆಸೀತ್' ಇತಿ ರೂಪಂ. ಸ್ಯಾಮ, ಸ್ಯಾತ್ ಸ್ಯಾತಾಂ ಸ್ಯುಃ, ಸ್ಯಾಃ ಸ್ಯಾತಂ ಸ್ಯಾತ, ಸ್ಯಾಂ ಸ್ಯಾವ ಸ್ಯಾಮ ಸತ್ತಾರ್ಥಕ ಅಸ್ ಧಾತು ವಿಧಿಲಿಙ್ ಉತ್ತಮ ಪುರುಷ ಬಹುವಚನಂ.

**ಪ್ರಯೋಗ** - ಯೇನ ಅನೇನ ವೇದಾಂತಿಸಿಂಹೇನ ನಾನಾದುರ್ನೀತಿವಾದ್ಯೈಃ ಮಾಯಿಭೂತಾಸುರೇಂದ್ರೈಃ ವಿಹಿತಃ ಉರುಮದಃ ಕುರವಃ ಪ್ರಕಾಂಡಃ ಪುಂಡರೀಕಃ ವ್ಯಜೀಯತ, ಯೇನ ಚ ಛಂದಸಾಂ ವಿಶ್ವಾಶ್ಚರ್ಯಪ್ರಕಾರ ಪ್ರವಚನಂ ಅಕ್ರಿಯತ, ಅನ್ಯೇನ ಯತ್‌ಸ್ಪೃಧಾ ಛಂಡಸಾಂ ತತ್ ಕುರ್ವತಾ ದ್ವಿಜವರನಿಕರೇ ಹಾಸ್ಯೇನ ಅಭೂಯತ, ಅಸ್ಮಾಭಿಃ ತದ್ದಾಸದಾಸ್ಯೈಃ ಭೂಯೇತ ಕರ್ಮಣಿ ಮತ್ತು ಭಾವೇ ಪ್ರಯೋಗಗಳು.

~~**ಗೂಢಭಾವ ಪ್ರಕಾಶಿಕಾ ವ್ಯಾಖ್ಯಾ ಪ್ರತಿಪದಾರ್ಥ** - ಶ್ಲೋ. ೨೩ ನಾನೇತಿ ನಾನಾ ದುರ್ನೀತಿ ವಾದ್ಯೈಃ ಎಂಬ~~ ಶ್ಲೋಕದ ವ್ಯಾಖ್ಯಾನ ಯಃ ಅಯಂ=ಯಾವ ಈ, ವೇದಾಂತಿಸಿಂಹಃ ಎಂಬಲ್ಲಿ ವೇದಾಂತಿನಾಂ ಸಿಂಹಃ ಎಂದು ವಿಗ್ರಹ ವೇದಾಂತಿನಾಂ ಶ್ರೇಷ್ಠಃ=ವೇದಾಂತಿಗಳಲ್ಲಿ ಶ್ರೇಷ್ಠರು, ಎಂದು ಅರ್ಥ. ಅಂತಹ ಶ್ರೀಮಧ್ವಾಚಾರ್ಯರು, ನಾನಾ ದುರ್ನೀತಿವಾದ್ಯೈಃ ಅಂದರೆ, ನಾನಾ ಪ್ರಕಾರಾಃ=ಅನೇಕ ಪ್ರಕಾರಗಳು, ದುರ್ಜಯವಾದಾಃ=ಜಯಿಸಲು ಅಸಾಧ್ಯವಾದ ವಾದಗಳು, ಯೇಷಾಂ= ಯಾರಿಗೆ ಇದೆಯೋ, ತೈಃ=ಅಂತಹ, ಮಾಯಿ ಭೂತಾಸುರೇಂದ್ರೈಃ=ಮಾಯಾವಾದ್ಯಾಖ್ಯಾಸುರಶ್ರೇಷ್ಠೈಃ, ಮಾಯಿಭೂತಾಸುರೇಂದ್ರೈಃ ಎಂದರೆ ಮಾಯಾವಾದಿಗಳೆಂಬ ಅಸುರಶ್ರೇಷ್ಠರಿಂದ, ಮಾಯಿ ಎಂಬಲ್ಲಿ ಮಾಯಾ ಏಷಾಂ ಅಸ್ತೀತಿ ಮಾಯಿನಃ ಎಂದು ವಿಗ್ರಹ, ಇಲ್ಲಿ ವ್ರೀಹ್ಯಾದಿತ್ವಾತ್ ಮಾಯೀತಿ ಸಾಧು=ವ್ರೀಹ್ಯಾದಿಭ್ಯಶ್ಚ 5-2-116 ಎಂಬ ಸೂತ್ರದಲ್ಲಿ ವ್ರೀಹಿ, ಮಾಯಾ ಶಾಲಾ, ಶಿಖಾ, ಮಾಲಾ ಇತ್ಯಾದಿ ಶಬ್ದಗಳಿಗೆ ಇನಿಪ್ರತ್ಯಯ ಹೇಳಿದ್ದಾರೆ. ಇಲ್ಲಿ ಮಾಯಾ ಶಬ್ದವೂ ಇರುವುದರಿಂದ ಅದಕ್ಕೆ ಇನಿಪ್ರತ್ಯಯ ಬಂದು ಮಾಯಿನ್ ಎಂಬ ನಕಾರಾಂತ ರೂಪವು ಸರಿಯಾಗುತ್ತದೆ ಎಂದು ಅಭಿಪ್ರಾಯ. ವಿಹಿತಂ=ಕೃತಂ, ಪ್ರೇಷಿತಂ ಇತಿಯಾವತ್ ವಿಹಿತಂ ಎಂದರೆ ಮಾಡಲ್ಪಟ್ಟವನು ಎಂದು ಅರ್ಥ. ಕಳುಹಿಸಲ್ಪಟ್ಟವನು ಎಂದು ತಾತ್ಪರ್ಯ. ಉರುಮದಂ=ಉತ್ಕೃಷ್ಟಗರ್ವೋಪೇತಂ=ಉರುಮದಂ ಎಂದರೆ ಹೆಚ್ಚಾದ ಅಹಂಕಾರದಿಂದ ಕೂಡಿದವನನ್ನು ಎಂದು ಅರ್ಥ, ಕುರವಂ=ಕುತ್ಸಿತ ಭಾಷಣಂ, ಕುರವಂ ಎಂದರೆ ಕೆಟ್ಟಮಾತುಳ್ಳವನನ್ನು ಎಂದು ಅರ್ಥ. ಪ್ರಕಾಂಡಂ=ಬಾಣಸದೃಶಂ, ಪ್ರಕಾಂಡಂ ಎಂದರೆ ಬಾಣಕ್ಕೆ ಸಮಾನನಾದವನನ್ನು ಎಂದು ಅರ್ಥ ಕಾಂಡೋಸ್ತ್ರೀ ದಂಡ (ಬಾಣಾರ್ವವರ್ಗಾವಸರವಾರಿಷು) ಇತ್ಯಮರಃ = ಕಾಂಡಶಬ್ದಕ್ಕೆ ಈ ಅಮರಕೋಶಾನುಸಾರವಾಗಿ ಬಾಣ ಎಂದು ಅರ್ಥವೂ ಇದೆ. ಪುಂಡರೀಕಂ=ಪುಂಡರೀಕಾಖ್ಯವಾದಿನಂ=ಪುಂಡರೀಕನೆಂಬ ವಾದಿಯನ್ನು, ವ್ಯಜಯತ= ಜಯಿಸಿದರು, ಜಿ ಜಯೇ ಲಙ್, ವ್ಯಜಯತ ಎಂಬಲ್ಲಿ ಜಿ ಜಯೇ ಅಂದರೆ ಜಿ

ಧಾತುವಿಗೆ ಜಯ ಅಂದರೆ ಅಭಿಭವ ಎಂಬ ಅರ್ಥ, ಆ ಧಾತುವಿನ ಲಙ್‌ಲಕಾರ. **ವಿಪರಾಭ್ಯಾಂ ಜೇಃ ಇತ್ಯಾತ್ಮನೇ** ಪದಂ=ವಿಪರಾಭ್ಯಾಂ ಜೇಃ 1-13-19 ಎಂಬ ಸೂತ್ರದಿಂದ ಆತ್ಮನೇಪದವು. ಶ್ರೀಮಧ್ವಪರಾಕ್ರಮಂ **ಅಸಹಮಾನಾಃ** ಶ್ರೀಮಧ್ವಾಚಾರ್ಯರ ಪರಾಕ್ರಮವನ್ನು ಸಹಿಸದಿರುವ, ಮಾಯಾವಾದಿನಃ=ಮಾಯಾವಾದಿಗಳು, **ಏಕತ್ರ=ಒಂದೆಡೆ**, ಮಿಲಿತ್ವಾ=ಸೇರಿ, ದುರ್ಮಂತ್ರಿಃ=ಕೆಟ್ಟಮಂತ್ರಾಲೋಚನೆ ಉಳ್ಳವರಿಂದ ಕೂಡಿಕೊಂಡು, ಆಲೋಚ್ಯ=**ಆಲೋಚಿಸಿ**, ಪುಂಡರೀಕಾಖ್ಯಂ=ಪುಂಡರೀಕನೆಂಬ ಹೆಸರುಳ್ಳ, ಪ್ರಚಂಡಪಂಡಿತಂ=ಅತಿಸಮರ್ಥನಾದ ಪಂಡಿತನನ್ನು ಶ್ರೀಮಧ್ವಂ ಜೇತುಂ=ಶ್ರೀಮಧ್ವಾಚಾರ್ಯರನ್ನು ಜಯಿಸಲು, ಪ್ರೇಷಿತವಂತಃ=ಕಳುಹಿಸಿದರು. ಶ್ರೀಮಧ್ವಶ್ಚ=ಶ್ರೀಮಧ್ವಾಚಾರ್ಯರಾದರೋ, ತಂ ಆಗತಂ=ಬಂದಿರುವ ಆ ಪಂಡಿತನನ್ನು, ಸಿಂಹಃ=ಸಿಂಹವು, ಜಂಬುಕಂ ಇವ=ನರಿಯನ್ನೋಪಾದಿಯಲ್ಲಿ, ಕ್ಷಣೇನ=ಸ್ವಲ್ಪ ಹೊತ್ತಿನಲ್ಲಿಯೇ, ಆಕ್ಷಿಪ್ತವಾನ್=ನಿರಾಕರಿಸಿದರು, ಇತಿ ಭಾವಃ=ಎಂದು ಅಭಿಪ್ರಾಯವು.

ಯಶ್ಚ=ಯಾವ ಶ್ರೀಮಧ್ವಾಚಾರ್ಯರು, ವಿಶ್ವಾಶ್ಚರ್ಯ ಪ್ರಕಾರ ಪ್ರವಚನಂ, ಎಂದರೆ, ವಿಶ್ವೇಷಾಂ=ಎಲ್ಲರಿಗೂ, ಆಶ್ಚರ್ಯಪ್ರಕಾರಃ=ಆಶ್ಚರ್ಯಕರವಾದ ರೀತಿಯು, ಯಸ್ಯ ತತ್=ಯಾವ ಪ್ರವಚನಕ್ಕಿದೆಯೋ ಅಂತಹುದು, ತಾದೃಶಪ್ರವಚನಂ= ಅಂತಹ ಪ್ರವಚನವನ್ನು, ವಿಶ್ವಾಶ್ಚರ್ಯ ಪ್ರಕಾರಪ್ರವಚನಂ ಅಕರೋತ್=ಕೃತವಾನ್, ಅಕರೋತ್ ಅಂದರೆ ಮಾಡಿದರು. ಈ ಕ್ರಿಯಾಪದಕ್ಕೆ ಕೃತವಾನ್ ಎಂದು ಪ್ರತಿಪದವು. ಲಙ್=ಲಕಾರವು.

ಅನ್ಯಃ ಶಾರ್ದೂಲಾಖ್ಯಃ ಕಶ್ಚಿತ್ ಮಾಯೀ=ಮತ್ತೊಬ್ಬನು ಅಂದರೆ ಶಾರ್ದೂಲನೆಂಬ ಮತ್ತೊಬ್ಬ ಮಾಯಾವಾದಿಯು, ಯತ್‌ಸ್ಪೃಧಾ=ಯಸ್ಯ ಮಧ್ವಸ್ಯ ಸ್ಪರ್ಧಯಾ=ಯಾವ ಶ್ರೀಮಧ್ವಾಚಾರ್ಯರ ಮೇಲಿನ ಸ್ಪರ್ಧೆಯಿಂದ, ಛಂದಸಾಂ ವೇದಾನಾಂ= ಛಂದಸಾಂ ಅಂದರೆ ವೇದಗಳ, ತತ್‌ವ್ಯಾಖ್ಯಾನಂ=ತತ್ ಅಂದರೆ ವ್ಯಾಖ್ಯಾನವನ್ನು, ಕುರ್ವನ್=ಮಾಡುತ್ತಾ, ದ್ವಿಜವರನಿಕರೇ= ಬ್ರಾಹ್ಮಣಶ್ರೇಷ್ಠರ ಸಮೂಹದಲ್ಲಿ, ಹಾಸ್ಯಃ=ಹಾಸವಿಷಯಃ=ಹಾಸ್ಯಃ ಅಂದರೆ ಅಪಹಾಸಕ್ಕೆ ಗುರಿಯಾಗಿ, ಆಸೀತ್=ಆದನು ಶ್ರೀಮಧ್ವಕೃತವೇದವ್ಯಾಖ್ಯಾನಚಾತುರ್ಯಂ=ಶ್ರೀಮಧ್ವಾಚಾರ್ಯರಿಂದ ಮಾಡಲ್ಪಟ್ಟ ವೇದಪ್ರವಚನದ ಜಾಣ್ಮೆಯನ್ನು, ಶ್ರುತವಂತಃ ಪಂಡಿತಾಃ=ಕೇಳಿರತಕ್ಕ ಪಂಡಿತರು, ಶಾರ್ದೂಲಾಖ್ಯಮಾಯಾವಾದಿನಂ ಚ=ಶಾರ್ದೂಲನೆಂಬ ಮಾಯಾವಾದಿಯನ್ನೂ, ಪ್ರಾಪ್ಯ=ಹೊಂದಿ, ವೇದಾರ್ಥಂ=ವೇದಾರ್ಥವನ್ನು, ಪಪ್ರಚ್ಛುಃ=ಕೇಳಿದರು. ತದಾ=ಆಗ, ಸಃ=ಅವನು, ~~ಮಧ್ವಸಾಮ್ಯಂ=ಶ್ರೀಮಧ್ವಾಚಾರ್ಯರ ಸಾಮ್ಯವನ್ನು, ಪ್ರಾಪ್ತುಂ=ಹೊಂದಲು, ವೇದವ್ಯಾಖ್ಯಾನಂ=ವೇದಪ್ರವಚನವನ್ನು~~ ಉಪಕ್ರಮ್ಯ=ಪ್ರಾರಂಭಿಸಿ, ಅಗ್ನಿನಾರಯಿಮಶ್ನವದಿತಿ ಮಂತ್ರೇ=ಅಗ್ನಿನಾರಯಿಮಶ, ಎಂಬ ಮಂತ್ರದಲ್ಲಿ 'ಅಗ್ನಿ' ಇತಿ ಪದಚ್ಛೇದಂ ಕೃತ್ವಾ=ಅಗ್ನಿ ಎಂದು ಪದಚ್ಛೇದವನ್ನು ಮಾಡಿ, 'ನಾರಂ' ಇತಿ ಪದಚ್ಛೇದಂ='ನಾರಂ' ಎಂದು ಪದಚ್ಛೇದವನ್ನು, ಶೈಘ್ರ್ಯಾತ್=ಅವಸರದಿಂದ, ಕೃತವಾನ್=ಮಾಡಿದನು. ತಮ್ ಏವಂ ವಿಧಂ=ಏವಂ ವಿಧಂ ತಂ=ಹೀಗೆ ಇರತಕ್ಕ ಅವನನ್ನು, ವೀಕ್ಷ್ಯ=ನೋಡಿ ವಿಪ್ರಾಃ=ಬ್ರಾಹ್ಮಣರು, ಸಭಾಯಾಂ=ಸಭೆಯಲ್ಲಿ, ಜಹಸುಃ=ನಕ್ಕರು, ಹಾಸ್ಯ ಮಾಡಿದರು ಇತಿ ಭಾವಃ=ಎಂದು ಅಭಿಪ್ರಾಯವು. ತದ್ದಾಸದಾಸಾಃ=ತದ್ದಾಸದಾಸಾಃ ಎಂದರೆ, ತಸ್ಯ ಶ್ರೀಮಧ್ವಸ್ಯ=ಅಂತಹ ಶ್ರೀಮಧ್ವಾಚಾರ್ಯರ, ದಾಸ ದಾಸಾಃ=ಸೇವಕರ ಸೇವಕರಾಗಿ, ಸ್ಯಾಮ=ಎಂದರೆ ಭವೇಮ=ನಾವು ಆಗಬೇಕಾಗಿದೆ. ಅಸ ಭುವಿ ಲಿಙ್=ಸ್ಯಾಮ ಎಂಬುದು ಅಸ ಭುವಿ= ಭೂಧಾತುವಿನ ಅರ್ಥವಾದ ಸತ್ತಾ ಎಂಬ ಅರ್ಥದಲ್ಲಿರುವ (ಸತ್ತಾ=ಆಗುವಿಕೆ) ಅಸ್ ಧಾತುವಿನ ವಿಧಿಲಿಙ್ ಲಕಾರದ ರೂಪ. ಇಲ್ಲಿಗೆ ಇಪ್ಪತ್ತಮೂರನೆಯ ಶ್ಲೋಕದ ವ್ಯಾಖ್ಯಾನವು ಸಮಾಪ್ತವಾಯಿತು.

**ಅವತಾರಿಕಾ** - ಇನ್ನು ಮುಂದೆ ೨೪ನೆಯ ಶ್ಲೋಕದಲ್ಲಿ ಆಚಾರ್ಯರು ಪದ್ಮತೀರ್ಥನನ್ನು ಸೋಲಿಸಿದುದು, ಆಚಾರ್ಯರ ಶಿಷ್ಯರು ಮಾಯಾವಾದಿಗಳನ್ನು ಪರಿಹಾಸವಚನಗಳಿಂದ ನಿಂದಿಸಿದುದು ಇತ್ಯಾದಿ ವೃತ್ತಾಂತವನ್ನು ಹೇಳುತ್ತಾರೆ. ಶ್ರೀಮತ್ ಸುಮಧ್ವವಿಜಯ ಗ್ರಂಥದ ೧೫ನೆಯ ಸರ್ಗದ ೪೫ನೆಯ ಶ್ಲೋಕದಿಂದ ೫೪ನೆಯ ಶ್ಲೋಕಪೂರ್ತಿಯಾಗಿ ೧೪ ಶ್ಲೋಕಗಳಲ್ಲಿ ಹೇಳಿರುವ ವಿಷಯಗಳನ್ನು ಈ ಶ್ಲೋಕದಲ್ಲಿ ಸಂಗ್ರಹಿಸಿರುತ್ತಾರೆ.

**ಪದ್ಮಾಖ್ಯಂ ಸಿಂಧುರಾಜಂ ಪ್ರಿಯಜನಪರಮಾಗಸ್ಕೃತಂ ಪ್ರಾಪ್ಯ ಭೀತೇ**
**ರನ್ಯಾನ್ ಕುರ್ವಾಣಮಗ್ರೇ ಸಪದಿ ನಿಜಗೃಹೇ ಗೋಗಣೈರ್ಮಧ್ವಪಾರ್ಥಃ।**

**ಯೋ ಯದ್ದಾಸೋಕ್ತಿಬಾಣೈರ್ವಿದಲಿತಹೃದಯಾ ದುದ್ರುವುರ್ಮಾಯಿದೈತ್ಯಾ**
**ಸ್ಸರ್ವಜ್ಞಾಹ್ವೋ ಹರಿರ್ಯೋ ಜಗತಿ ವಿಜಯತೇ ಸ ಪ್ರದದ್ಯಾಜ್ಜಯಂ ನಃ ।।೨೪।।**

## ಗೂಢಭಾವಪ್ರಕಾಶಿಕಾ ವ್ಯಾಖ್ಯಾನ

**ಪದ್ಮಾಖ್ಯಮಿತಿ** - ಯಃ, ಮಧ್ವಪಾರ್ಥಃ, ಮಧ್ವಾಖ್ಯಾರ್ಜುನಃ ಪ್ರಿಯಜನಪರಮಾಗಸ್ಕೃತಂ, ಪ್ರಿಯಜನಸ್ಯ ಶಂಕರಭಟ್ಟಸ್ಯ ಪರಮಾಗಃ ದ್ರೋಹಃ, ತಂ ಕರೋತೀತಿ ತಂ, ಭೀತೇಃ ಮಧ್ವಭಯಾತ್ ಅನ್ಯಾನ್ ವಾದಿನಃ ಅಗ್ರೇ ಸ್ವಪುರತಃ ಕುರ್ವಾಣಂ ನಿಕ್ಷಿಪಂತಂ ಪದ್ಮಾಖ್ಯಂ ಪದ್ಮತೀರ್ಥನಾಮಾನಂ ಸಿಂಧುರಾಜಂ ಸಿಂಧು ದೇಶಾಧಿಪತಿಂ ಸೈಂಧವಂ, ರಾಜಾಹಸ್ಸಖಿಭ್ಯಷ್ಟಜಿತಿ ಸಿಂಧುರಾಜಮಿತಿಸಾಧು। ಪ್ರಾಪ್ಯ, ಗೋಗಣೈಃ ಗವಾಂ ವಚನಾನಾಂ ಯುಕ್ತಿರೂಪಾಣಾಂ ಗಣೈಃ ಸಮೂಹೈಃ ಸಪದಿ ತತ್ಕ್ಷಣ ಏವ ನಿಜಗೃಹೇ ನಿಗೃಹೀತವಾನ್, ಗ್ರಹ ಉಪಾದಾನೇ ಲಿಟ್ ಅಯಂ ಭಾವಃ। ಮಧ್ವಕೃತಭಾಷ್ಯಾದಿ ಕೋಶಕವಲಿಕಾಂ ಶಂಕರಭಟ್ಟಾಖ್ಯ ಮಧ್ವಶಿಷ್ಯಗೃಹೇ ಸ್ಥಿತಾಂ ಶ್ರುತ್ವಾ ಪದ್ಮತೀರ್ಥಾಖ್ಯ ಮಾಯಾವಾದೀ ನಿಶೀಥೇ ತದ್ಗೃಹಂ ಪ್ರಾಪ್ಯ ತಂ ಬಲಾತ್ಕೃತ್ಯ ಕವಲಿಕಾಮುಪಹೃತ್ಯ ಸ್ವಗ್ರಾಮಂ ಪ್ರಾಪ್ತವಾನ್। ಶ್ರೀಮಧ್ವಸ್ತು ಪ್ರಾತಸ್ತುಚ್ಛ್ರುತ್ವಾ ಸ್ವಶಿಷ್ಯೈಃ ಸ್ವಹಿತಃ ಸನ್ ಭೀತ್ಯಾsನ್ಯಾನ್ ಪುರಸ್ಕೃತ್ಯ ಪೃಷ್ಠತಃ ಸ್ಥಿತಂ ಪದ್ಮತೀರ್ಥಂ ಪ್ರಾಪ್ಯ ಕ್ಷಣೇನ ಯುಕ್ತಿಭಿರ್ಜಿತವಾನ್। ವನವಾಸೇ ದ್ರೌಪದೀಮುಪಹೃತ್ಯ ಗಚ್ಛಂತಂ ಸೈಂಧವಂ ಅರ್ಜುನೋ ಬಾಣೈರ್ಯಥಾ ತಥೇತಿ ಶಿಷ್ಟಂ ತು ರಹಸ್ಯಂ ಭಾವಪ್ರಕಾಶಿಕಾತೋsವಗಂತವ್ಯಂ ಯದ್ದಾಸೋಕ್ತಿಬಾಣೈಃ ಯಸ್ಯ ಶ್ರೀಮಧ್ವಸ್ಯ ದಾಸಾನಾಂ ಶಿಷ್ಯಾಣಾಂ ಉಕ್ತ್ಯಾಖ್ಯಬಾಣೈಃ, ಬಾಣತುಲ್ಯೈ ವಚನೈರಿತ್ಯರ್ಥಃ। ವಿದಲಿತಹೃದಯಾಃ ವಿಭಿನ್ನಮನಸ್ಕಾಃ ಸಂತೋ ಮಾಯಿದೈತ್ಯಾಃ ದುದ್ರುವುಃ ಪಲಾಯಿತವಂತಃ। ದ್ರುಗತೌ ಲಿಟ್ ಯಃ ಸರ್ವಜ್ಞಾಹ್ವಃ ಪೂರ್ಣಪ್ರಜ್ಞನಾಮಾ ಹರಿಃ ನರಸಿಂಹಃ ಜಗತಿ ವಿಜಯತೇ ಉತ್ಕೃಷ್ಟೋ ವರ್ತತೇ, ಸಃ ಶ್ರೀಮಧ್ವಃ ನಃ ಅಸ್ಮಭ್ಯಂ ಜಯಂ ಪ್ರದದ್ಯಾತ್ ಪ್ರಯಚ್ಛೇತ್ ಡುಧಾಞ್ ಧಾರಣ (ಪೋಷಣಯೋಃ) ಲಿಙ್.

**ಪದಚ್ಛೇದ** - ಪದ್ಮಾಖ್ಯಂ, ಸಿಂಧುರಾಜಂ, ಪ್ರಿಯಜನಪರಮಾಗಸ್ಕೃತಂ, ಪ್ರಾಪ್ಯ, ಭೀತೇಃ, ಅನ್ಯಾನ್, ಕುರ್ವಾಣಂ, ಅಗ್ರೇ, ಸಪದಿ, ನಿಜಗೃಹೇ, ಗೋಗಣೈಃ, ಮಧ್ವಪಾರ್ಥಃ, ಯಃ ಯದ್ದಾಸೋಕ್ತಿಬಾಣೈಃ, ವಿದಲಿತ ಹೃದಯಾಃ, ದುದ್ರುವುಃ, ಮಾಯಿದೈತ್ಯಾಃ, ಸರ್ವಜ್ಞಾಹ್ವಃ ಹರಿಃ, ಯಃ, ಜಗತಿ, ವಿಜಯತೇ, ಸಃ, ಪ್ರದದ್ಯಾತ್, ಜಯಂ, ನಃ।

**ಅನ್ವಯ** - ಯಃ ಮಧ್ವಪಾರ್ಥಃ ಪ್ರಿಯಜನಪರಮಾಗಸ್ಕೃತಂ, ಭೀತೇಃ ಅನ್ಯಾನ್ ಅಗ್ರೇ ಕುರ್ವಾಣಂ, ಪದ್ಮಾಖ್ಯಂ ಸಿಂಧುರಾಜಂ ಪ್ರಾಪ್ಯ, ಗೋಗಣೈಃ ಸಪದಿ ನಿಜಗೃಹೇ। ಯದ್ದಾಸೋಕ್ತಿಬಾಣೈಃ ವಿದಲಿತಹೃದಯಾಃ, ಮಾಯಿದೈತ್ಯಾಃ, ದುದ್ರುವುಃ, ಯಃ ಸರ್ವಜ್ಞಾಹ್ವಃ, ಹರಿಃ, ಜಗತಿ ವಿಜಯತೇ ಸಃ ನಃ ಜಯಂ ಪ್ರದದ್ಯಾತ್।

**ಅನ್ವಯಾರ್ಥ** - ಯಃ=ಯಾವ, ಮಧ್ವಪಾರ್ಥಃ=ಶ್ರೀಮಧ್ವಾಚಾರ್ಯರೆಂಬ ಅರ್ಜುನನು, ಪ್ರಿಯಜನಪರಮಾಗಸ್ಕೃತಂ ಪ್ರಿಯಜನ=ತನಗೆ ಪ್ರೀತಿವಿಷಯನಾದ ಶಂಕರಭಟ್ಟ ಎಂಬುವವನಿಗೆ, ಪರಮ=ಹೆಚ್ಚಾದ, ಆಗಃ=ಅಪರಾಧವನ್ನು, ಕೃತಂ= ಮಾಡಿರುವ, (ಶಂಕರಾರ್ಯನೆಂಬ ತನ್ನ ಪ್ರೀತಿಗೆ ವಿಷಯನಾದ ಪಂಡಿತನಿಗೆ ದ್ರೋಹವನ್ನು ಮಾಡಿದ) ಭೀತೇಃ=ಶ್ರೀ ಮಧ್ವಾಚಾರ್ಯರ ಭಯದಿಂದ, ಅನ್ಯಾನ್=ಇತರ ವಾದಿಗಳನ್ನು, ಅಗ್ರೇ=ತನ್ನ ಮುಂದೆ, ಕುರ್ವಾಣಂ=ನಿಲ್ಲಿಸಿರುವ, ಪದ್ಮಾಖ್ಯಂ=ಪದ್ಮತೀರ್ಥನೆಂಬ ಹೆಸರುಳ್ಳ, ಸಿಂಧುರಾಜಂ=ಸಿಂಧುದೇಶಾಧಿಪತಿಯಾದ ಜಯದ್ರಥನನ್ನು, ಪ್ರಾಪ್ಯ=ಹೊಂದಿ (ತಡೆದು) ಗೋಗಣೈಃ=ಯುಕ್ತಿರೂಪವಾದ ಮಾತುಗಳ ಸಮೂಹಗಳಿಂದ, ಸಪದಿ=ಕೂಡಲೇ (ಆ ಕ್ಷಣದಲ್ಲಿಯೇ) ನಿಜಗೃಹೇ=ನಿಗ್ರಹಿಸಿದರು (ಸೋಲಿಸಿದರು) ಯದ್ದಾಸೋಕ್ತಿಬಾಣೈಃ=ಯಾವ ಶ್ರೀಮಧ್ವಾಚಾರ್ಯರ ಶಿಷ್ಯರ ಮಾತುಗಳೆಂಬ ಬಾಣಗಳಿಂದ, ವಿದಲಿತ ಹೃದಯಾಃ (ಸಂತಃ) ಸೀಳಿಹೋದ ಹೃದಯವುಳ್ಳವರಾಗಿ (ಧೈರ್ಯಗೆಟ್ಟು) ಮಾಯಿದೈತ್ಯಾಃ= ಮಾಯಾವಾದಿಗಳೆಂಬ ಅಸುರರು, ದುದ್ರುವುಃ=ಪಲಾಯನ ಮಾಡಿದರೋ, ಯಃ=ಯಾರು, ಸರ್ವಜ್ಞಾಹ್ವಃ=ಪೂರ್ಣಪ್ರಜ್ಞರೆಂಬ ಹೆಸರುಳ್ಳ ಹರಿಃ=ನರಸಿಂಹದೇವರಾಗಿ, ಜಗತಿ=ಭೂಮಂಡಲದಲ್ಲಿ, ವಿಜಯತೇ=ಉತ್ಕೃಷ್ಟರಾಗಿದ್ದರೋ. ಸಃ=ಅಂತಹ

ಶ್ರೀಮಧ್ವಾಚಾರ್ಯರು, **ನಃ=ನಮಗೆ, ಜಯಂ=ಉತ್ಕರ್ಷವನ್ನು, ಪ್ರದದ್ಯಾತ್=ಕೊಡಲಿ.**

**ತಾತ್ಪರ್ಯ** - ಶ್ರೀಮಧ್ವಾಚಾರ್ಯರು ತನ್ನ ಭಾಷ್ಯಾದಿ ಗ್ರಂಥಗಳ ಸಂಪುಟವನ್ನು (ಸಂಗ್ರಹವನ್ನು) ಶಂಕರಭಟ್ಟನೆಂಬ ಶಿಷ್ಯನ ಮನೆಯಲ್ಲಿ ಇಟ್ಟಿದ್ದರು. ಪದ್ಮತೀರ್ಥನೆಂಬ ಮಾಯಾವಾದಿಯು ಈ ವಾರ್ತೆಯನ್ನು ಕೇಳಿ ತಿಳಿದು ಮಧ್ಯರಾತ್ರಿಯಲ್ಲಿ ಆ ಶಂಕರಾರ್ಯರ ಮನೆಗೆ ಹೋಗಿ ಬಲಾತ್ಕಾರದಿಂದ ಆ ಗ್ರಂಥಸಂಗ್ರಹವನ್ನು ಅಪಹರಿಸಿ ತನ್ನ ಊರಿಗೆ ಬಂದನು. ಬೆಳಿಗ್ಗೆ ಆ ಸಮಾಚಾರ ಕೇಳಿದ ಕೂಡಲೇ ಶ್ರೀಮಧ್ವಾಚಾರ್ಯರು ತನ್ನ ಶಿಷ್ಯರ ಸಹಿತವಾಗಿ ಬೇಗನೆ ಅಲ್ಲಿಗೆ ಬಂದರು. ಪದ್ಮತೀರ್ಥನು ಹೆದರಿ ಇತರರನ್ನು ಮುಂದಿಟ್ಟುಕೊಂಡು ತಾನು ಹಿಂದೆ ನಿಂತಿದ್ದನು. ಅಂತಹ ಪದ್ಮತೀರ್ಥನನ್ನೂ ಅವನ ಅನುಯಾಯಿಗಳನ್ನೂ ಶ್ರೀಮಧ್ವಾಚಾರ್ಯರು ಒಂದು ಕ್ಷಣದಲ್ಲಿ ಜಯಿಸಿದರು. ಹಿಂದೆ ವನವಾಸಕಾಲದಲ್ಲಿ ಒಂದು ಬಾರಿ ಪಂಚಪಾಂಡವರು ಇಲ್ಲದಿರುವಾಗ ಸಿಂಧುದೇಶಾಧಿಪತಿಯಾದ ಜಯದ್ರಥನು ಅವರ ಆಶ್ರಮಕ್ಕೆ ಬಂದು ಒಬ್ಬಂಟಿಗಳಾಗಿದ್ದ ದ್ರೌಪದೀಯನ್ನು ರಥದಲ್ಲಿ ಕುಳ್ಳಿರಿಸಿ ಅಪಹರಿಸಿದಾಗ ಅರ್ಜುನನು ಸೈಂಧವನ ಬೆನ್ನಟ್ಟಿ ಬಾಣಗಳಿಂದ ಪ್ರಹರಿಸಿ ಸೋಲಿಸಿದಂತೆ ಇಂದು ಶ್ರೀಮಧ್ವಾಚಾರ್ಯರೆಂಬ ಅರ್ಜುನನು ದ್ರೌಪದಿಯಂತೆ ತನಗೆ ಪ್ರಿಯರಾದ ಶಂಕರಾಚಾರ್ಯರಿಗೆ ದ್ರೋಹಮಾಡಿದ ಪದ್ಮತೀರ್ಥನೆಂಬ ಸೈಂಧವನನ್ನು ತನ್ನ ಯುಕ್ತಿಬಾಣಗಳ ಸಮೂಹಗಳಿಂದ ಪರಾಜಯಗೊಳಿಸಿದರು. ಪದ್ಮತೀರ್ಥ ಮತ್ತು ಅವನ ಅನುಯಾಯಿಗಳು ಆಚಾರ್ಯರ ಶಿಷ್ಯರ ವಿಧಾವತ ವಿಧಾವತ ಓಡಿರಿ ಓಡಿರಿ ಇತ್ಯಾದಿಯಾದ ಮಾತುಗಳೆಂಬ ಬಾಣಗಳಿಂದ ಧೈರ್ಯಗೆಟ್ಟು ಓಡಿಹೋದರು. ನರಸಿಂಹದೇವರು ಉಗುರುಗಳಿಂದ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದಂತೆ ಯುಕ್ತಿಗಳೆಂಬ ಉಗುರುಗಳಿಂದ ಶತ್ರುಗಳ ಮರ್ಮವನ್ನು ಭೇದಿಸಿದ ಶ್ರೀಮಧ್ವಾಚಾರ್ಯರೆಂಬ ನರಸಿಂಹನು ಉತ್ಕೃಷ್ಟನಾಗಿದ್ದಾನೆ. ಈ ಮಧ್ವ ನೃಸಿಂಹನು ನಮಗೆ ಉತ್ಕರ್ಷವನ್ನು ಕರುಣಿಸಲಿ ಎಂದು ಪ್ರಾರ್ಥಿಸಿದ್ದಾರೆ.

**ವಿಗ್ರಹ** - ಪದ್ಮಃ ಇತಿ ಆಖ್ಯಾ ಯಸ್ಯ ಸಃ ಪದ್ಮಾಖ್ಯಃ ತಂ, ಸಿಂಧೂನಾಂ ರಾಜಾ ಸಿಂಧುರಾಜಃ ತಂ, ಇಲ್ಲಿ ರಾಜಾಹಸ್ಸಖಿಭ್ಯಷ್ಟಚ್ ಎಂಬ ಸೂತ್ರದಿಂದ ಸಮಾಸದಲ್ಲಿ ರಾಜನ್ ಶಬ್ದಕ್ಕೆ ಟಚ್ ಪ್ರತ್ಯಯ ಬಂದು ಅಕಾರಾಂತವಾಗಿದೆ. ಆದ್ದರಿಂದ ಸಿಂಧುರಾಜಂ ಎಂಬ ಪ್ರಯೋಗವು ಸಾಧುವಾಗಿದೆ ಎಂದು ತಿಳಿಯಬೇಕು. ಪ್ರಿಯಶ್ಚಾಸೌ ಜನಶ್ಚ ಪ್ರಿಯಜನಃ, ಪರಮುಂಚತತ್ ಆಗಶ್ಚ ಪರಮಾಗಃ, ಪರಮಾಗಃ ಕರೋತೀತಿ ಪರಮಾಗಸ್ಕೃತ್ ಪ್ರಿಯಜನಸ್ಯ ಪರಮಾಗಸ್ಕೃತ್ ಪ್ರಿಯಜನಪರಮಾಗಸ್ಕೃತ್ ತಂ, ಗವಾಂ ಗಣಾಃ ಗೋಗಣಾಃ ತೈಃ, ಮಧ್ವಃ ಏವ ಪಾರ್ಥಃ ಮಧ್ವಪಾರ್ಥಃ ಯಸ್ಯದಾಸಾಃ ಯದ್ದಾಸಾಃ, ಉಕ್ತಯ ಏವ ಬಾಣಾಃ ಉಕ್ತಿಬಾಣಾಃ ಯದ್ದಾಸಾನಾಂ ಉಕ್ತಿಬಾಣಾಃ ಯದ್ದಾಸೋಕ್ತಿಬಾಣಾಃ ತೈಃ ವಿದಲಿತಂ ಹೃದಯಂ ಯೇಷಾಂ ತೇ ವಿದಲಿತಹೃದಯಾಃ, ಮಾಯಾ ಏಷಾಂ ಅಸ್ತೀತಿ ಮಾಯಿನಃ, ಮಾಯಿನಃ ಏವ ದೈತ್ಯಾಃ ಮಾಯಿದೈತ್ಯಾಃ, ಸರ್ವಜ್ಞಃ ಇತಿ ಆಹ್ವಾಯಸ್ಯ ಸಃ ಸರ್ವಜ್ಞಾಹ್ವಃ, ಆಹ್ವಾ=ಹೆಸರು, ಆಖ್ಯಾಹ್ವೇ ಅಭಿಧಾನಂ ಚ ನಾಮಧೇಯಂ ಚ ನಾಮ ಚ ಅಮರ.

**ಕ್ರಿಯಾಪದ** - ನಿ+ಜಗೃಹೇ, ಜಗೃಹಾತೇ ಜಗೃಹಿರೇ, ಜಗೃಹಿಷೇ ಜಗೃಹಾಥೇ ಜಗೃಹಿಢ್ವೇ ಜಗೃಹಿಧ್ವೇ, ಜಗೃಹೇ ಜಗೃಹಿವಹೇ ಜಗೃಹಿಮಹೇ. ಗ್ರಹ ಉಪಾದಾನೇ ನಿ ಉಪಸರ್ಗ, ಉಭಯಪದೀ, ಪ್ರಕೃತೇ ಆತ್ಮನೇಪದಿ ಲಿಟ್ ಪ್ರಥಮ ಪು ಏಕ. ದುದ್ರುವುಃ, ದುದ್ರಾವ ದುದ್ರುವತುಃ ದುದ್ರುವುಃ, ದುದ್ರೋಥ ದುದ್ರುವಥುಃ ದುದ್ರುವ, ದುದ್ರಾವ ದುದ್ರವ, ದುದ್ರುವ ದುದ್ರುಮ. ದ್ರು ಗತೌ ಪರಸ್ಮೈಪದೀ, ಲಿಟ್. ಪ್ರಥಮ ಪು. ಏಕ. ವಿ+ಜಯತೇ ವಿಜಯೇತೇ ವಿಜಯಂತೇ, ವಿಜಯಸೇ ವಿಜಯೇಥೇ ವಿಜಯಧ್ವೇ, ವಿಜಯೇ ವಿಜಯಾವಹೇ ವಿಜಯಾವಹೇ ವಿ ಉಪಸರ್ಗಪೂರ್ವಕ ಜಿಜಯೇ ಧಾತು ಆತ್ಮನೇಪದಿ ವರ್ತಮಾನೇ ಲಟ್ ಪ್ರಥಮ ಪು. ಏಕ ಪ್ರ+ದದ್ಯಾತ್, ದದ್ಯಾತಾಂ ದದ್ಯುಃ, ದದ್ಯಾಃ ದದ್ಯಾತಂ ದದ್ಯಾತ, ದದ್ಯಾಂ ದದ್ಯಾವ ದದ್ಯಾಮ. ಪ್ರ ಉಪಸರ್ಗ ಡುದಾಞ (ದಾ) ದಾನೇ ದಾನಾರ್ಥಕ ದಾಧಾತು ಪರಸ್ಮೈಪದಿ ವಿಧಿಲಿಙ್. ಪ್ರಥಮ ಪುರುಷ ಏಕವಚನಂ.

**ಪ್ರಯೋಗ** - ಯೇನ ಮಧ್ವಪಾರ್ಥೇನ ಪ್ರಿಯ (ಜನಪರಮಾಗಸ್ಕೃತ್ ಭೀತೇಃ ಅನ್ಯಾನ್ ಅಗ್ರೇ ಕುರ್ವಾಣಃ

ಪದ್ಮಾಖ್ಯಃ ಸಿಂಧುರಾಜಃ ಪ್ರಾಪ್ಯ (ಹೊಂದಲ್ಪಟ್ಟು) ಗೋಗಣೈಃ ಸಪದಿ ನಿಜಗೃಹೇ। ಯದ್ದಾಸೋಕ್ತಿ **ಬಾಣೈಃ ವಿದಲಿತಹೃದಯೈಃ** ಮಾಯಿದೈತ್ಯೈಃ ದುದ್ರುವೇ ಯೇನ ಸರ್ವಜ್ಞಾಹ್ವೇನ ಹರಿಣಾ ಜಗತಿ ವಿಜಯತೇ, ತೇನ ನಃ ಜಯಃ **ಪ್ರದೀಯೇತ**।

**ಗೂಢಭಾವಪ್ರಕಾಶಿಕಾ ಕರ್ನಾಟಕ ಭಾಷಾನುವಾದ** - ಪದ್ಮಾಖ್ಯಂ ಎಂದು ಶ್ಲೋಕ ಪ್ರಾರಂಭವು. **ಯಃ=ಯಾವ,** ಮಧ್ವಪಾರ್ಥಃ=ಮಧ್ವಾಖ್ಯಾರ್ಜುನಃ ಮಧ್ವಪಾರ್ಥಃ ಎಂದರೆ ಶ್ರೀಮಧ್ವಾಚಾರ್ಯರೆಂಬ ಅರ್ಜುನನು, **ಪ್ರಿಯಜನ** ಪರಮಾಗಸ್ಕೃತಂ= ಪ್ರಿಯಜನಸ್ಯ ಶಂಕರಭಟ್ಟಸ್ಯ=ಪ್ರಿಯಜನಸ್ಯ ಎಂದರೆ ಪ್ರೀತಿಪಾತ್ರನಾದ ಶಂಕರಭಟ್ಟರಿಗೆ (ಶಂಕರಾರ್ಯ**ರಿಗೆ**) ಪರಮಾಗಃ= ದ್ರೋಹಃ, ಪರಮಾಗಃ ಎಂದರೇ ದ್ರೋಹವು, ತಂ=ಅದನ್ನು (ದ್ರೋಹವನ್ನು) ಕರೋತೀತಿ ತಂ=ಮಾಡು**ತ್ತಾನೆ** ಎಂದು ಪ್ರಿಯಜನ ಪರಮಾಗಸ್ಕೃತಂ ಎಂಬ ಪದದಿಂದ ಹೇಳಲ್ಪಡುವ, ಭೀತೇಃ=ಮಧ್ವಭಯಾತ್, ಭೀತೇಃ ಎಂದರೆ ಶ್ರೀಮಧ್ವಾಚಾರ್ಯರ ಭಯದಿಂದ, ಅನ್ಯಾನ್=ವಾದಿನಃ, ಅನ್ಯಾನ್ ಎಂದರೆ ಇತರ ವಾದಿಗಳನ್ನು, ಅಗ್ರೇ=ಸ್ವಪುರತಃ, ಅಗ್ರೇ ಎಂದರೆ ತನ್ನ ಮುಂದೆ, ಕುರ್ವಾಣಂ=ನಿಕ್ಷಿಪಂತಂ, ಕುರ್ವಾಣಂ ಎಂದರೆ ಇಟ್ಟುಕೊಂಡಿರುವವನನ್ನು ಎಂದು ಅರ್ಥ. ಪದ್ಮಾಖ್ಯಂ=ಪದ್ಮ ತೀರ್ಥ ನಾಮಾನಂ, ಪದ್ಮಾಖ್ಯಂ ಎಂದರೆ ಪದ್ಮತೀರ್ಥ ಎಂಬ ಹೆಸರುಳ್ಳ, ಸಿಂಧುರಾಜಂ= ಸಿಂಧುದೇಶಾಧಿಪತಿಂ ಸೈಂಧವಂ ಸಿಂಧುರಾಜಂ ಎಂದರೆ ಸಿಂಧುದೇಶಕ್ಕೆ ಒಡೆಯನಾದ ಸೈಂಧವನನ್ನು (ದುರ್ಯೋಧನನ ತಂಗಿ ದುಶ್ಶಲೆಯ ಗಂಡನಾದ ಜಯದ್ರಥನನ್ನು ರಾಜಾಹಸ್ಸಖಿಭ್ಯಷ್ಟಜಿತಿ ಸಿಂಧುರಾಜಮಿತಿ ಸಾಧು=ರಾಜಾಹಸ್ಸಖಿಭ್ಯಃ ಟಚ್ ಎಂಬ ಸೂತ್ರದಿಂದ ಸಮಾಸದ ಅಂತದಲ್ಲಿರುವ ರಾಜನ್ ಶಬ್ದಕ್ಕೆ ಟಚ್ ಪ್ರತ್ಯಯ ಬಂದು ಸಿಂಧುರಾಜ ಎಂಬ ಅಕಾರಾಂತ ಶಬ್ದವು ಸಿದ್ಧಿಸುತ್ತದೆ ಅದರ ದ್ವಿತೀಯಾ ವಿಭಕ್ತಿಯಲ್ಲಿ ಸಿಂಧುರಾಜಂ ಎಂದು ರೂಪವು ಸಾಧು (ಸರಿ) ಆಗಿದೆ ಪ್ರಾಪ್ಯ=ಹೊಂದಿ, (ಎದುರಿಸಿ) ಗೋಗಣೈಃ=ಗವಾಂ ವಚನಾನಾಂ ಗಣೈಃ ಸಮೂಹೈಃ=ಗೋಗಣೈಃ ಎಂದರೆ ಗವಾಂ=ಮಾತುಗಳ, ಗಣೈಃ ಸಮೂಹಗಳಿಂದ, ಸಪದಿ=ತತ್ಕ್ಷಣ ಏವ, ಸಪದಿ ಎಂದರೆ ತತ್ಕ್ಷಣದಲ್ಲಿಯೇ, ಕೂಡಲೇ ನಿಜಗೃಹೇ ನಿಗೃಹೀತವಾನ್, ನಿಜಗೃಹೇ ಎಂದರೆ, ನಿಗ್ರಹಿಸಿದರು, ಪರಾಜಯಗೊಳಿಸಿದರು ಗ್ರಹಉಪಾದಾನೇ ಲಿಟ್=ನಿಜಗೃಹೇ ಎಂಬಲ್ಲಿ ಉಪಾದಾನ ಸ್ವೀಕರಿಸುವುದು ಎಂಬ ಅರ್ಥವುಳ್ಳ ಗ್ರಹ್ ಧಾತುವು, ಅದರ ಲಿಟ್‌ಲಕಾರದಲ್ಲಿ 'ನಿ' ಉಪಸರ್ಗಸಹಿತವಾಗಿ ನಿಜಗೃಹೇ ಎಂದು ರೂಪ.

ಅಯಂ ಭಾವಃ=ಇಲ್ಲಿಯ ಅಭಿಪ್ರಾಯವು ಹೀಗಿದೆ ಮಧ್ವಕೃತ ಭಾಷ್ಯಾದಿಕೋಶಕವಲಿಕಾಂ=ಶ್ರೀಮಧ್ವಾಚಾರ್ಯರು

---

ರಚಿಸಿದ ಬ್ರಹ್ಮಸೂತ್ರ ಭಾಷ್ಯಾದಿ ಗ್ರಂಥಗಳ ಸಂಪುಟವನ್ನು (ಕಟ್ಟನ್ನು) ಶಂಕರಭಟ್ಟಾಖ್ಯ ಮಧ್ವ ಶಿಷ್ಯಗೃಹೇ=ಶಂಕರಭಟ್ಟ ಎಂಬ ಹೆಸರುಳ್ಳ ಶ್ರೀಮಧ್ವಾಚಾರ್ಯರ ಶಿಷ್ಯರ ಮನೆಯಲ್ಲಿ, ಸ್ಥಿತಾಂ=ಇರುವುದನ್ನಾಗಿ, ಶ್ರುತ್ವಾ=ಕೇಳಿ, ಪದ್ಮತೀರ್ಥಾಖ್ಯ ಮಾಯಾವಾದೀ=ಪದ್ಮತೀರ್ಥನೆಂಬ ಮಾಯಾವಾದಿಯು, ನಿಶೀಥೇ=ಮಧ್ಯ ರಾತ್ರಿಯಲ್ಲಿ, ತದ್ಗೃಹಂ=ಆ ಶಂಕರಾರ್ಯನ ಮನೆಯನ್ನು, ಪ್ರಾಪ್ಯ=ತಲುಪಿ, ತಂ=ಆ ಶಂಕರಾರ್ಯರನ್ನು ಬಲಾತ್ಕೃತ್ಯ=ಬಲಾತ್ಕರಿಸಿ, ಕವಲಿಕಾಂ=ಗ್ರಂಥದ ಸಂಗ್ರಹದ ಕಟ್ಟನ್ನು, ಅಪಹೃತ್ಯ=ಅಪಹರಿಸಿ, ಸ್ವಗ್ರಾಮಂ=ತನ್ನ ಗ್ರಾಮವನ್ನು ಕುರಿತು ಪ್ರಾಪ್ತವಾನ್=ಹೋದನು. ಶ್ರೀಮಧ್ವಸ್ತು= ಶ್ರೀಮಧ್ವಾಚಾರ್ಯರಾದರೋ ಪ್ರಾತಃ=ಬೆಳಿಗ್ಗೆ, ತತ್=ಆ ಅಪಹರಣವನ್ನು, ಶ್ರುತ್ವಾ=ಕೇಳಿ, ಸ್ವಶಿಷ್ಯೈಃ=ತಮ್ಮ ಶಿಷ್ಯರಿಂದ, ಸಹಿತಃ ಸನ್=ಕೂಡಿದವರಾಗಿ ಭೀತ್ಯಾ=ಹೆದರಿಕೆಯಿಂದ ಅನ್ಯಾನ್=ಇತರರನ್ನು, ಪುರಸ್ಕೃತ್ಯ=ಮುಂದಿಟ್ಟುಕೊಂಡು ಪೃಷ್ಠತಃ= ಹಿಂಭಾಗದಲ್ಲಿ, ಸ್ಥಿತಂ=ನಿಂತಿದ್ದ, ಪದ್ಮತೀರ್ಥಂ=ಪದ್ಮತೀರ್ಥನನ್ನು, ಪ್ರಾಪ್ಯ=ತಲುಪಿ, ಕ್ಷಣೇನ=ಕ್ಷಣದಿಂದ, ಯುಕ್ತಿಭಿಃ=ಯುಕ್ತಿಗಳಿಂದ ಜಿತವಾನ್=ಜಯಿಸಿದರು ವನವಾಸೇ=(ಪಾಂಡವರ) ವನವಾಸ ಕಾಲದಲ್ಲಿ, ದ್ರೌಪದೀಂ=ದ್ರೌಪದಿಯನ್ನು, ಅಪಹೃತ್ಯ= ಅಪಹರಿಸಿ, ಗಚ್ಛಂತಂ=ಹೋಗುತ್ತಿರುವ, ಸೈಂಧವಂ=ಸಿಂಧುದೇಶಾಧಿಪತಿಯಾದ ಜಯದ್ರಥನನ್ನು, ಅರ್ಜುನಃ=ಅರ್ಜುನನು ಬಾಣೈಃ=ಬಾಣಗಳಿಂದ, ಯಥಾ=ಹೇಗೋ, ತಥಾ=ಹಾಗೆ, ಇತಿ=ಎಂದು ಶಿಷ್ಟಂ ತು ರಹಸ್ಯಂ=ಇನ್ನುಳಿದಿರುವ ರಹಸ್ಯ ವಿಷ್ಯವು, ಭಾವಪ್ರಕಾಶಿಕಾತಃ=ಶ್ರೀನಾರಾಯಣ ಪಂಡಿತಾಚಾರ್ಯರಿಂದ ರಚಿತವಾದ ಶ್ರೀಮತ್ ಸುಮಧ್ವವಿಜಯದ ಭಾವಪ್ರಕಾಶಿಕಾ ವ್ಯಾಖ್ಯಾನದಿಂದ ಅವಗಂತವ್ಯಂ=ತಿಳಿಯಲ್ಪಡತಕ್ಕದು, ಯದ್ದಾಸೋಕ್ತಿ ಬಾಣೈಃ ಎಂದರೆ, ಯಸ್ಯ=ಶ್ರೀಮಧ್ವಸ್ಯ, ಯತ್ ಎಂದರೆ ಯಾವ ಶ್ರೀಮಧ್ವಾಚಾರ್ಯರ, ದಾಸ ಎಂದರೆ, ದಾಸಾನಾಂ ಶಿಷ್ಯಾಣಾಂ=ದಾಸ ಎಂದರೆ ಶಿಷ್ಯರ, ಉಕ್ತ್ಯಾಖ್ಯಬಾಣೈಃ=ಮಾತುಗಳೆಂಬ ಬಾಣಗಳಿಂದ ಬಾಣತುಲ್ಯೈಃ=ಬಾಣಗಳಿಗೆ ಸಮಾನವಾದ, ವಚನೈಃ ಇತ್ಯರ್ಥಃ=ಮಾತುಗಳಿಂದ ಎಂದು ಅರ್ಥವು. ವಿದಲಿತಹೃದಯಾಃ ಎಂದರೆ ಸೀಳಿಹೋದ ಮನಸ್ಸುಳ್ಳ, ಕಂಗೆಟ್ಟವರಾಗಿ, ಮಾಯಿದೈತ್ಯಾಃ=

ಮಾಯಾವಾದಿಗಳೆಂಬ ಅಸುರರು, ದುದ್ರುವುಃ ಪಲಾಯಿತವಂತಃ=ದುದ್ರುವುಃ ಎಂದರೆ ಪಲಾಯನ ಮಾಡಿದರು, ಓಡಿಹೋದರು ಎಂದು ಅರ್ಥ. ದುದ್ರುವುಃ ಎಂಬಲ್ಲಿ ದ್ರುಗತೌ=ಗತ್ಯರ್ಥಕವಾದ ದ್ರುಧಾತುವಿನ ಲಿಟ್=ಲಿಟ್‌ಲಕಾರವು ಯಃ=ಯಾವ, ಸರ್ವಜ್ಞಾಖ್ಯಃ=ಪೂರ್ಣಪ್ರಜ್ಞನಾಮಾ, ಸರ್ವಜ್ಞಾಖ್ಯಃ ಎಂದರೆ ಶ್ರೀ ಪೂರ್ಣಪ್ರಜ್ಞರೆಂಬ ಹೆಸರುಳ್ಳ, ಹರಿಃ= ನರಸಿಂಹ ದೇವರು, ಜಗತಿ=ಪ್ರಪಂಚದಲ್ಲಿ ವಿಜಯತೇ=ಉತ್ಕೃಷ್ಟೋ ವರ್ತತೇ, ವಿಜಯತೇ ಎಂದರೆ ಉತ್ಕೃಷ್ಟನಾಗಿರುತ್ತಾನೆ ಎಂದು ಅರ್ಥ. ಸಃ=ಶ್ರೀಮಧ್ವಃ, ಸಃ ಅಂದರೆ ಆ ಶ್ರೀಮಧ್ವಾಚಾರ್ಯರು ನಃ ಅಸ್ಮಭ್ಯಂ, ನಃ ಅಂದರೆ ನಮಗೆ ಜಯಂ= ಉತ್ಕರ್ಷವನ್ನು ಪ್ರದದ್ಯಾತ್=ಪ್ರಯಚ್ಛೇತ್, ಕೊಡಲಿ. ಡುದಾಞ್‌ದಾನೇ ಲಿಙ್, ಪ್ರದದ್ಯಾತ್ ಎಂಬಲ್ಲಿ ಡುದಾಞ್ ಎಂದರೆ ದಾ ಎಂಬ ದಾನಾರ್ಥಕವಾದ ಧಾತುವಿನ ವಿಧಿಲಿಙ್ ಲಕಾರವು.

**ಅವತಾರಿಕಾ** - ಸಹ್ಯಪರ್ವತದ ಮೇಲ್ಭಾಗಕ್ಕೆ ಹೋಗಿ ಅಲ್ಲಿ ಚಾತುರ್ಮಾಸ್ಯ ವ್ರತವನ್ನು ಪೂರೈಸಿ, ಜಯಸಿಂಹ ರಾಜನ ಪ್ರಾರ್ಥನೆಯಂತೆ ಪುನಃ ಪರಶುರಾಮಕ್ಷೇತ್ರದ ಕಡೆಗೆ ಪಶ್ಚಿಮಕ್ಕೆ ಪ್ರಯಾಣ ಮಾಡುತ್ತಾ ಆಚಾರ್ಯರು ವಿಷ್ಣುಮಂಗಲ ದೇವಾಲಯಕ್ಕೆ ಬಂದು ಅಲ್ಲಿ ಕೆಲವು ದಿನಗಳವರೆಗೆ ಇದ್ದರೆಂತಲೂ, ಅಲ್ಲಿಯೇ ಲಿಕುಚ ವಂಶೋತ್ಪನ್ನರಾದ ತ್ರಿವಿಕ್ರಮಪಂಡಿತಾಚಾರ್ಯರು ಬಂದು ಆಚಾರ್ಯರನ್ನು ವಂದಿಸಿದರೆಂತಲೂ ಶ್ರೀಮತ್ಸುಮಧ್ವ ವಿಜಯ ೧೫ನೆಯ ಸರ್ಗದ ಕಥಾ ಭಾಗವನ್ನು ಶ್ರೀಕಾಂತಾಂಘ್ರಿಪ್ರಸಂಗಾತ್ ಎಂಬ ೨೫ನೆಯ ಶ್ಲೋಕದಿಂದ ಸಂಗ್ರಹಿಸುತ್ತಾರೆ.

**ಶ್ರೀಕಾಂತಾಘ್ರಿಪ್ರಸಂಗಾದಧಿಕಶುಭತಮೋಯಾನ್ಯಥಾ ಗಾಂಗ ಓಘೋ**
**ರಾಜ್ಞಾ ಸಂವಂದಿತಾಂಘ್ರಿಸ್ಸ ಕಲಗುಣಗಣೋಪೇತಪಾದಾದಿಕಾಂತಃ**
**ಸರ್ವೇಷಾಂ ದರ್ಶನಿಯೋ ಲಿಕುಚಕುಲಭವೋ ವೇದಶಾಸ್ತ್ರಾನುಸಾರೀ**
**ಪ್ರಾಪಾಯುಗ್ವಿಕ್ರಮಾರ್ಯೋ ಯಮಖಿಲಗುರುಮಾನಂದತೀರ್ಥಾರ್ಯಮೀಡೇ ।।೨೫।।**

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಶ್ರೀ ಕಾಂತೇತಿ ಯಃ ಶ್ರೀ ಕಾಂತಾಂಘ್ರಿಪ್ರಸಂಗಾತ್, ಆಲಾಪಾತ್ ಅಧಿಕಶುಭತಮಃ ಅತ್ಯಂತಮಂಗಲಃ, ಯಃ, ಮಧ್ವಃ, (ಶ್ರೀ ಕಾಂತಾಂಘ್ರಿಪ್ರಸಂಗಾತ್ ಅಧಿಕಶುಭತಮಃ ಇತೀದಂ) ಓಘಸ್ಯಾಪಿ ವಿಶೇಷಣಂ ಗಾಂಗಃ ಗಂಗಾಸಂಬಂಧೀ ಓಘಃ ಪ್ರವಾಹಃ ಯಥಾ ಪ್ರತೀಚೀಂ ಪ್ರತಿಗಚ್ಛನ್ ರಾಜ್ಞಾ ಜಯಸಿಂಹಾಖ್ಯರಾಜೇನ ಸಂವಂದಿತಾಂಘ್ರಿಃ ನಮಸ್ಕೃತಪಾದಃ ಸಕಲಗುಣಗಣೋಪೇತಪಾದಾದಿಕಾಂತಃ, ಸಕಲಗುಣಾನಾಂ ದ್ವಾತ್ರಿಂಶಲ್ಲಕ್ಷಣಾದಿಕಾನಾಂ ಗುಣಾನಾಂಗಣೈಸಂಘೈಃ ಉಪೇತಾಃ ಪಾದ ಏವ ಆದಿಃ ಯೇಷಾಂತೆ ಪಾದಾದಯಃ, ಕಂ ಶಿರಃ ಅಂತಃ ಯೇಷಾಂತೇ ಕಾಂತಾಃ ಪಾದಾದಯಶ್ಚ ಕಾಂತಾಶ್ಚ ಪಾದಾದಿಕಾಂತಾಃ ಸಕಲಗುಣಗಣೋಪೇತಾಃ ಪಾದಾದಿಕಾಂತಾಃ ಯಸ್ಯಸಃ। ಸರ್ವಾವಯವಸುಂದರಃ ಇತಿ ಭಾವಃ । ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ ಕಂ ಶಿರೋಽಂಬುನೋಃ ಇತ್ಯಮರಃ । ಅತ ಏವ ಸರ್ವೇಷಾಂ ದರ್ಶನಿಯಃ ಸನ್ ವಿಷ್ಣುಮಂಗಲಾಖ್ಯ ದೇವಾಲಯೇ ಆಸ್ತೇ ಇತಿ ಶೇಷಃ । ಯಂ ಅಖಿಲಗುರುಂ ಅಖಿಲಾನಾಂ ಸತಾಂ ಉಪದೇಷ್ಟಾರಂ ಮಧ್ವಂ । ವೇದಶಾಸ್ತ್ರಾನುಸಾರೀ ವೇದಶಾಸ್ತ್ರಾಣಿ ಅನುಸರತೀತಿ ಸಃ ತಥಾ, ಲಿಕುಚ ಕುಲಭವಃ, ಲಿಕುಚಾಖ್ಯಕುಲೇ ಉತ್ಪನ್ನಃ, ಅಯುಗ್ ವಿಕ್ರಮಾರ್ಯಃ ತ್ರಿವಿಕ್ರಮಪಂಡಿತಾಚಾರ್ಯಃ, ಪ್ರಾಪ, ತತ್ತ್ವಬುಭುತ್ಸಯಾ ಇತಿಶೇಷಃ । ಶ್ರೀ ಮಧ್ವಃ ಯದಾ ಭಾಷ್ಯಾದಿ ಪುಸ್ತಕಾಪಹಾರಿಣಂ ಪದ್ಮತೀರ್ಥಂ ವಿಜಿತ್ಯ ತತ್ ಪುಸ್ತಕಜಾತಂ ಪದ್ಮತೀರ್ಥಾದಿದಂಡನಾನಂತರಂ ಗ್ರಹಿಷ್ಯಾಮಿ ಇತಿ ಬುದ್ಧ್ಯಾ, ಮಧ್ಯಸ್ಥೇಷು ಸ್ಥಾಪಿತವಾನ್ ! ತದೇತತ್ ಸರ್ವಂ ಶ್ರುತವತಾ ಕದಾಚಿತ್ ವೈಷ್ಣವೋತ್ತಮೇನ ಜಯಸಿಂಹಾಖ್ಯರಾಜೇನ ಯದಾ ಸಹ್ಯಂಪ್ರಾಪ್ತಃ ಆಚಾರ್ಯಃ ಗ್ರಂಥಪ್ರತ್ಯರ್ಪಣಾಯ ಸ್ವರಾಜ್ಯಂ ಆನಾಯ್ಯ ಪೂಜಿತಃ ತದಾ ತ್ರಿವಿಕ್ರಮಪಂಡಿತಾಚಾರ್ಯಃ ಮಧ್ವಕೀರ್ತಿಂ ಶ್ರುತ್ವಾ ತತ್ತ್ವ ಜಿಜ್ಞಾಸಯಾ ತಂ ಪ್ರಾಪ ಇತಿ ಶ್ಲೋಕಾಭಿಪ್ರಾಯಃ । ತಂ ಆನಂದತೀರ್ಥಾರ್ಯಂ ಈಡೇ ಈಡಸ್ತುತೌಲಟ್.

**ಪದಚ್ಛೇದ** – ಶ್ರೀಕಾಂತಾಘ್ರಿಪ್ರಸಂಗಾತ್, ಅಧಿಕಶುಭತಮಃ, ಯಾನ್, ಯಥಾ, ಗಾಂಗಃ, ಓಘಃ ರಾಜ್ಞಾಸಂವಂದಿತಾಂಘ್ರಿಃ, ಸಕಲಗುಣಗಣೋಪೇತಪಾದಾದಿಕಾಂತಃ, ಸರ್ವೇಷಾಂ ದರ್ಶನೀಯಃ, ಲಿಕುಚಕುಲಭವಃ, ವೇದಶಾಸ್ತ್ರಾನುಸಾರೀ, ಪ್ರಾಪ, ಅಯುಗ್ವಿಕ್ರಮಾರ್ಯಃ, ಯಂ ಅಖಿಲ ಗುರುಂ, ಆನಂದತೀರ್ಥಾರ್ಯಂ, ಈಡೇ।

**ಅನ್ವಯ** – (ಯಃ) ಶ್ರೀಕಾಂತಾಙ್ಘ್ರಿಪ್ರಸಂಗಾತ್, ಅಧಿಕಶುಭತಮಃ

(ಯಃ) ಗಾಂಗಃ ಓಘಃ ಯಥಾ (ಪ್ರತೀಚೀಂ) ಯಾನ್ (ಯಃ) ರಾಜ್ಞಾಸಂವಂದಿತಾಂಘ್ರಿಃ, (ಯಃ) ಸಕಲಗುಣ ಗಣೋಪೇತಪಾದಾದಿಕಾಂತಃ (ಯಃ) ಸರ್ವೇಷಾಂ ದರ್ಶನೀಯಃ, ಅಖಿಲಗುರುಂ ಯಂ ವೇದಶಾಸ್ತ್ರಾನುಸಾರೀ **ಲಿಕುಚಕುಲಭವಃ** ಅಯುಗ್ವಿಕ್ರಮಾರ್ಯಃ ಪ್ರಾಪ, (ತಂ) ಆನಂದತೀರ್ಥಾರ್ಯಂ ಈಡೇ

**ಅನ್ವಯಾರ್ಥ** – (ಯಃ= ಯಾವ ಶ್ರೀ ಮಧ್ವಾಚಾರ್ಯರು), ಶ್ರೀಕಾಂತಾಙ್ಘ್ರಿ ಪ್ರಸಂಗಾತ್=ಲಕ್ಷ್ಮೀ ಪತಿಯಾದ, ಶ್ರೀ ಹರಿಯ ಪಾದಗಳ ಜೊತೆಗೆ ನಿರಂತರ ಸಂಬಂಧದಿಂದ (ಆ ಪರಮಾತ್ಮನ ಜೊತೆಗೆ ಮಾತನಾಡುವುದರಿಂದ) ಅಧಿಕಶುಭತಮಃ=ಅತಿಶಯವಾಗಿ ಮಂಗಳಸ್ವರೂಪವುಳ್ಳವರು, ಯಃ=ಯಾವ ಶ್ರೀ ಮಧ್ವಾಚಾರ್ಯರು ಗಾಂಗಃ= ಗಂಗಾ ಸಂಬಂಧಿಯಾದ, ಓಘಃ ಯಥಾ=ಪ್ರವಾಹದಂತೆ (ಇರುವವರು) ಪ್ರತೀಚೀಂ=ಪಶ್ಚಿಮ ದಿಕ್ಕಿಗೆ) ಯಾನ್= ಹೋಗುತ್ತಿರುವವರೋ, (ಯಃ=ಯಾರು) ರಾಜ್ಞಾ=ಜಯಸಿಂಹರಾಜನಿಂದ, ಸಂವಂದಿತಾಂಘ್ರಿಃ=ನಮಸ್ಕರಿಸಲ್ಪಟ್ಟ ಪಾದಗಳುಳ್ಳವರೋ, (ಯಃ=ಯಾರು) ಸಕಲ ಗುಣಗಣೋಪೇತಪಾದಾದಿ ಕಾಂತಃ=ಸಕಲ=ಎಲ್ಲಾ, ಗುಣ=ಮಹಾಪುರುಷ 32 ಲಕ್ಷಣಗಳೇ ಮೊದಲಾದ ಉತ್ಕೃಷ್ಟ ಧರ್ಮಗಳ, ಗಣ=ಸಮೂಹಗಳಿಂದ ಉಪೇತ=ಕೂಡಿದ, ಪಾದಾದಿ=ಪಾದಮೊದಲಾಗಿ ಉಳ್ಳ, ಕಾಂತಃ=ಶಿರಸ್ಸೇ ಕೊನೆಯಾದ ಅವಯುವಗಳುಳ್ಳವರೋ, (ಯಾರು) ಸರ್ವೇಷಾಂ=ಎಲ್ಲರಿಗೂ ದರ್ಶನೀಯಃ=ನೋಡಲು ಯೋಗ್ಯರೋ, (ಪರಮಸುಂದರರೋ) ಅಖಿಲಗುರುಂ=ಮನಷ್ಯೋತ್ತಮರು ಮತ್ತು ದೇವೋತ್ತಮರಿಗೆ ಗುರುಗಳಾದ ಶ್ರೀ ಮಧ್ವಾಚಾರ್ಯರನ್ನು, ವೇದಶಾಸ್ತ್ರಾನುಸಾರೀ=ವೇದಶಾಸ್ತ್ರಗಳನ್ನು ಅನುಸರಿಸುತ್ತಿರುವ, ಲಿಕುಚಕುಲಭವಃ=ಲಿಕುಚವಂಶದಲ್ಲಿ (ಪೆಜತ್ತಾಯಕುಲದಲ್ಲಿ) ಹುಟ್ಟಿರುವ, ಅಯುಗ್ವಿಕ್ರಮಾರ್ಯಃ=ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯರು ಪ್ರಾಪ=ಹೊಂದಿದರೋ, ತಂ=ಅಂತಹ, ಆನಂದತೀರ್ಥಾರ್ಯಂ=ಶ್ರೀಮದಾನಂದತೀರ್ಥಭಗವತ್ಪಾದರನ್ನು, ಈಡೇ=ಸ್ತುತಿಸುತ್ತೇನೆ.

**ತಾತ್ಪರ್ಯ** - ಶ್ರೀ ಮಧ್ವಾಚಾರ್ಯರು ಯಾವಾಗಲೂ ಪರಮಾತ್ಮನ ಪಾದಾರವಿಂದಗಳನ್ನೇ ಸ್ಮರಿಸುತ್ತಾ ಇರುವುದರಿಂದ ಅತ್ಯಂತ ಮಂಗಲಕರರಾಗಿದ್ದರು. ಅವರು ಪವಿತ್ರವಾದ ಗಂಗಾಪ್ರವಾಹದಂತೆ ತನ್ನ ಮಾರ್ಗದಲ್ಲಿ ಸಿಕ್ಕಿದವರನ್ನು ಪವಿತ್ರರನ್ನಾಗಿ ಮಾಡುತ್ತಾ ಪ್ರಕೃತದಲ್ಲಿ ಸಹ್ಯ ಪರ್ವತದಿಂದ ಪಶ್ಚಿಮದ ಕಡೆ ಪ್ರಯಾಣ ಬೆಳೆಸುತ್ತಾ ಬಂದರು. ಅಲ್ಲಿ ಜಯಸಿಂಹರಾಜನು ತನ್ನ ರಾಜ್ಯದ ಎಲ್ಲೆಯಲ್ಲಿ ಆಚಾರ್ಯರನ್ನು ಇದಿರುಗೊಂಡು ಬಹಳ ಭಕ್ತಿಯಿಂದ ಆಚಾರ್ಯರ ಪಾದಕಮಲಗಳಿಗೆ ಪ್ರಣಾಮ ಮಾಡಿದನು. ಆಗ ಪ್ರತಿಮಾಲಕ್ಷಣವನ್ನು ಬಲ್ಲ ಶಿಲ್ಪಶಾಸ್ತ್ರಜ್ಞರು ಪಾದದಿಂದ ಆರಂಭಿಸಿ ಕೇಶದವರೆಗೂ ಆಚಾರ್ಯರ ಅಂಗೋಪಾಂಗಗಳಲ್ಲಿ ಮಹಾಪುರುಷರ ಲಕ್ಷಣಗಳು ಸ್ಪಷ್ಟವಾಗಿ ಕಾಣಿಸುತ್ತಿವೆಯೆಂದೂ ಆಚಾರ್ಯರ ಮಹಿಮೆಯನ್ನೂ ಹೊಗಳುತ್ತಿದ್ದರು. ಅವರು ದೇವತಾಪ್ರತಿಮಾನಿರ್ಮಾಣಕ್ಕೆ ಆಚಾರ್ಯರ ದೇಹವೇ ಮಾದರಿ ಎಂಬುದಾಗಿ ತಿಳಿದು, ಜನರಿಗೆ, ಹಾಗೆಯೇ ತಿಳಿಸುತ್ತಲಿದ್ದರು. ಆಚಾರ್ಯರು ಪರಮಸುಂದರರೂ ಆಗಿದ್ದುದರಿಂದ ಎಲ್ಲರೂ ಅವರನ್ನು ಬಹಳ ಪ್ರೀತಿಯಿಂದ ನೋಡುತ್ತಿದ್ದರು. ಆಚಾರ್ಯರು ಅಲ್ಲಿಯೇ ಇರುವ ವಿಷ್ಣುಮಂಗಲವೆಂಬ ದೇವಾಲಯದಲ್ಲಿ ಕೆಲವು ದಿವಸಗಳವರೆಗೆ ವಾಸಮಾಡುತ್ತಿದ್ದರು. ಆಗ ಎಲ್ಲಾ ವೇದಶಾಸ್ತ್ರಗಳನ್ನೂ ಬಲ್ಲವರೂ ಒಳ್ಳೆಯ ಕವಿಗಳೂ ಆದ ಲಿಕುಚಕುಲದಲ್ಲಿ ಹುಟ್ಟಿದ ಶ್ರೀತ್ರಿವಿಕ್ರಮಪಂಡಿತಾಚಾರ್ಯರು ತತ್ತ್ವವನ್ನು ತಿಳಿಯುವುದಕ್ಕಾಗಿ ಆಚಾರ್ಯರ ಬಳಿಗೆ ಬಂದರು. ಹಿಂದೆ ಪದ್ಮತೀರ್ಥರೆಂಬುವರು ಆಚಾರ್ಯರ ಗ್ರಂಥಗಳನ್ನು ಅಪಹರಿಸಿದ್ದರು. ಆಚಾರ್ಯರು ಅವರನ್ನು ವಾದದಲ್ಲಿ ಸೋಲಿಸಿದರು. ಅವರು ಸೋತು, ಹೆದರಿಕೆಯಿಂದ ಬಿಟ್ಟುಹೋದ ತಮ್ಮ ಗ್ರಂಥಗಳನ್ನು ಆಚಾರ್ಯರು ಆಗ ತೆಗೆದುಕೊಳ್ಳಲಿಲ್ಲ, ರಾಜನ ಮೂಲಕವಾಗಿ ಪದ್ಮತೀರ್ಥಾದಿಗಳಿಗೆ ತಿರಸ್ಕಾರ, ದಂಡನಾದಿಗಳನ್ನು ಮಾಡಿಸಿದ ನಂತರ ಅವುಗಳನ್ನು ತೆಗೆದುಕೊಳ್ಳುವುದಕ್ಕಾಗಿ ನಿರ್ಧರಿಸಿ ಮಧ್ಯಸ್ಥರಲ್ಲಿ ಇಟ್ಟಿದ್ದರು. ಈಗ ರಾಜನ ಪ್ರಾರ್ಥನೆಯಂತೆ ಅವನ ರಾಜ್ಯಕ್ಕೆ ಬಂದು ದೇವಾಲಯದಲ್ಲಿ ವಾಸಮಾಡುತ್ತಿದ್ದಾಗ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ಬಂದು ಆಚಾರ್ಯರಿಗೆ ನಮಸ್ಕಾರ ಮಾಡಿದರು. ಇಂತಹ ಶ್ರೀಮತ್ ಆನಂದತೀರ್ಥ ಭಗವತ್ ಪಾದಾಚಾರ್ಯರನ್ನು ನಾನು ಸ್ತುತಿಸುತ್ತೇನೆ ಎಂದು ನಾರಾಯಣಪಂಡಿತಾಚಾರ್ಯರು ಹೇಳುತ್ತಿದ್ದಾರೆ.

**ವಿಗ್ರಹ** - ಶ್ರಿಯಃ ಕಾಂತಃ ಶ್ರೀಕಾಂತಃ, ಶ್ರೀಕಾಂತಸ್ಯ ಅಂಘ್ರೀಶ್ರೀಕಾಂತಾಂಘ್ರೀ, ಶ್ರೀಕಾಂತಾಂಘ್ರ್ಯೋಃ ಪ್ರಸಂಗಃ ಶ್ರೀಕಾಂತಾಂಘ್ರಿ ಪ್ರಸಂಗಃ ತಸ್ಮಾತ್, ಅತಿಶಯೇನ ಶುಭಃ ಶುಭತಮಃ, ಅಧಿಕಂ ಶುಭತಮಃ ಅಧಿಕಶುಭತಮಃ, ಯಾನ್, ಯಾ ಪ್ರಾಪಣೇ ಶತೃಪ್ರತ್ಯಯಾಂತ ತಕಾರಾಂತ ಪ್ರಥಮಾ ಏಕ. ಯಾನ್ ಯಾಂತೌ ಯಾಂತಃ ಇತ್ಯಾದಿ, ಗಂಗಾಯಾಃ ಅಯಂ ಗಾಂಗಃ, ಓಘ:=ಪ್ರವಾಹಃ, ಓಘೋ ವೃಂದೇऽಭಸಾಂ ರಯೇ ಅಮರ. ಸಮ್ಯಕ್ ವಂದಿತೌ, ಸಂವಂದಿತೌ, ಸಂವಂದಿತೌ ಅಂಘ್ರೀ ಯಸ್ಯ ಸಃ ಸಂವಂದಿತಾಂಘ್ರಿಃ, ಸಕಲಾಶ್ಚ ತೇ ಗುಣಾಶ್ಚಸಕಲಗುಣಾಃ ಸಕಲಗುಣಾನಾಂ ಗುಣಾಃ ಸಕಲಗುಣಗಣಾಃ, ಸಕಲಗುಣಗಣೈಃ ಉಪೇತಾಃ ಸಕಲಗುಣಲಗಣೋಪೇತಾಃ, ಪಾದಃ ಆದಿಃ ಯೇಷಾಂತೇ ಪಾದಾದಯಃ, ಕಂ ಅಂತಃಯೇಷಾಂತೇ ಕಾಂತಾಃ, ಪಾದಾದಯಶ್ಚ ಕಾಂತಾಶ್ಚ ಪಾದಾದಿಕಾಂತಾಃ, ಸಕಲಗುಣಗಣೋಪೇತಾಃ ಪಾದಾದಿಕಾಂತಾಃ ಯಸ್ಯಸಃ ಸಕಲಗುಣಗಣೋಪೇತಪಾದಾದಿಕಾಂತಃ, ದರ್ಶಯಿತುಂ ಯೋಗ್ಯಃ ದರ್ಶನೀಯಃ, ಲಿಕುಚಾಖ್ಯಂ ಕುಲಂ ಲಿಕುಚಕುಲಂ, ಲಿಕುಚಕುಲೇ ಭವಃ ಯಸ್ಯಸಃ, ಲಿಕುಚಕುಲಭವಃ, ವೇದಾಶ್ಚ ಶಾಸ್ತ್ರಾಣಿ ಚ ವೇದಶಾಸ್ತ್ರಾಣಿ ವೇದಶಾಸ್ತ್ರಾಣಿ ಅನುಸರತೀತಿ ವೇದಶಾಸ್ತ್ರಾನುಸಾರೀ, ನಯುಕ್ ಅಯುಕ್, (ತ್ರಿ) ಅಯುಗ್ ವಿಕ್ರಮಃ ಯಸ್ಯಸಃ ಅಯುಗ್ ವಿಕ್ರಮಃ ಅಯುಗ್ ವಿಕ್ರಮಃ (ತ್ರಿವಿಕ್ರಮಃ) ಇತಿ, ಆರ್ಯಃ ಅಯುಗ್ ವಿಕ್ರಮಾರ್ಯಃ, ಅಖಿಲಾನಾಂ ಗುರುಃ ಅಖಿಲಗುರುಃ ತಂ, ಆನಂದತೀರ್ಥಃ ಇತಿ ಆರ್ಯಃ ಆನಂದತೀರ್ಥಾರ್ಯಃ ತಂ.

**ಕ್ರಿಯಾಪದ** – ಪ್ರ ಆಪ ಆಪತುಃ ಆಪುಃ ಇತ್ಯಾದಿ. ಅಪ್‌ಲೃ ವ್ಯಾಪ್ತೌ ಲಿಟ್. ಈಡೇ ಈಟ್ಟೇ ಈಡಾತೇ ಈಡತೇ, ಈಡಿಷೇ ಈಡಾಥೇ ಈಡಿಧ್ವೇ, ಈಡೇ ಈಡಿವಹೇ ಈಡಸ್ತುತೌ ಎರಡನೆಯ ಗಣ ಆತ್ಮನೇ ಪದೀ, ಉತ್ತಮ ಪುರುಷ ಏಕವಚನಂ.

**ಗೂಢಭಾವವ್ಯಾಖ್ಯಾನುವಾದ** – ಯಃ=ಯಾವ ಶ್ರೀಮಧ್ವಾಚಾರ್ಯರು, ಶ್ರೀಕಾಂತಾಂಘ್ರಿಪ್ರಸಂಗಾತ್= ಲಕ್ಷ್ಮೀಪತಿಯಾದ ಶ್ರೀ ಹರಿಯ ಪಾದಗಳಲ್ಲಿ ಅತಿಶಯವಾದ ಸಂಬಂಧವಿರುವುದರಿಂದ, ಪ್ರಸಂಗಾತ್=ಆಲಾಪಾತ್, ಪ್ರಸಂಗಾತ್ ಎಂದರೆ ಮಾತಾಡೋಣದರಿಂದ ಎಂದು ಅರ್ಥವನ್ನು ಹೇಳಿದ್ದಾರೆ. ಆಚಾರ್ಯರು ಯಾವಾಗಲೂ ಜ್ಞಾನ ಆನಂದಸ್ವರೂಪವಾದ ಪಾದದ್ವಯಾಭಿನ್ನನಾದ ಶ್ರೀಹರಿಯ ಜತೆಗೆ ಭಕ್ತಿಯಿಂದ ಮಾತಾಡುತ್ತಿರುವುದರಿಂದ, ಅಧಿಕಶುಭತಮಃ ಅತ್ಯಂತಮಂಗಲಃ, ಅಧಿಕಶುಭತಮರು ಅಂದರೆ ಅತ್ಯಂತ ಮಂಗಲಸ್ವರೂಪರಾಗಿದ್ದಾರೆ. ಯಃ ಮಧ್ವಃ=ಯಾವ ಶ್ರೀ ಮಧ್ವಾಚಾರ್ಯರಿದ್ದಾರೋ ಅವರು, ಶ್ರೀಕಾಂತಾಂಘ್ರಿಪ್ರಸಂಗಾತ್ ಅಧಿಕ ಶುಭತಮಃ ಎಂಬುದು ಓಘ'ಸ್ಯಾಪಿ ವಿಶೇಷಣಂ= ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ಪಾದಗಳಲ್ಲಿದ್ದು ಅಲ್ಲಿಂದ ಹುಟ್ಟಿರುವುದು ಎಂಬ ಸಂಬಂಧದಿಂದ ಅತ್ಯಂತಮಂಗಲಕರವಾದ ಗಾಂಗಃ ಓಘಃ ಗಂಗೆಯ ಓಘ:=ಪ್ರವಾಹಕ್ಕೂ ವಿಶೇಷಣ, ಗಾಂಗಃ ಗಂಗಾಸಂಬಂಧೀ=ಗಾಂಗಃ ಎಂದರೆ ಗಂಗಾಸಂಬಂಧಿಯಾದ, ಗಂಗಾಸ್ವರೂಪವಾದ, ಓಘ:=ಪ್ರವಾಹಃ, ಓಘಃ ಎಂದರೆ ಪ್ರವಾಹವು, ಯಥಾ=ಹೇಗೋ (ತಥಾ=ಹಾಗೆ) ಪ್ರತೀಚೀಂ ಪ್ರತಿಗಚ್ಛನ್=ಪಶ್ಚಿಮದಿಕ್ಕನ್ನು ಕುರಿತು ಹೋಗುತ್ತಾ ಇರುವ, ರಾಜ್ಞಾ ಜಯಸಿಂಹಾಖ್ಯರಾಜೇನ=ರಾಜ್ಞಾ ಎಂದರೆ ಜಯಸಿಂಹನೆಂಬ, ರಾಜನಿಂದ ಸಂವಂದಿತಾಂಘ್ರಿಃ=ನಮಸ್ಕೃತಪಾದಃ ಸಂವಂದಿತಾಂಘ್ರಿಃ=ಎಂದರೆ ನಮಸ್ಕರಿಸಿಲ್ಪಟ್ಟ ಪಾದವುಳ್ಳವರಾದ ಎಂದು ಅರ್ಥ; ಸಕಲಗುಣಗಣೋಪೇತಪಾದಾದಿಕಾಂತಃ, ಎಂದರೆ, ಸಕಲಗುಣಾನಾಂ ದ್ವಾತ್ರಿಂಶಲ್ಲಕ್ಷಣಾ ದಿಕಾನಾಂ, ಸಕಲಗುಣ ಎಂದರೆ ಮಹಾಪುರುಷರಿಗೆ ಇರಬೇಕಾದ 32 ಲಕ್ಷಣಗಳೇ ಮೊದಲಾದ ಗುಣಗಳ, ಗಣೈಃ ಸಂಘೈಃ=ಗಣ ಎಂದರೆ ಸಮೂಹಗಳಿಂದ, ಉಪೇತಾಃ=ಕೂಡಿರುವ, ಪಾದ ಏವ ಆದಿಃ ಯೇಷಾಂ ತೇ ಪಾದಾದಯಃ=ಪಾದ ಅಂದರೆ 'ಕಾಲು' ಎಂಬ ಅವಯವವೇ ಮೊದಲನೆಯದು ಯಾವುವುಗಳಿಗೆ ಇವೆಯೋ ಅಂತಹ ಪಾದಾದಿಗಳಾದ, ಕಂ ಶಿರಃ ಅಂತಃ ಯೇಷಾಂ ತೆ ಕಾಂತಾಃ=ಕಂ ಎಂದರೆ ಶಿರಸ್ಸು ಕೊನೆಯದು ಯಾವ ಅವಯವಗಳಿಗೆ ಆಗಿದೆಯೋ, ಅಂತಹ 'ಕಅಂತ' ಗಳಾದ ಅವಯವಗಳು, ಪಾದಾದಯಶ್ಚ ಕಾಂತಾಶ್ಚ ಎಂದು ದ್ವಂದ್ವಸಮಾಸ ಮಾಡಿದರೆ (ಪಾದಾದಿಕಾಂತಾಃ' ಎಂದಾಗುತ್ತದೆ. ಸಕಲ ಗುಣಗಣೋಪೇತಾಃ ಪಾದಾದಿಕಾಂತಾಃ ಯಸ್ಯಸಃ' ಎಲ್ಲಾ ಗುಣಸಮೂಹಗಳಿಂದ ಕೂಡಿದ ಪಾದಾದಿ ಶಿರಸ್ಸೇ ಕೊನೆಯಾಗಿ ಉಳ್ಳ ಅವಯವಗಳು ಯಾರಿಗೆ ಇದೆಯೋ ಅವರು ಎಂದು ವಿಗ್ರಹ ಮಾಡಿದಾಗ 'ಸಕಲಗುಣಗಣೋಪೇತಪಾದಾದಿಕಾಂತಃ'

ಎಂಬ ಪದವಾಗುತ್ತದೆ. ಸರ್ವಾವಯವ ಸುಂದರಃ ಇತಿಭಾವಃ= ಆಚಾರ್ಯರು ಸರ್ವಾಂಗಸುಂದರರು ಎಂದು ಅಭಿಪ್ರಾಯ. 'ಕಾಂತಃ' ಎಂಬಲ್ಲಿ 'ಕ, ಎಂದರೆ ಶಿರಸ್ಸು ಪುಂಸಿ ಕಃ, ಕಂಶಿರೋಽಮ್ಬುನೋಃ ಇತ್ಯಮರಃ ಮಾರುತೇ ವೇಧಸಿಬ್ರಧ್ನೇ ಪುಂಸಿ ಕಃ ವಾಯು ಬ್ರಹ್ಮ ಸೂರ್ಯ ಈ ಅರ್ಥಗಳಲ್ಲಿ ಕಃ ಎಂಬ ಪುಲ್ಲಿಂಗಶಬ್ದ, ಶಿರಸ್ಸು ನೀರು ಎಂಬ ಎರಡು ಅರ್ಥದಲ್ಲಿ ಕಂ' ಎಂದು ನಪುಂಸಕಲಿಂಗ ಶಬ್ದವಿದೆ ಎಂದು ಅಮರ ಕೋಶವಿದೆ. ಅದನ್ನು ಅನುಸರಿಸಿ ಇಲ್ಲಿ ಕಾಂತ, ಎಂಬಲ್ಲಿ 'ಕ' ಎಂದರೆ ಶಿರಸ್ಸು ಎಂದು ಅರ್ಥ. ಅತ ಏವ=ಆದುದರಿಂದಲೇ, ಸರ್ವೇಷಾಂ= ಎಲ್ಲರಿಗೂ, ದರ್ಶನೀಯಃ ಸನ್=ನೋಡಲು ಯೋಗ್ಯರಾಗಿ, ವಿಷ್ಣುಮಂಗಲಾಖ್ಯದೇವಾಲಯೇ ಆಸ್ತೇ=ವಿಷ್ಣು ಮಂಗಲವೆಂಬ ದೇವಾಲಯದಲ್ಲಿ ಇದ್ದರು ಇತಿ ಶೇಷಃ=ಎಂದು ಶೇಷಪೂರಣ ಮಾಡಿಕೊಳ್ಳಬೇಕು. ಯಂ=ಯಾವ ಅಖಿಲಗುರುಂ=ಅಖಿಲಾನಾಂ ಸತಾಂ ಉಪದೇಷ್ಟಾರಂ ಮಧ್ವಂ=ಎಲ್ಲಾ ಸಾತ್ವಿಕಜೀವರಿಗೂ, ದೇವೋತ್ತಮರಿಗೂ ಉಪದೇಶಕರಾದ, ಶ್ರೀ ಮಧ್ವಾಚಾರ್ಯರನ್ನು, ವೇದಶಾಸ್ತ್ರಾನುಸಾರೀ=ವೇದಶಾಸ್ತ್ರಾಣಿ ಅನುಸರತೀತಿ ಸಃ ತಥಾ=ವೇದಶಾಸ್ತ್ರಗಳನ್ನು ಅನುಸರಿಸುತ್ತಾರೆ, ಆದುದರಿಂದ ವೇದಶಾಸ್ತ್ರಾನುಸಾರಿಗಳೆಂದು ಹೇಳಲ್ಪಡುವ, ಲಿಕುಚಕುಲಭವಃ ಲಿಕುಚಾಖ್ಯಕುಲೇ, ಉತ್ಪನ್ನಃ=ಲಿಕುಚ ಎಂಬ ಕುಲದಲ್ಲಿ ಹುಟ್ಟಿದ, ಅಯುಗ್ ವಿಕ್ರಮಾರ್ಯಃ ತ್ರಿವಿಕ್ರಮಪಂಡಿತಾಚಾರ್ಯಃ, ಎಂದರೆ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು, ಪ್ರಾಪ=ಹೊಂದಿದರು (ಆಚಾರ್ಯರ ಸಮೀಪಕ್ಕೆ ಬಂದರು, ತತ್ತ್ವಬುಭುತ್ಸಯಾ ಇತಿ ಭಾವಃ=ತತ್ತ್ವವನ್ನು ತಿಳಿಯಬೇಕೆಂಬ ಇಚ್ಛೆಯಿಂದ (ಆಚಾರ್ಯರ ಸಮೀಪಕ್ಕೆ ಬಂದರು) ಎಂದು ಅಭಿಪ್ರಾಯ.

ಶ್ರೀಮಧ್ವಃ=ಶ್ರೀಮಧ್ವಾಚಾರ್ಯರು, ಯದಾ=ಯಾವಾಗ ಭಾಷ್ಯಾದಿಪುಸ್ತಕಾಪಹಾರಿಣಂ=ಭಾಷ್ಯ ಮೊದಲಾದ ಪುಸ್ತಕಗಳನ್ನು ಅಪಹರಿಸಿರುವ, ಪದ್ಮತೀರ್ಥಂ=ಪದ್ಮತೀರ್ಥರನ್ನು, ವಿಜಿತ್ಯ=ಪರಾಜಯಗೊಳಿಸಿ, ತತ್ಪುಸ್ತಕಜಾತಂ=ಆ ಪುಸ್ತಕಸಮೂಹವನ್ನು, ಪದ್ಮತೀರ್ಥಾದಿದಂಡನಾನಂತರಂ=ಪದ್ಮತೀರ್ಥಾದಿಗಳನ್ನು ದಂಡಿಸಿದ ಅನಂತರ, ಗ್ರಹಿಷ್ಯಾಮಿ ಇತಿ ಬುದ್ಧ್ಯಾ=ಸ್ವೀಕರಿಸುವೆನು ಎಂಬ ಆಲೋಚನೆಯಿಂದ, ಮಧ್ಯಸ್ಥೇಷು=ಮಧ್ಯಸ್ಥರಲ್ಲಿ ಸ್ಥಾಪಿತವಾನ್=ಇಟ್ಟರೋ, ತದಾ=ಆಗ ತತ್ ಏತತ್ ಸರ್ವಂ=ಅಂತಹ ಈ ಎಲ್ಲಾ ಸಮಾಚಾರವನ್ನು ಶ್ರುತವತಾ=ಕೇಳಿದ, ವೈಷ್ಣವೋತ್ತಮೇನ=ವಿಷ್ಣು ಭಕ್ತಾಗ್ರೇಸರನಾದ, ಜಯಸಿಂಹಾಖ್ಯರಾಜೇನ=ಜಯಸಿಂಹನೆಂಬ ಹೆಸರುಳ್ಳ ರಾಜನಿಂದ, ಕದಾಚಿತ್=ಒಂದಾನೊಂದು ಸಂದರ್ಭದಲ್ಲಿ (ಶ್ರೀಮಧ್ವರು ರಾಜನ ಪ್ರಾರ್ಥನೆಯಂತೆ ರಾಜನ ರಾಜ್ಯಕ್ಕೆ ಬಂದಾಗ) ಪೂಜಿತಃ=ಶ್ರೀಮಧ್ವರು ಪೂಜಿಸಲ್ಪಟ್ಟರು.

ತದಾ=ಆಗ, ತ್ರಿವಿಕ್ರಮಪಂಡಿತಾಚಾರ್ಯಃ=ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರು, ಮಧ್ವಕೀರ್ತಿಂಶ್ರುತ್ವಾ= ಶ್ರೀಮಧ್ವಾಚಾರ್ಯರ ಕೀರ್ತಿಯನ್ನು ಕೇಳಿ, ತತ್ತ್ವಜಿಜ್ಞಾಸಯಾ=ತತ್ತ್ವವನ್ನು ತಿಳಿಯುವ ಇಚ್ಛೆಯಿಂದ, ತಂ= ಶ್ರೀಮಧ್ವಾಚಾರ್ಯರನ್ನು, ಪ್ರಾಪ=ಹೊಂದಿದರು, ಇತಿ ಶ್ಲೋಕಾಭಿಪ್ರಾಯಃ=ಎಂದು ಶ್ಲೋಕದ ಅಭಿಪ್ರಾಯವು, ತಂ= ಅಂತಹ, ಆನಂದತೀರ್ಥಾರ್ಯಂ=ಆನಂದತೀರ್ಥರೆಂಬ ಪೂಜ್ಯರನ್ನು, ಈಡೇ=ಸ್ತುತಿಸುತ್ತೇನೆ, ಈಡ ಸ್ತುತೌ ಲಟ್=ಈಡೇ ಎಂಬಲ್ಲಿ ಈಡಸ್ತುತೌ ಎಂಬ ಧಾತುವಿನ ಲಟ್ ಲಕಾರವು.

**ಅವತಾರಿಕಾ** – ವಿಷ್ಣುಮಂಗಲದಲ್ಲಿ ಆಚಾರ್ಯರ ದಿನಚರ್ಯೆಯನ್ನೂ, ಅವರು ಮಾಡುತ್ತಿದ್ದ ದೇವರ ಪೂಜೆಯ ಪ್ರಕಾರ, ಮತ್ತು ಪ್ರವಚನದ ರೀತಿಯನ್ನೂ ವರ್ಣಿಸುತ್ತಾರೆ.

**ಲಬ್ಧಗ್ರಂಥಃ ಸ್ತುತೋಽಲಂ ಲಿಕುಚಕವಿವರೇಣೇಹ ನಿಸ್ಯೇ ದಿನಾನಿ**
**ಶ್ರೀಭರ್ತುಃ ಪ್ರೀತಿವೃದ್ಧ್ಯೈ ವಿವಿಧ ಶುಭಕೃತೀಃ ಕೇವಲಂ ಯಸ್ತು ಕುರ್ವನ್ ।**
**ನಿರ್ಲೇಪೋ ದಗ್ಧಕರ್ಮಾ ಮತಿಕೃತಿಕರಣೈರ್ಲೋಕಶಿಕ್ಷಾಂ ಚ ಕರ್ತುಂ**
**ದೇವೈರ್ವೃಷ್ಟಾಮೃತಾರ್ಚಃ ಪ್ರವಚನನಿರತೋ ಮೇ ಪ್ರವಕ್ತ್ರತ್ವದಃ ಸ್ಯಾತ್ ।।೨೬।।**

**ಗೂಢಭಾವಪ್ರಕಾಶಿಕಾವ್ಯಾಖ್ಯಾಮೂಲ** – ಯಃ ಮಧ್ವಃ ಲಬ್ಧಗ್ರಂಥಃಲಬ್ಧಃ ಗ್ರಂಥಃ ಭಾಷ್ಯಾದಿಕೋಶೋಯೇನ ಸಃ ಲಿಕುಚಕವಿವರೇಣ ಲಿಕುಚಕುಲೋತ್ಪನ್ನಕವಿಶ್ರೇಷ್ಠೇನ ತ್ರಿವಿಕ್ರಮಪಂಡಿತಾಚಾರ್ಯೇಣ ಸ್ತುತಃ ಪ್ರಶಂಸಿತಃ

**ಅಯಂಭಾವಃ** – ಪದ್ಮತೀರ್ಥಾಪಹೃತಂ ತತಃ ಆಚ್ಛಿದ್ಯಪದ್ಮತೀರ್ಥಾದಿದಂಡನಾಂ ವಿನಾ ನ ಸ್ವೀಕಾರ್ಯಂ ಇತಿಭಾವೇನ ಮಧ್ಯಸ್ಥೇ ಸ್ಥಾಪಿತಂ ಭಾಷ್ಯಾದಿಕೋಶಜಾತಂ ಪದ್ಮಾದೀನ್ ದಂಡಯತಾ ಜಯಸಿಂಹಾಖ್ಯನೃಪೇಣ ಸಂಪ್ರಾರ್ಥಿತಃ ಸನ್ ಶ್ರೀಮಧ್ವಃ ತತ್ ಕೋಶಜಾತಂ ಆದಾಯ ಶಂಕರಭಟ್ಟಹಸ್ತೇ ಪೂರ್ವವದೇವ ದತ್ತವಾನ್, ತದಾ ತ್ರಿವಿಕ್ರಮಾಚಾರ್ಯಃ ಸ್ವಾನುಜಸ್ಯ ಶಂಕರಭಟ್ಟಸ್ಯ ದುಷ್ಟಾಪಹೃತಗ್ರಂಥಜಾತಪ್ರಾಪ್ತಿಂ ದೃಷ್ಟ್ವಾ ಪರಿತುಷ್ಟಃ ಶ್ರೀಮಧ್ವಂ ಅಸ್ತೌಷೀತ್ ಇತಿ। ಇಹ ವಿಷ್ಣುಮಂಗಲಾಖ್ಯದೇವಾಲಯೇ ನಿರ್ಲೇಪಃ ಆಗಾಮಿಪಾಪಲೇಪರಹಿತಃ, ದಗ್ಧಕರ್ಮಾ ದಗ್ಧಾನಿ ಭಸ್ಮಸಾತ್ ಕೃತಾನಿ ಕರ್ಮಾಣಿ ಸಂಚಿತಕರ್ಮಾಣಿ ಯಸ್ಯಸಃ ತಥಾ, ಶ್ರೀಭರ್ತುಃ ವಿಷ್ಣೋಃ ಪ್ರೀತಿವೃದ್ಧ್ಯೈಸಂತೋಷಾಭಿವೃದ್ಧ್ಯರ್ಥಂ ಮತಿಕೃತಿಕರಣೈಃ ಮತ್ಯಾ ಮನನೇನ, ಕೃತಿಭಿಃ ಅದ್ಭುತವ್ಯಾಪಾರೈಃ ಕರಣೈಃ ಧರ್ಮಾಚರಣೈಶ್ಚ ಲೋಕಶಿಕ್ಷಾಂ ಚ ಕರ್ತುಂಯಃ ಶುಭಕೃತೀಃ ನಾನಾಶುಭಧರ್ಮಾನ್ ಕುರ್ವನ್ ದಿನಾನಿ ನಿನ್ಯೇ ನೀತವಾನ್ । ಣೀಞ್ ಪ್ರಾಪಣೇ ಲಿಟ್। ತಾನ್ ವ್ಯಾಪಾರಾನಾಹ- ದೇವೈರಿತಿ। ದೈವೈಃ ಇಂದ್ರಾದಿಭಿಃ ವೃಷ್ಟಾಮೃತಾರ್ಚಃ ವೃಷ್ಟಾನಿ ಅಭಿವೃಷ್ಟಾನಿ ಅಮೃತಾನಿ ಯಸ್ಯಾಃ ಸಾ ವೃಷ್ಟಾಮೃತಾ, ವೃಷ್ಟಾಮೃತಾ ಅರ್ಚಾ ವಿಷ್ಣುಪ್ರತಿಮಾ ಯಸ್ಯಸಃ, ಯದಾ ಶ್ರೀಮಧ್ವಃ ದೇವಪೂಜಾಂ ಕರೋತಿ ತದಾ ದೇವಾಃ ಮಧ್ವಪೂಜ್ಯ ಶಾಲಗ್ರಾಮಶಿಲಾಸು ಅಮೃತಂ ವರ್ಷಂತಿ ತದಮೃತಂ ನಿರ್ಮಾಲ್ಯವಿಸರ್ಜನಕಾಲೇ ತನ್ನಿರ್ಮಾಲ್ಯಾದ್ ಘೃತವತ್ ಸ್ರವತ್ ಸರ್ವೈಃ ದೃಷ್ಟಮಿತ್ಯರ್ಥಃ, ಪ್ರವಚನನಿರತಃ ಪ್ರವಚನೇ ವೇದಾಂತವ್ಯಾಖ್ಯಾನೇ ನಿರತಃ ಆಸಕ್ತಃ ಪ್ರಾತಃ ಸ್ನಾತ್ವಾ ಆ ಮಧ್ಯಾಹ್ನಂ ವೇದಾಂತವ್ಯಾಖ್ಯಾಕಾರೀತ್ಯರ್ಥಃ, ಸ ಮಧ್ವಃ ಮೇ ಪ್ರವಕ್ತೃತ್ವದಃ ವ್ಯಾಖ್ಯಾ ತೃತ್ವದಾತಾ ಸ್ಯಾತ್ ಭವೇತ್ ಲಿಙ್॥೨೯॥

**ಪದಚ್ಛೇದ** – ಲಬ್ಧಗ್ರಂಥಃ, ಸ್ತುತಃ, ಅಲಂ ಲಿಕುಚಕವಿವರೇಣ, ಇಹ, ನಿನ್ಯೇ, ದಿನಾನಿ, ಶ್ರೀಭರ್ತುಃ, ಪ್ರೀತಿವೃದ್ಧ್ಯೈ, ವಿವಿಧಶುಭಕೃತೀಃ, ಕೇವಲಂ ಯಃ, ತು, ಕುರ್ವನ್, ನಿರ್ಲೇಪಃ, ದಗ್ಧಕರ್ಮಾ, ಮತಿಕೃತಿಕರಣೈಃ, ಲೋಕಶಿಕ್ಷಾಂ, ಚ ಕರ್ತುಂ, ದೇವೈಃ, ವೃಷ್ಟಾಮೃತಾರ್ಚಃ, ಪ್ರವಚನನಿರತಃ, ಮೇ, ಪ್ರವಕ್ತೃತ್ವದಃ, ಸ್ಯಾತ್ ॥

**ಅನ್ವಯ** – ಯಃ ಲಬ್ಧಗ್ರಂಥಃ ಲಿಕುಚಕವಿವರೇಣ ಅಲಂ ಸ್ತುತಃ, ನಿರ್ಲೇಪಃ ದಗ್ಧಕರ್ಮಾ ಕೇವಲಂ ಶ್ರೀಭರ್ತುಃ ಪ್ರೀತಿವೃದ್ಧ್ಯೈ ಮತಿಕೃತಿಕರಣೈಃ ಲೋಕಶಿಕ್ಷಾಂ ಚ ಕರ್ತುಂಯಃ ವಿವಿಧಶುಭಕೃತೀಃ ಕುರ್ವನ್, ದೇವೈಃ ವೃಷ್ಟಾಮೃತಾರ್ಚಃ ಪ್ರವಚನನಿರತಃ ಸಃ ಮೇ ಪ್ರವಕ್ತೃತ್ವದಃ, ಸ್ಯಾತ್ ।

**ಅನ್ವಯಾರ್ಥ** – ಯಃ=ಯಾವ ಶ್ರೀಮಧ್ವಾಚಾರ್ಯರು ಲಬ್ಧಗ್ರಂಥಃ=ಭಾಷ್ಯಾದಿಕೋಶವನ್ನು ಪಡೆದವರಾಗಿ, ಲಿಕುಚಕವಿವರೇಣ=ಲಿಕುಚವಂಶೋತ್ಪನ್ನರಾದ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರಿಂದ ಅಲಂ=ಅತಿಶಯವಾಗಿ, ಸ್ತುತಃ=ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವರಾದ, ನಿರ್ಲೇಪಃ=ಆಗಾಮಿಪಾಪಲೇಪರಹಿತರಾದ, ದಗ್ಧಕರ್ಮಾ=ಸಂಚಿತಕರ್ಮಗಳೆಲ್ಲವೂ ಸುಟ್ಟು ಬೂದಿಯಾಗಿರುವ, ಕೇವಲಂ=ಕೇವಲವಾಗಿ (ಬರೇ) ಶ್ರೀಭರ್ತುಃ=ಲಕ್ಷ್ಮೀಪತಿಯಾದ ಶ್ರೀಹರಿಯು, ಪ್ರೀತಿವೃದ್ಧ್ಯೈ= ಸಂತೋಷಾತಿಶಯಕ್ಕೋಸ್ಕರ, ಮತಿ=ಮನನವು, ಕೃತಿ=ಅದ್ಭುತ ವ್ಯಾಪಾರಗಳು, ಕರಣೈಃ=ಧರ್ಮಾಚರಣವು ಇವುಗಳಿಂದಲೂ, ಕೃತಿಕರಣೈಃ=ಗ್ರಂಥಗಳ ರಚನೆಗಳಿಂದಲೂ ಲೋಕಶಿಕ್ಷಾಂ ಚ=ಸಜ್ಜನರಿಗೆ ಉಪದೇಶವನ್ನು, ಕರ್ತುಂ=ಮಾಡಲು, ಯಃ ತು=ಯಾವ ಶ್ರೀಮಧ್ವಾಚಾರ್ಯರಾದರೋ, ವಿವಿಧಶುಭಕೃತೀಃ=ನಾನಾಪ್ರಕಾರವಾದ ಮಂಗಳಕರ ವ್ಯಾಪಾರಗಳನ್ನು, ಕುರ್ವನ್=ಮಾಡುತ್ತಾ, ಇಹ=ವಿಷ್ಣುಮಂಗಲ ದೇವಾಲಯದಲ್ಲಿ ದಿನಾನಿ=ದಿನಗಳನ್ನು, ನಿನ್ಯೇ=ಕಳೆದರು. ದೇವೈಃ=ದೇವತೆಗಳಿಂದ, ವೃಷ್ಟಾಮೃತಾರ್ಚಃ=ಸುರಿಸಲ್ಪಟ್ಟ ಅಮೃತದಿಂದ ಕೂಡಿದ ವಿಷ್ಣುಪ್ರತಿಮೆಗಳುಳ್ಳ, ಪ್ರವಚನನಿರತಃ=ವೇದಾಂತವ್ಯಾಖ್ಯಾನದಲ್ಲಿ ಆಸಕ್ತರಾದ, ಸಃ=ಆ ಶ್ರೀಮಧ್ವಾಚಾರ್ಯರು, ಮೇ=ನನಗೆ, ಪ್ರವಕ್ತೃತ್ವದಃ=ಪ್ರವಚನ ಸಾಮರ್ಥ್ಯವನ್ನು ಕೊಡತಕ್ಕಂತಹವರು, ಸ್ಯಾತ್ ಆಗಲಿ.

**ತಾತ್ಪರ್ಯ** – ಆಚಾರ್ಯರು ತಮ್ಮ ಗ್ರಂಥಗಳನ್ನು ಶಂಕರಪಂಡಿತರೆಂಬುವರಲ್ಲಿ ಇಟ್ಟಿದ್ದರು. ಪದ್ಮತೀರ್ಥರೆಂಬ ಸನ್ಯಾಸಿಗಳು ಆ ಗ್ರಂಥಸಮುದಾಯವನ್ನು ಅಪಹರಿಸಿದರು. ಆಚಾರ್ಯರು ಆ ಸಮಾಚಾರವನ್ನು ಕೇಳಿ ಉಡುಪಿಯಿಂದ ಬೇಗನೆ ಬಂದು ಪದ್ಮತೀರ್ಥರನ್ನು ವಾದದಲ್ಲಿ ನಿಗ್ರಹಿಸಿದರು. ಪದ್ಮತೀರ್ಥರು ವಾದದಲ್ಲಿ ಸೋತು ಆಚಾರ್ಯರ

ಗ್ರಂಥಗಳನ್ನು ಬಿಟ್ಟು ಪಲಾಯನ ಮಾಡಿದರು. ಆದರೆ ಪದ್ಮತೀರ್ಥಾದಿಗಳಿಗೆ ರಾಜನ ಕಡೆಯಿಂದ ದಂಡನೆಯಾಗದ ಹೊರತು ತಾನು ಆ ಗ್ರಂಥಗಳನ್ನು ಸ್ವೀಕರಿಸುವುದಿಲ್ಲವೆಂದು ಆಚಾರ್ಯರು ನಿರ್ಧರಿಸಿ ಮಧ್ಯಸ್ಥರಲ್ಲಿ ತಮ್ಮ ಭಾಷ್ಯಾದಿಕೋಶಗ್ರಂಥಗಳನ್ನು ಇಟ್ಟಿದ್ದರು. ವಿಷ್ಣುಭಕ್ತನೂ ಆಚಾರ್ಯರ ಭಕ್ತನೂ ಆದ ಜಯಸಿಂಹರಾಜನು ಪದ್ಮತೀರ್ಥಾದಿಗಳನ್ನು ದಂಡಿಸಿದರು. ಮತ್ತು ಆಚಾರ್ಯರು ಬಂದು ಪುನಃ ತಮ್ಮ ಗ್ರಂಥಗಳನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ಆಚಾರ್ಯರು ಮಧ್ಯಸ್ಥರಲ್ಲಿ ಇಟ್ಟಿದ್ದ ಆ ಗ್ರಂಥಗಳನ್ನು ಸ್ವೀಕರಿಸಿ ಪುನಃ ಶಂಕರಪಂಡಿತರಲ್ಲಿಯೇ ಇಟ್ಟರು. ಆಗ ಶಂಕರಪಂಡಿತರ ಅಣ್ಣನೂ ಜಯಸಿಂಹರಾಜನ ಆಸ್ಥಾನ ಪಂಡಿತರೂ ಆದ ತ್ರಿವಿಕ್ರಮಪಂಡಿತಾಚಾರ್ಯರು ತಮ್ಮನ ಕೈಯಿಂದ ದುಷ್ಟರು ಅಪಹರಿಸಿದ ಗ್ರಂಥಗಳು ಪುನಃ ದೊರಕಿ ತಮ್ಮನಿಗೆ ವಿಜಯವಾದುದನ್ನು ಕಂಡು ಸಂತೋಷಪಟ್ಟು ತನ್ನ ತಮ್ಮನ ಗುರುಗಳೂ ಲೋಕಗುರುಗಳೂ ಆದ ಆಚಾರ್ಯರ ಮಹಿಮೆಯನ್ನು ಕಂಡು ಅವರನ್ನು ಸ್ತೋತ್ರಮಾಡಿದರು. ಆಚಾರ್ಯರು ತ್ರಿವಿಕ್ರಮಪಂಡಿತಾಚಾರ್ಯರ ಸ್ತೋತ್ರಕ್ಕೆ ಅತ್ಯಂತ ಅರ್ಹರೇ ಆಗಿದ್ದರು. ಏಕೆಂದರೆ ಅವರು ಮುಂದೆ ಬರುವ ಪಾಪಗಳ ಲೇಪರಹಿತರು. ಸಂಚಿತವಾದ ಪಾಪಗಳೆಲ್ಲವನ್ನು ನಾಶಮಾಡಿಕೊಂಡವರು. ಅವರಿಗೆ ಪ್ರಾರಬ್ಧಕರ್ಮವೂ, ಪ್ರಕೃತಿ ಬಂಧವೂ ಸುಟ್ಟ ಬಟ್ಟೆಯಂತೆ ಇದ್ದು (ದಗ್ಧಪಟಾಯಮಾನರಾಗಿ) ಯಾವ ದುಃಖಾದಿಗಳಿಗೂ ಕಾರಣವಾಗದೆ ಇರುತ್ತದೆ. ಅವರು ಶ್ರೀಹರಿಯ ಪ್ರಸಾದವು ಮತ್ತೂ ಹೆಚ್ಚಾಗಲೆಂದು ಯಾವಾಗಲೂ ಪರಮಾತ್ಮ ವಿಷಯಕವಾದ ಶಾಸ್ತ್ರಗಳ ಮನನ ಮಾಡುತ್ತಾರೆ. ಅದ್ಭುತವಾದ ವ್ಯಾಪಾರಗಳನ್ನು ಮಾಡುತ್ತಾರೆ. ಅನೇಕ ಗ್ರಂಥನಿರ್ಮಾಣಾದಿ ವ್ಯಾಪಾರಗಳನ್ನು ಮಾಡುತ್ತಾರೆ. ಲೋಕದಲ್ಲಿರುವ ಸಜ್ಜನರಿಗೆ ಮಾರ್ಗದರ್ಶನಕ್ಕಾಗಿ ಮಾನವರಂತೆ ಧರ್ಮಾಚರಣ ಸದಾಚಾರಗಳನ್ನು ಮಾಡಿ ತೋರಿಸುತ್ತಾರೆ. ನಾನಾ ರೀತಿಯ ಮಂಗಳಕರವಾದ ಕಾರ್ಯಗಳನ್ನೂ ಮಾಡಿ ತೋರಿಸುತ್ತಾರೆ. ಇಂತಹ ಆಚಾರ್ಯರು ಶ್ರೀವಿಷ್ಣುಮಂಗಲದೇವಾಲಯದಲ್ಲಿ ಕೆಲವು ದಿನಗಳವರೆಗೆ ವಾಸಮಾಡಿದರು. ಅವರ ಅದ್ಭುತ ವ್ಯಾಪಾರಗಳಲ್ಲಿ ಒಂದು ಹೀಗಿದೆ. ಆಚಾರ್ಯರು ಶಾಲಗ್ರಾಮ ಪ್ರತಿಮಾದಿಗಳನ್ನು ಇಟ್ಟುಕೊಂಡು ದೇವರಿಗೆ ಪೂಜೆ ಮಾಡುತ್ತಿದ್ದಾಗ ದೇವತೆಗಳು ಆಚಾರ್ಯರು ಪೂಜಿಸುತ್ತಿದ್ದ ಶಾಲಿಗ್ರಾಮ ಶಿಲೆಗಳ ಮೇಲೆ ಅಮೃತವನ್ನು ಸುರಿಸುತ್ತಿದ್ದರು. ಮರುದಿವಸ ಪ್ರಾತಃಕಾಲ ನಿರ್ಮಾಲ್ಯ ಪುಷ್ಪತುಳಸಿಗಳಿಂದ ಆ ಅಮೃತವು ಸುರಿಯುತ್ತಿತ್ತು. ಅಲ್ಲಿದ್ದ ಶಿಷ್ಯರು ಅದು ತುಪ್ಪವಿರಬಹುದೆಂದು ಭ್ರಾಂತಿ ಹೊಂದುತ್ತಿದ್ದರು. ಆಗ ಅವರ ಹಿರಿಯರಾದ, ಆಚಾರ್ಯರ ಶಿಷ್ಯರಾದ ಗುರುಗಳು ಇದು ತುಪ್ಪವಲ್ಲ, ದೇವತೆಗಳು ಸುರಿಸಿದ ಅಮೃತವೆಂದು ತಿಳಿಸಿ ಹೇಳುತ್ತಿದ್ದರು. ಆಚಾರ್ಯರ ದೇವರಪೂಜೆಯಲ್ಲಿ ಇಂತಹ ಇನ್ನೂ ಅನೇಕ ಮಹಿಮೆಗಳು ಅಡಗಿದ್ದವು. ಆಚಾರ್ಯರು ಅರುಣೋದಯ ಕಾಲದಲ್ಲಿ ಎದ್ದು ಎಲ್ಲಾ ನಿತ್ಯಾಹ್ನಿಕಗಳನ್ನು ಪೂರೈಸಿ ಸುರ್ಯೋದಯ ಸಮಯದಿಂದ ಆರಂಭಿಸಿ ಮಧ್ಯಾಹ್ನದವರೆಗೂ ಭಾಷ್ಯಾದಿವೇದಾಂತ ಗ್ರಂಥಗಳ ಪ್ರವಚನವನ್ನು ಶಿಷ್ಯರಿಗೆ ಮಾಡಿಸುತ್ತಿದ್ದರು. ಸಜ್ಜನರು ಹೀಗೆಯೇ ನಡೆದುಕೊಳ್ಳಬೇಕೆಂದು ಮಾರ್ಗದರ್ಶನ ಮಾಡಿಸುತ್ತಿದ್ದರು. ಇಂತಹ ಮಹಾಮಹಿಮಸಂಪನ್ನರಾದ ಆಚಾರ್ಯರು ನನಗೂ ಪ್ರವಚನ ಮಾಡುವ ಶಕ್ತಿಯನ್ನು ಕೊಡಲೆಂದೂ ಗ್ರಂಥಕಾರರಾದ ಶ್ರೀಮನ್ನಾರಾಯಣಪಂಡಿತಾಚಾರ್ಯರು ಜೀವೋತ್ತಮರಾದ ಪರಮಗುರುಗಳಾದ ಶ್ರೀಮಧ್ವಾಚಾರ್ಯರನ್ನು ಕುರಿತು ಪ್ರಾರ್ಥನೆ ಮಾಡಿದ್ದಾರೆ. ನಾವೂ ಹೀಗೆ ಪ್ರಾರ್ಥಿಸಬೇಕೆಂದು ಮಾರ್ಗದರ್ಶನ ಮಾಡಿದ್ದಾರೆ.

**ವಿಗ್ರಹವಾದಿಗಳು** - ಲಬ್ಧಃ ಗ್ರಂಥಃ ಯೇನ ಸಃ ಲಬ್ಧಗ್ರಂಥಃ ಕವಿಷು ವರಃ ಕವಿವರಃ ಲಿಕುಚಾನಾಂ (ಲಿಕುಚವಂಶೋತ್ಪನ್ನಾನಾಂ ಮಧ್ಯೇ) ಕವಿವರಃ ಲಿಕುಚಕವಿವರಃ ತೇನ, ಶ್ರಿಯಃ ಭರ್ತಾ, ಶ್ರೀಭರ್ತಾ ಪ್ರೀತೇಃ ವೃದ್ಧಿಃ ಪ್ರೀತಿವೃದ್ಧಿಃ ತಸ್ಯೈ, ಶುಭಾಶ್ಚತಾಃ ಕೃತಯಶ್ಚ ಶುಭಕೃತಯಃ, ವಿವಿಧಾಶ್ಚ ತಾಃ ಶುಭಕೃತಯಶ್ಚ ವಿವಿಧಶುಭಕೃತಯಃ ತಾಃ, ನಿಷ್ಕಾಂತಃ ಲೇಪಾತ್ ನಿರ್ಲೇಪಃ, (ನಿರ್ಗತಃ ಲೇಪಃ ಯಸ್ಮಾತ್ ಸಃ ನಿರ್ಲೇಪಃ) ದಗ್ಧಾನಿ ಕರ್ಮಾಣಿ ಯಸ್ಯಸಃ ದಗ್ಧಕರ್ಮಾ, ಮತಯಶ್ಚ, ಕೃತಯಶ್ಚ ಕರಣಾನಿ ಚ ಮತಿಕೃತಿಕರಣಾನಿ ತೈಃ (ಕೃತಿನಾಂ ಕರಣಾನಿ ಕೃತಿಕರಣಾನಿ, ಮತಯಶ್ಚ ಕೃತಿಕರಣಾನಿ ಚ ಮತಿಕೃತಿಕರಣಾನಿ ತೈಃ) ಲೋಕಾನಾಂ ಶಿಕ್ಷಾ ಲೋಕ ಶಿಕ್ಷಾ ತಾಂ, ವೃಷ್ಟಾನಿ ಅಮೃತಾನಿ ಯಸ್ಯಾಃ ಸಾ ವೃಷ್ಟಾಮೃತಾ, ವೃಷ್ಟಾಮೃತಾ ಅರ್ಚಾಯಸ್ಯ ಸಃ ವೃಷ್ಟಾಮೃತಾರ್ಚಃ ಪ್ರವಚನೇ ನಿರತಃ ಪ್ರವಚನನಿರತಃ, ಪ್ರವಕ್ತೀತಿ ಪ್ರವಕ್ತಾ, ಪ್ರವಕ್ತುಃ ಭಾವಃ ಪ್ರವಕ್ತೃತ್ವಂ ತತ್ ದದಾತೀತಿ ಪ್ರಪಕ್ತೃತ್ವದಃ

**ಕ್ರಿಯಾಪದ** – ನಿನ್ಯೇ, ನಿನ್ಯಾತೇ ನಿನ್ಯಿರೇ, ನಿನ್ಯಿಷೇ ನಿನ್ಯಾಥೇ ನಿನ್ಯಿಢ್ವೇ ನಿನ್ಯಿದ್ವೇ, ನಿನ್ಯೇ **ನಿನ್ಯಿವಹೇ** ನಿನ್ಯಿಮಹೇ ಣೀಞ್ (ನೀ) ಪ್ರಾಪಣೇ ದ್ವಿಕ ಅನಿಟ್ ಉಭ. ಭೂತ ಅನದ್ಯತನ ಪರೋಕ್ಷೇ ಲಿಟ್ ಪ್ರ.ಪು.**ಏ ಸ್ಯಾತ್** ಸ್ಯತಾಂ ಸ್ಯುಃ ಇತ್ಯಾದಿ ಅಸ ಭುವಿ ವಿಧಿಲಿಙ್

**ಪ್ರಯೋಗ** – ಯೇನಲಬ್ಧಗ್ರಂಥೇನ, ಲಿಕುಚಕವಿವರೇಣ ಅಲಂ ಸ್ತುತೇನ, ನಿರ್ಲೇಪೇನ ದಗ್ಧ**ಕರ್ಮಣಾ,** ಕೇವಲಂ ಶ್ರೀಭರ್ತುಃ ಪ್ರೀತಿವೃದ್ಧ್ಯೈ ಲೋಕಶಿಕ್ಷಾಂ ಚ ಕರ್ತುಂ ಯೇನ ತು ವಿವಿಧಶುಭಕೃತೀಃ ಕುರ್ವತಾ **ಇಹ** ದಿನಾನಿ ನಿನ್ಯಿರೇ (ದಿನಗಳು ಕಳೆಯಲ್ಪಟ್ಟವೋ ಕರ್ಮಣಿ) ದೈವ್ಯೈಃ ವ್ಯಾಖ್ಯಾಮೃತಾರ್ಚೇನ ಪ್ರವಚನನಿರತೇನ ತೇನ **ಮೇ** ಪ್ರವಕ್ತೃತ್ವದೇನ ಭೂಯೇತ (ನನಗೆ ವ್ಯಾಖ್ಯಾನ ಶಕ್ತಿಯನ್ನು ಕೊಡುವವರಿಂದ ಆಗೋಣವಾಗಬೇಕು ಭಾವೇ)

**ಗೂಢಭಾವಪ್ರಕಾಶಿಕಾಪ್ರತಿಪದಾರ್ಥ** – ಯಃ=ಯಾವ, ಮಧ್ವಃ=ಶ್ರೀಮಧ್ವಾಚಾರ್ಯರು, ಲಬ್ಧಗ್ರಂಥಃ ಎಂದರೆ, ಲಬ್ಧಃ ಹೊಂದಲ್ಪಟ್ಟ, ಗ್ರಂಥಃ ಭಾಷ್ಯಾದಿಕೊಶಃ, ಗ್ರಂಥವೆಂದರೆ ಭಾಷ್ಯಾದಿಕೋಶವು), ಯೇನ=ಯಾರಿಂದ (ಲಬ್ಧಃ= ಹೊಂದಲ್ಪಟ್ಟಿದೆಯೋ) ಸಃ= ಅಂತಹ ಶ್ರೀಮಧ್ವಾಚಾರ್ಯರು ಲಬ್ಧಗ್ರಂಥಃ ಎಂಬ ಶಬ್ದದಿಂದ ಹೇಳಲ್ಪಡುತ್ತಾರೆ. ಲಿಕುಚಕವಿವರೇಣ ಎಂದರೆ ಲಿಕುಚಕುಲೋತ್ಪನ್ನಕವಿಶ್ರೇಷ್ಠೇನ=ಲಿಕುಚಕುಲದಲ್ಲಿ (ಪೆಜತಾಯ ವಂಶದಲ್ಲಿ) ಉತ್ಪನ್ನರಾದ ಕವಿಶ್ರೇಷ್ಠರಾದ, ತ್ರಿವಿಕ್ರಮ ಪಂಡಿತಾಚಾರ್ಯೇಣ=ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ಎಂದು ಅರ್ಥ, ಅಲಂ=ಚೆನ್ನಾಗಿ, ಸ್ತುತಃ ಪ್ರಶಂಸಿತಃ=ಸ್ತುತಃ ಅಂದರೆ ಪ್ರಶಂಸಿಸಲ್ಪಟ್ಟ ಅಯಂಭಾವಃ=ಇಲ್ಲಿಯ ಅಭಿಪ್ರಾಯ ಹೀಗಿದೆ. ಪದ್ಮತೀರ್ಥಾಪಹೃತಂ=ಪದ್ಮತೀರ್ಥರಿಂದ ಅಪಹರಿಸಲ್ಪಟ್ಟ (ಭಾಷ್ಯಾದಿಕೋಶ ಜಾತಂ=ಭಾಷ್ಯ ಮುಂತಾದ ಗ್ರಂಥಸಮೂಹವು) ತತಃ=ಅವರಿಂದ, ಅಚ್ಛಿದ್ಯ=ತೆಗೆದುಕೊಂಡು, ದಂಡನಾಂವಿನಾ=ಅವರನ್ನು ಶಿಕ್ಷಿಸದೆ, ನಸ್ವೀಕಾರ್ಯಂ=ಸ್ವೀಕರಿಸಲ್ಪಡಬಾರದು, ಇತಿ ಭಾವೇನ=ಎಂಬ ಅಭಿಪ್ರಾಯದಿಂದ, ಮಧ್ಯಸ್ಥೇ=ನಿರ್ಣಾಯಕರಲ್ಲಿ (ಜಾಮೀನುದಾರರಲ್ಲಿ) ಸ್ಥಾಪಿತಂ=ಇಡಲ್ಪಟ್ಟ, ಭಾಷ್ಯಾದಿಕೋಶಜಾತಂ=ಭಾಷ್ಯ ಮುಂತಾದ ಗ್ರಂಥಸಮೂಹವನ್ನು, ಪದ್ಮಾದೀನ್ ದಂಡಯತಾ=ಪದ್ಮತೀರ್ಥ ಮುಂತಾದವರನ್ನು ಶಿಕ್ಷಿಸಿದ, ಜಯಸಿಂಹಾಖ್ಯ**ನೃಪೇಣ=** ಜಯಸಿಂಹನೆಂಬ ರಾಜನಿಂದ, ಸಂಪ್ರಾರ್ಥಿತಃಸನ್=ಚೆನ್ನಾಗಿ ಪ್ರಾರ್ಥಿಸಲ್ಪಟ್ಟವರಾಗಿ, ಶ್ರೀ ಮಧ್ವಃ=ಶ್ರೀಮಧ್ವಾಚಾರ್ಯ**ರು,** ತತ್‌ಕೋಶಜಾತಂ=ಆ ಗ್ರಂಥಸಮೂಹವನ್ನು, ಆದಾಯ=ತೆಗೆದುಕೊಂಡು, ಶಂಕರಭಟ್ಟಹಸ್ತೇ=ಶಂಕರಭಟ್ಟರ **ಕೈಯಲ್ಲಿ,** ಪೂರ್ವವದೇವ=ಹಿಂದಿನಂತೆಯೇ, ದತ್ತವಾನ್=ಕೊಟ್ಟರು. ತದಾ=ಆಗ, ತ್ರಿವಿಕ್ರಮಾಚಾರ್ಯಃ=ತ್ರಿವಿಕ್ರಮಪಂಡಿತಾಚಾರ್ಯ**ರು,** ಸ್ವಾನುಜಸ್ಯ=ತನ್ನ ತಮ್ಮನಾದ, ಶಂಕರಭಟ್ಟಸ್ಯ=ಶಂಕರಭಟ್ಟನಿಗೆ, ದುಷ್ಟಾಪಹೃತ=ದುರ್ಜನರಿಂದ ಅಪಹರಿಸಲ್ಪಟ್ಟ, **ಗ್ರಂಥ=ಗ್ರಂಥಗಳ,** ಪ್ರಾಪ್ತಿಂ=ಹೊಂದುವಿಕೆಯನ್ನು, ದೃಷ್ಟ್ವಾ=ನೋಡಿ, ಪರಿತುಷ್ಟಃ (ಸನ್) ಸಂತೋಷಪಟ್ಟವರಾಗಿ, ಶ್ರೀಮಧ್ವಂ=ಶ್ರೀಮ**ಧ್ವಾಚಾರ್ಯರನ್ನು,** ಅಸ್ತೌಷೀತ್=ಸ್ತೋತ್ರ ಮಾಡಿದರು. ಇಹ ಅಂದರೆ, ವಿಷ್ಣುಮಂಗಲಾಖ್ಯ ದೇವಾಲಯೇ=ವಿಷ್ಣುಮಂಗಲ**ವೆಂಬ ಹೆಸರುಳ್ಳ** ದೇವಾಲಯದಲ್ಲಿ, ನಿರ್ಲೇಪಃ ಅಂದರೆ ಆಗಾಮಿಪಾಪಲೇಪರಹಿತಃ=ಮುಂದೆ ಬರಬಹುದಾದ ಪಾಪಗ**ಳ ಸಂಬಂಧವಿಲ್ಲದ,** ದಗ್ಧಕರ್ಮಾ ಎಂದರೆ, ದಗ್ಧಾನಿ ಅಂದರೆ ಭಸ್ಮಸಾತ್ ಕೃತಾನಿ=ಸುಟ್ಟು ಬೂದಿ ಮಾಡಲ್ಪಟ್ಟ, **ಕರ್ಮಾಣಿ ಅಂದರೆ** ಸಂಚಿತಕರ್ಮಾಣಿ=ಹಿಂದೆ ಸಂಗ್ರಹೀತವಾದ ಪಾಪಕರ್ಮಗಳು, ಯಸ್ಯಸಃ=ಯಾವನಿಗೆ ಇದೆಯೋ **ಅವನು, ತಥಾ='ದಗ್ಧಕರ್ಮಾ'** ಎಂದು ಹೇಳಿಸಿಕೊಳ್ಳುವವನಾಗುತ್ತಾನೆ, ಶ್ರೀಭರ್ತುಃ ಅಂದರೆ ವಿಷ್ಣೋಃ ಶ್ರೀಮನ್ನಾರಾಯಣನ, **ಪ್ರೀತಿವೃದ್ಧ್ಯೈ ಅಂದರೆ** ಸಂತೋಷಾಭಿವೃದ್ಧ್ಯರ್ಥಂ=ಸಂತೋಷಾಭಿವೃದ್ಧಿಗೋಸ್ಕರ, ಮತಿಕೃತಿಕರಣ್ಯೈಃ ಅಂದರೆ **ಮತ್ಯಾ=ಮನನೇನ, ಮತ್ಯಾ ಅಂದರೆ** ಮನನದಿಂದ, ಕೃತಿಭಿಃ ಅಂದರೆ ಧರ್ಮಾಚರಣೈಃ, ಧರ್ಮಾಚರಣಗಳಿಂದಲೂ, ಕರಣೈಃ=**ವ್ಯಾಪಾರಗಳಿಂದಲೂ, ಲೋಕಶಿಕ್ಷಾಂ** ಚ=ಸಜ್ಜನರಿಗೆ ಉಪದೇಶವನ್ನು, ಕರ್ತುಂ=ಮಾಡುವುದಕ್ಕೆ, ಯಃ=ಯಾವ **ಶ್ರೀಮಧ್ವಾಚಾರ್ಯರು ವಿವಿಧಶುಭಕೃತೀಃ** ಅಂದರೆ ನಾನಾವಿಧಶುಭಧರ್ಮಾನ್=ಅನೇಕ ವಿಧವಾದ ಮಂಗಳಕರವಾದ **ಪುಣ್ಯಕಾರ್ಯಗಳನ್ನು, ಕುರ್ವನ್**=ನಡೆಸುತ್ತಾ, ದಿನಾನಿ=ದಿನಗಳನ್ನು ನಿನ್ಯೇ ಅಂದರೆ ನೀತವಾನ್=ಕಳೆದರು **ಣೀಞ್ (ನೀ) ಪ್ರಾಪಣೇಲಿಟ್=ನಿನ್ಯೆ ಎಂಬಲ್ಲಿ ಣೀಞ್** ಪ್ರಾಪಣೇ ಎಂಬ ಪ್ರಾಪಣ=ಹೊಂದಿಸುವುದು, **ಕಳೆಯುವುದು** ಎಂಬ **ಅರ್ಥವುಳ್ಳ ನೀಧಾತುವು.** ಅದರ ಲಿಟ್ ಲಕಾರವು.

ತಾನ್ ವ್ಯಾಪಾರನ್=ಆಚಾರ್ಯರ ಆಶ್ಚರ್ಯಕರವಾದ ಪುಣ್ಯಕರವಾದ ಆ ವ್ಯಾಪಾರಗಳನ್ನು, ಆಹ=ಹೇಳುತ್ತಾರೆ ದೇವೈರಿತಿ. ದೇವೈಃ ಇತ್ಯಾದಿ ಶ್ಲೋಕದಿಂದ, ದೇವೈಃ ಅಂದರೆ ಇಂದ್ರಾದಿಭಿಃ=ಇಂದ್ರಾದಿ ದೇವತೆಗಳಿಂದ, ವೃಷ್ಟಾಮೃತಾರ್ಚಃ ಎಂದರೆ, ವೃಷ್ಟಾನಿ ಅಂದರೆ ಅಭಿವೃಷ್ಟಾನಿ=ಸುರಿಸಲ್ಪಟ್ಟ, ಅಮೃತಾನಿ=ಅಮೃತಗಳು, ಯಸ್ಯಾಃ=ಯಾವಪ್ರತಿಮೆಗೆ ಇವೆಯೋ ಸಾ=(ಅರ್ಚಾ) ಆ ಪ್ರತಿಮೆಯೂ ವೃಷ್ಟಾಮೃತಾ ಎಂದು ಹೇಳಿಸಿಕೊಳ್ಳುತ್ತದೆ. ವೃಷ್ಟಾಮೃತಾ ಅರ್ಚಾ=ಸುರಿಸಲ್ಪಟ್ಟ ಅಮೃತವುಳ್ಳ, ಅರ್ಚಾ ಅಂದರೆ ವಿಷ್ಣುಪ್ರತಿಮೆಯು, ಯಸ್ಯ=ಯಾವ ಶ್ರೀ ಮಧ್ವಾಚಾರ್ಯರಿಗೆ ಇದೆಯೋ, ಸಃ=ಆ ಶ್ರೀಮಧ್ವಾಚಾರ್ಯರು, ವೃಷ್ಟಾಮೃತಾರ್ಚಃ, ಎಂದು ಹೇಳಿಸಿಕೊಳ್ಳುತ್ತಾರೆ. ಯದಾ=ಯಾವಾಗ, ಶ್ರೀಮಧ್ವಃ ಶ್ರೀಮಧ್ವಾಚಾರ್ಯರು, ದೇವಪೂಜಾಂ ಕರೋತಿ=ದೇವರ ಪೂಜೆಯನ್ನು ಮಾಡುತ್ತಾರೋ, ತದಾ=ಆಗ, ದೇವಾಃ=ದೇವತೆಗಳು, ಮಧ್ವಪೂಜ್ಯ ಸಾಲಗ್ರಾಮಶಿಲಾಸು=ಶ್ರೀ ಮಧ್ವಾಚಾರ್ಯರಿಂದ ಪೂಜಿಸಲು ಅರ್ಹವಾದ ಸಾಲಗ್ರಾಮಶಿಲೆಗಳಲ್ಲಿ, ಅಮೃತಂ= ಅಮೃತವನ್ನು, ವರ್ಷಂತಿ=ಸುರಿಸುತ್ತಾರೆ. ತತ್=ಆ, ಅಮೃತಂ=ಅಮೃತವು, ನಿಮಾಲ್ಯವಿಜರ್ಸನಕಾಲೇ=ನಿರ್ಮಾಲ್ಯವನ್ನು ತೆಗೆಯುವ ಸಮಯದಲ್ಲಿ, ತನ್ನಿರ್ಮಾಲ್ಯಾತ್=ಆನಿರ್ಮಾಲ್ಯದ ದೆಸೆಯಿಂದ, ಘೃತವತ್=ತುಪ್ಪದಂತೆ, ಸ್ರವತ್=ಸುರಿಯುತ್ತಾ ಇರುವುದು, ಸರ್ವೈಃ=ಎಲ್ಲರಿಂದಲೂ, ದೃಷ್ಟಂ=ನೋಡಲ್ಪಟ್ಟಿತು, ಇತ್ಯರ್ಥಃ=ಎಂದು ಅಭಿಪ್ರಾಯವು. ಪ್ರವಚನನಿರತಃ ಅಂದರೆ ವೇದಾಂತ ಉಪದೇಶದಲ್ಲಿ ನಿರತಃ ಅಂದರೆ ಆಸಕ್ತಃ=ಆಸಕ್ತರಾದ, ಪ್ರಾತಃ ಸ್ನಾತ್ವಾ=ಬೆಳಿಗ್ಗೆ ಸ್ನಾನಮಾಡಿ, ಆಮಧ್ಯಾಹ್ನಂ=ಮಧ್ಯಾಹ್ನದವರೆಗೂ ವೇದಾಂತವ್ಯಾಖ್ಯಾಕಾರೀ=ವೇದಾಂತಪ್ರವಚನವನ್ನು ಮಾಡುತ್ತಿರುವವರು, ಇತ್ಯರ್ಥಃ=ಎಂದು ಅಭಿಪ್ರಾಯವು. ಸಃ ಅಂದರೆ ಮಧ್ವಃ=ಶ್ರೀಮಧ್ವಾಚಾರ್ಯರು, ಮೇ=ನನಗೆ, ಪ್ರವ್ಯಕ್ತೃತ್ವದಃ ಅಂದರೆ ವ್ಯಾಖ್ಯಾತೃತ್ವದಾತಾ=ವೇದಾಂತ ಪ್ರವಚನ ಶಕ್ತಿಯನ್ನು ಕೊಡುವವರು, ಸ್ಯಾತ್ ಅಂದರೆ ಭವೇತ್=ಆಗಲಿ. ಲಿಜ್=ಸ್ಯಾತ್ ಎಂಬುದು ಅಸ್ ಧಾತುವಿನ ವಿಧಿಲಿಜ್ ಲಕಾರವು ॥೨೬॥

**ಅವತಾರಿಕಾ** - ಮಧ್ಯಾಹ್ನದಿಂದ ರಾತ್ರಿಯವರೆಗೆ ಪುನಃ ಆಚಾರ್ಯರ ನಿತ್ಯಾಹ್ನಿಕಾದಿ ಅದ್ಭುತ ವ್ಯಾಪಾರಗಳನ್ನು ವರ್ಣಿಸುತ್ತಾರೆ.

**ಸ್ನಾತೋ ದೇವಾಭಿಷೇಕ್ತಾ ಸದರಿದರಧರಸ್ತಂತ್ರಶಾಸ್ತ್ರಾನುಸಾರೀ**
**ಸಮ್ಯಕ್ ಸಂಪೂಜ್ಯವಿಷ್ಣುಂ ವರತುಲಸಿಕಯಾ ದರ್ಶನೀಯೋsಥಭುಕ್ತಾ ।**
**ನಾನಾಲೋಕಾಭಿನಂದೀಗುರುರಥ ವಿಲಸದ್ ವ್ಯಾಖ್ಯ ಯಾಸಾಂಧ್ಯಾಕೃತ್ಯಂ**
**ಕೃತ್ವಾ ಗೋವಿಂದಲೀಲಾಕಥಕಉರುಕಥಾಂವೈಷ್ಣವೀಂವಾಚಯೇನ್ನಃ ॥೨೭॥**

**ಗೂಢಭಾವಪ್ರಕಾಶಿಕಾವ್ಯಾಖ್ಯಾನಮೂಲ** – ಸ್ನಾತ ಇತಿ - ಸ್ನಾತಃ ಮಾಧ್ಯಾಹ್ನಿಕಸ್ನಾನಕಾರೀ, ದೇವಾಭಿಷೇಕ್ತಾ ದೇವಸ್ಯ ವಿಷ್ಣ್ವಧಿಷ್ಠಾನಸಾಲಗ್ರಾಮಸ್ಯ ಅಭಿಷೇಕ್ತಾ ಅಭಿಷೇಕಂ ಕುರ್ವಾಣಃ, ವೇದಾಂತವ್ಯಾಖ್ಯಾನಂ ಅವಸಾಯ್ಯ ಮಾಧ್ಯಾಹ್ನಿಕಸ್ನಾನತೀರ್ಥಾಯ ತಟಾಕತೀರೇ ದೇವಸ್ಯಾಭಿಷೇಕಂ ಕೃತವಾನ್ ಇತಿಭಾವಃ । ಸದರಿದರಧರಃ ಅರಿಶ್ಚ ದರಶ್ಚ ಅರಿದರೌ, ಸಂತೌ ನಿರ್ದುಷ್ಟೌ (ಅರಿದರೌ) ಶಂಖಚಕ್ರೇ ಧರತೀತಿ ಸಃ ತಥಾ। ದ್ವಾದಶೋರ್ಧ್ವಪುಂಡ್ರಾಣಿ ಶಂಖಚಕ್ರಾದಿ ಪಂಚಮುದ್ರಾಶ್ಚ ಧೃತವಾನ್ ಇತಿ ಭಾವಃ। ತಂತ್ರಶಾಸ್ತ್ರಾನುಸಾರೀ (ತಂತ್ರಂ ಪಂಚರಾತ್ರಂ ಅನುಸರತೀತಿ ಸಃ ತಥಾ) ತಂತ್ರಸಾರಶಾಸ್ತ್ರಾತ್ಮಕ ಪಂಚರಾತ್ರಾನುಸಾರೇಣ ವಿಷ್ಣುಪೂಜಕಃವಿಷ್ಣುಂ ವರತುಲಸಿಕಯಾ ಉತ್ತಮಶ್ರೀತುಲಸೀಗಂಧಸಮೂಹೇನ ಸಮ್ಯಕ್ ಸಂಪೂಜ್ಯ, ಹರಿನಿರ್ಮಾಲ್ಯಕರ್ಣಧೃತೋತ್ತಮತುಲಸಿಗುಚ್ಛೇನ ದರ್ಶನೀಯಃ, ರಮ್ಯ ಇತಿ ವಾ, ಅಥ ದೇವಪೂಜಾನಂತರಂ ಭುಕ್ತ್ವಾ ನೈವೇದ್ಯಶೇಷಭಿಕ್ಷಾಂ ಕೃತ್ವಾ ವಿಲಸದ್ ವ್ಯಾಖ್ಯಯಾ ಭಾಸಮಾನವ್ಯಾಖ್ಯಾನೇನ ನಾನಾಲೋಕಾಭಿನಂದೀ ನಾನಾಜನಸಂತೋಷಕಾರೀ ಗುರುಃ ಅಥ ಸಾಯಂಕಾಲೇ ಸಾಂಧ್ಯಂ ಕೃತ್ಯಂ ಸಂಧ್ಯಾಸಂಬಂಧಿಕರ್ಮ, ಕೃತ್ವಾ, ಉತ ಅನಂತರಂ ಗೋವಿಂದಲೀಲಾಕಥಕಃ ಗೋವಿಂದಸ್ಯ ಲೀಲಾಃ ಚರಿತಾನಿ (ತೇಷಾಂ) ಕಥಕಃ ನಿಶಿಬಹುಕಾಲಂ ಭಾಗವತವ್ಯಾಖ್ಯಾತಾ ಇತ್ಯರ್ಥಃ ನಃ ಅಸ್ಮಾನ್ ಸಃ ಮಧ್ವಃ ವೈಷ್ಣವೀಂ ವಿಷ್ಣುಪ್ರತಿಪಾದಿಕಾಂ। ಕಥಾಂ ವಾಚಯೇತ್ ವಚ ಪರಿಭಾಷಣೇ ಲಿಜ್ ॥೨೭॥

**ಪದಚ್ಛೇದ** - ಸ್ನಾತಃ, ದೇವಾಭಿಷೇಕ್ತಾ, ಸದರಿದರಧರಃ, ತಂತ್ರಶಾಸ್ತ್ರಾನುಸಾರೀ, ಸಮ್ಯಕ್ ಸಂಪೂಜ್ಯ, ವಿಷ್ಣುಂ ವರತುಲಸಿಕಯಾ, ದರ್ಶನಿಯಃ ಅಥ, ಭುಕ್ತ್ವಾ ನಾನಾಲೋಕಾಭಿನಂದೀ, ಗುರುಃ, ಅಥ, ವಿಲಸದ್ ವ್ಯಾಖ್ಯಯಾ, ಸಾಂಧ್ಯಕೃ-ತ್ಯಂ, ಕೃತ್ವಾ, ಗೋವಿಂದಲೀಲಾಕಥಕಃ, ಉರುಕಥಾಂ ವೈಷ್ಣವೀಂ ವಾಚಯೇತ್, ನಃ॥

**ಅನ್ವಯ** - ಸ್ನಾತಃ ದೇವಾಭಿಷೇಕ್ತಾ, ಸದರಿದರಧರಃ ತಂತ್ರಶಾಸ್ತ್ರಾನುಸಾರೀ, ಸಮ್ಯಕ್ ಸಂಪೂಜ್ಯ, ವರತುಲಸಿಕಯಾ, ವಿಷ್ಣುಂ ಸಮ್ಯಕ್ ಸಂಪೂಜ್ಯ ದರ್ಶನಿಯಃ ಅಥ, ಭುಕ್ತ್ವಾ ವಿಲಸದ್ ವ್ಯಾಖ್ಯಯಾ ನಾನಾಲೋಕಾಭಿನಂದೀ, ಅಥ ಸಾಂಧ್ಯಕೃ-ತ್ಯಂ ಕೃತ್ವಾ, ಉತ ಗೋವಿಂದಲೀಲಾಕಥಕಃ, ಗುರುಃ ನಃ ವೈಷ್ಣವೀಂ (ಉರು) ಕಥಾಂ ವಾಚಯೇತ್।

**ಅನ್ವಯಾರ್ಥ** – ಸ್ನಾತಃ=ಮಾಧ್ಯಾಹ್ನಿಕ ಸ್ನಾನಮಾಡಿರುವ, ದೇವಾಭಿಷೇಕ್ತಾ=ದೇವರಿಗೆ ಅಭಿಷೇಕವನ್ನು ಮಾಡಿರುವ, ಸದರಿದರಧರಃ=ನಿರ್ದೋಷವಾದ ಚಕ್ರಶಂಖಗಳನ್ನು, ಧರಿಸಿದ, ತಂತ್ರಶಾಸ್ತ್ರಾನುಸಾರೀ=ಪಂಚರಾತ್ರವೆಂಬ ತಂತ್ರಶಾಸ್ತ್ರವನ್ನು ಅನುಸರಿಸಿರುವ, ವರತುಲಸಿಕಯಾ=ಉತ್ತಮವಾದ ತುಳಸಿಯಿಂದ, ವಿಷ್ಣುಂ=ಶ್ರೀಮನ್ನಾರಾಯಣನನ್ನು, ಸಮ್ಯಕ್=ಚೆನ್ನಾಗಿ, ಸಂಪೂಜ್ಯ=ಪೂಜಿಸಿ, ದರ್ಶನಿಯಃ=(ಹರಿಪ್ರಸಾದ ರೂಪವಾದ ತುಳಸೀ ಗಂಧಾದಿಗಳಿಂದ) ನೋಡಲು ಯೋಗ್ಯರಾದ, (ಮನೋಹರರಾದ) ಅಥ=ದೇವ ಪೂಜಾನಂತರದಲ್ಲಿ ಭುಕ್ತ್ವಾ=ಹರಿಪ್ರಸಾದ ರೂಪವಾದ ನೈವೇದ್ಯಶೇಷವನ್ನು ಸ್ವೀಕರಿಸಿ, ವಿಲಸದ್ವ್ಯಾಖ್ಯಯಾ=ಪ್ರಕಾಶಮಾನವಾದ ಪ್ರವಚನದಿಂದ, ನಾನಾಲೋಕಭಿನಂದೀ=ಅನೇಕ ಪ್ರಕಾರದ ಜನರನ್ನು ಸಂತೋಷಪಡಿಸಿದ, ಅಥ=ಅನಂತರ, (ಪ್ರವಚನಾನಂತರ ಸಾಯಂಕಾಲದಲ್ಲಿ) ಸಾಂಧ್ಯಕೃತ್ಯಂ=ಸಾಯಂಕಾಲಕ್ಕೆ ಸಂಬಂಧಪಟ್ಟ ಸ್ನಾನಾದ್ಯಾಹ್ನಿಕವನ್ನು, ಕೃತ್ವಾ=ಮಾಡಿ, ಉತ ಅನಂತರ, ಗೋವಿಂದಲೀಲಾಕಥಕಃ=(ಭಾಗವತೋಕ್ತವಾದ) ಶ್ರೀ ಕೃಷ್ಣನ ಚರಿತ್ರೆಗಳನ್ನು ಹೇಳುತ್ತಿರುವ, ಗುರುಃ=ಶ್ರೀ ಮಧ್ವಾಚಾರ್ಯಗುರುಗಳು, ನಃ=ನಮ್ಮನ್ನು, ವೈಷ್ಣವೀಂ=ವಿಷ್ಣುವಿನ ಸರ್ವೋತ್ತಮತ್ವಾದಿ ಮಹಿಮೆಯನ್ನು ಪ್ರತಿಪಾದಿಸುವ, (ಉರು) ಕಥಾಂ=ಶ್ರೇಷ್ಠವಾದ ಕಥೆಯನ್ನು, ವಾಚಯೇತ್=ಪ್ರವಚನಮಾಡುವಂತೆ ಮಾಡಲಿ.

**ತಾತ್ಪರ್ಯ** - ಆಚಾರ್ಯರು ಮಧ್ಯಾಹ್ನದವರೆಗೂ ಪ್ರವಚನ ಮಾಡಿದರು. ಅನಂತರ ಮಾಧ್ಯಾಹ್ನಿಕ ಸ್ನಾನ ಮಾಡಿದರು. ಪರಮಾತ್ಮನ ದಿವ್ಯಸನ್ನಿಧಾನಪಾತ್ರವಾಗಿರುವ ಸಾಲಿಗ್ರಾಮಗಳಿಗೆ ಕೆರೆಯ ದಡದಲ್ಲಿಯೇ ಅಭಿಷೇಕಮಾಡಿ ~~ತೀರ್ಥವನ್ನು ಸ್ವೀಕರಿಸಿದರು. ಅನಂತರ ಮಠದಲ್ಲಿರುವ ದೇವಪೂಜಾಗೃಹಕ್ಕೆ ಬಂದು ಗೋಪಿ ಚಂದನದಿಂದ ಹನ್ನೆರಡು~~ ಊರ್ಧ್ವಪುಂಡ್ರಗಳನ್ನು ಧರಿಸಿ, ಆ ಊರ್ಧ್ವಪುಂಡ್ರಗಳ ಮೇಲೆ ಶ್ರೇಷ್ಠವಾದ ಚಕ್ರಶಂಖ ಮುಂತಾದ ಮುದ್ರೆಗಳನ್ನು ಧರಿಸಿದರು.

ಪಂಚರಾತ್ರಾಗಮದಲ್ಲಿ ಹೇಳಿರುವ ಕ್ರಮವನ್ನು ಅನುಸರಿಸಿ ಸರ್ವೋತ್ತಮನಾದ ನಾರಾಯಣನನ್ನು ಉತ್ತಮವಾದ ತುಲಸೀಗಂಧ ಪುಷ್ಪಾದಿಗಳಿಂದ ಚೆನ್ನಾಗಿ ಪೂಜಿಸಿದರು. ದೇವರ ಪೂಜೆಯನ್ನು ಮುಗಿಸಿ ದೇವರ ಪ್ರಸಾದರೂಪವಾದ ತುಲಸಿಯನ್ನು ಕಿವಿಗಳಲ್ಲಿ ಧರಿಸಿ ಗಂಧಾದಿಗಳನ್ನು ಹಚ್ಚಿಕೊಂಡು ಆಚಾರ್ಯರು ಪರಮಸುಂದರರಾಗಿ ನೋಡಲು ಅತ್ಯಂತ ಮನೋಹರರಾಗಿ ಕಾಣಿಸಿದರು. ಅನಂತರ ಅವರು ಹರಿಪ್ರಸಾದರೂಪವಾದ ನೈವೇದ್ಯಭಿಕ್ಷೆಯನ್ನು ಸ್ವೀಕರಿಸಿದರು. ಭೋಜನಾನಂತರ ತನ್ನ ದರ್ಶನಕ್ಕಾಗಿ ಕಾದಿದ್ದ ಜನರಿಗೆ ದರ್ಶನವನ್ನು ಕೊಟ್ಟು ಅವರನ್ನು ಅಭಿನಂದಿಸಿ ಆಶೀರ್ವದಿಸಿ ಪುನಃ ಪ್ರವಚನವನ್ನು ಪ್ರಾರಂಭಿಸಿದರು. ಸಾಯಂಕಾಲದವರೆಗೂ ಪ್ರವಚನವನ್ನು ಮಾಡಿ ಅನಂತರ ಸಾಯಂಕಾಲದ ಸ್ನಾನಾಹ್ನಿಕಾದಿಗಳನ್ನು ಮಾಡಿ, ರಾತ್ರಿ ಬಹಳ ಹೊತ್ತಿನವರೆಗೂ ಭಾಗವತೋಕ್ತವಾದ ಶ್ರೀಕೃಷ್ಣನ ಲೀಲಾಚರಿತ್ರೆಗಳನ್ನು ಭಾಗವತದ ಶ್ಲೋಕಗಳ ವ್ಯಾಖ್ಯಾನ ಸಹಿತವಾದಿ ಹೇಳುತ್ತಿದ್ದರು. ಇಂತಹ ಶ್ರೀಮಧ್ವಾಚಾರ್ಯರು ಶ್ರೀಹರಿಯ ಮಹಿಮೆಯನ್ನು ಪ್ರತಿಪಾದಿಸುವ, ಶಾಸ್ತ್ರ ಪುರಾಣಾದಿಗಳ ಪ್ರವಚನ ಮತ್ತು ವ್ಯಾಖ್ಯಾನಗಳನ್ನು ನಮ್ಮಿಂದಲೂ ಮಾಡಿಸಲಿ ಎಂದು ಶ್ರೀಮನ್ನಾರಾಯಣಪಂಡಿತಾಚಾರ್ಯರು ಪ್ರಾರ್ಥಿಸಿದ್ದಾರೆ.

**ವಿಗ್ರಹ** – ದೇವಾನ್ ಅಭಿಷಿಂಚತಿ ಇತಿ ದೇವಾಭಿಷೇಕ್ತಾ, ಅರಾಣಿ ಅಸ್ಯ ಸಂತೀತಿ ಅರಿ, ಅರಿಚ ದರಶ್ಚ ಅರಿದರೌ (ಅಥವಾ ಅರಿಶ್ಚ ದರಶ್ಚ ಅರಿದರೌ) ಸಂತೌ ಚ ತೌ ಅರಿದರೌ ಚ ಸದರಿದರೌ, ಧರತೀತಿ ಧರಃ,

ಸದರಿದರಯೋಃ ಧರಃ ಸದರಿದರಧರಃ (ಅರಿಃ= A wheel Apte). ತಂತ್ರಂ ಚ ತತ್ ಶಾಸ್ತ್ರಂ ಚ ತಂತ್ರಶಾಸ್ತ್ರಂ, ತತ್ ಅನುಸರತೀತಿ ತಂತ್ರಶಾಸ್ತ್ರಾನುಸಾರೀ, ತುಲಸೀಏವ ತುಲಸಿಕಾ, ವರಾ ಚ ಸಾ ತುಲಸಿಕಾ ಚ ವರತುಲಸಿಕಾ ತಯಾ. ದ್ರಷ್ಟುಂ ಯೋಗ್ಯಃ ದರ್ಶನಿಯಃ, ನಾನಾ ಚ ತೇ ಲೋಕಾಶ್ಚ ನಾನಾಲೋಕಾಃ ನಾನಾಲೋಕಾನ್ ಅಭಿನಂದತೀತಿ ನಾನಾಲೋಕಾಭಿನಂದೀ, ವಿಲಸಂತೀ ಚ ಸಾ ವ್ಯಾಖ್ಯಾ ಚ ವಿಲಸದ್ ವ್ಯಾಖ್ಯಾ ತಯಾ, ಸಂಧ್ಯಾಯಾಂ ಭವಂ ಸಾಂಧ್ಯಂ, ಸಾಂಧ್ಯಂ ಚ ತತ್ ಕೃತ್ಯಂ ಚ ಸಾಂಧ್ಯಕೃತ್ಯಂ ತತ್, ಗೋವಿಂದಸ್ಯ ಲೀಲಾಃ ಗೋವಿಂದಲೀಲಾಃ, ಗೋವಿಂದಲೀಲಾನಾಂ ಕಥಕಃ ಗೋವಿಂದಲಿಲಾಕಥಕಃ, (ಉರ್ವೀಚ ಸಾ ಕಥಾ ಚ ಉರು ಕಥಾ ತಾಂ) ವ್ಯಾಖ್ಯಾನದಲ್ಲಿ ಉತ ಕಥಾಂ ಎಂಬುದಾಗಿಯೇ ಪಾಠವನ್ನಿಟ್ಟುಕೊಂಡು ಉತ ಅನಂತರ ಎಂದು ಅರ್ಥವನ್ನು ಬರೆದಿದ್ದಾರೆ. ಆದುದರಿಂದ ಉರು ಕಥಾಂ ಎಂದೇ ಮೂಲಪಾಠವು ರಾಯರಿಗೆ ಸಂಮತವೆಂದು ಕಾಣಿಸುತ್ತದೆ) ವಿಷ್ಣೋಃ ಇಯಂ ವೈಷ್ಣವೀ ತಾಂ,

**ಕ್ರಿಯಾಪದ** – ವಾಚಯೇತ್ ವಾಚಯೇತಾಂ ವಾಚಯೇಯುಃ ವಾಚಯೇಃ ವಾಚಯೇತಂ ವಾಚಯೇತ ವಾಚಯೇಯಂ ವಾಚಯೇವ ವಾಚಯೇಮ ಬ್ರೂಇಞ್ ವ್ಯಕ್ತಾಯಾಂ ವಾಚಿ ಸಕರ್ಮಕ ಸೇಟ್ ಣಿಜಂತ ಉಭಯಪದಿ ವಿಧಿಲಿಙ್ ಪ್ರಥಮ ಏಕವಚನಂ.

**ಪ್ರಯೋಗ** - ಸ್ನಾತೇನ ದೇವಭಿಷೇಕ್ತ್ರಾ ಸದರಿದರಧರೇಣ ತಂತ್ರಶಾಸ್ತ್ರಾನುಸಾರಿಣಾ ವರತುಲಸಿಕಯಾ ವಿಷ್ಣುಂ ಸಮ್ಯಕ್ ಸಂಪೂಜ್ಯ ದರ್ಶನೀಯೇನ ಅಥ ಭುಕ್ತ್ವಾ ವಿಲಸದ್ ವ್ಯಾಖ್ಯಯಾ ನಾನಾಲೋಕಾಭಿನಂದಿನಾ, ಅಥ ಸಾಂಧ್ಯ ಕೃತ್ಯಂ ಕೃತ್ವಾ ಉತ ಗೋವಿಂದಲೀಲಾಕಥಕೇನ ಗುರುಣಾ ವಯಂ ವೈಷ್ಣವೀಂ ಉರುಕಥಾಂ ವಾಚ್ಯೇಮ. (ಪ್ರವಚನ ಮಾಡಿಸಲ್ಪಡಬೇಕು.)

**ಗೂಢಾಭಾವಪ್ರಕಾಶಿಕಾ ಪದಪದಾರ್ಥ** – ಸ್ನಾತಃ ಮಧ್ಯಾಹ್ನಿಕಸ್ನಾನಕಾರೀ=ಸ್ನಾತಃ ಎಂದರೆ ಮಧ್ಯಾಹ್ನದ ಸ್ನಾನವನ್ನು ಮಾಡಿದವರು ಎಂದು ಅರ್ಥ, ದೇವಾಭಿಷೇಕ್ತಾ ಎಂದರೆ, ದೇವಸ್ಯ ವಿಷ್ಣ್ವಧಿಷ್ಠಾನಸಾಲಗ್ರಾಮಸ್ಯ=ದೇವಸ್ಯ ಎಂದರೆ ವಿಷ್ಣುವಿನ ಸನ್ನಿಧಾನಪಾತ್ರವಾದ ಸಾಲಗ್ರಾಮ ಶಿಲೆಗೆ, ಅಭಿಷೇಕ್ತಾ=ಅಭಿಷೇಕಂ ಕುರ್ವಾಣಃ ಅಭಿಷೇಕ್ತಾ ಎಂದರೆ ಅಭಿಷೇಕವನ್ನು ಮಾಡುತ್ತಿರುವವರು, ಎಂದು ಅರ್ಥ. (ಶ್ರೀ ಮಧ್ವಾಚಾರ್ಯರು) ವೇದಾಂತವ್ಯಾಖ್ಯಾನಂ= ಉಪನಿಷತ್ತು ಮುಂತಾದವುಗಳ ಪ್ರವಚನವನ್ನು, ಅವಸಾಯ್ಯ=ಸಮಾಪ್ತಿಗೊಳಿಸಿ, ಮಧ್ಯಾಹ್ನಿಕಸ್ನಾನತೀರ್ಥಾಯ ಮಧ್ಯಾಹ್ನದ ಸ್ನಾನಮಾಡಿದ ಮೇಲೆ ಸ್ವೀಕರಿಸಬೇಕಾದ ತೀರ್ಥಕ್ಕೋಸ್ಕರ, ತಟಾಕತೀರೇ=ಸರೋವರದದಡದಲ್ಲಿ, ದೇವಸ್ಯ=ಸಾಲಗ್ರಾಮ ಶಿಲಾಸನ್ನಿಹಿತನಾದ ಶ್ರೀಹರಿಗೆ, ಅಭಿಷೇಕಂ=ಅಭಿಷೇಕವನ್ನು, ಕೃತವಾನ್=ಮಾಡಿದರು, ಇತಿಭಾವಃ=ಎಂದು ಅಭಿಪ್ರಾಯವು. ಸದರಿದರಧರಃ ಎಂಬ ಪದಕ್ಕೆ ಅರ್ಥವನ್ನು ಹೇಳುತ್ತಾರೆ, ಅರಿಶ್ಚ=ಚಕ್ರವೂ, ದರಶ್ಚ=ಶಂಖವೂ, ಇವೆರಡೂ, ದ್ವಂದ್ವಸಮಾಸ ಮಾಡಿದಾಗ, ಅರಿದರೌ ಎಂಬ ಶಬ್ದದಿಂದ ಹೇಳಲ್ಪಡುತ್ತವೆ. ಸಂತೌ=ನಿರ್ದುಷ್ಟೌ, ಸಂತೌ ಅಂದರೆ ದೋಷವಿಲ್ಲದ, ಅರಿದರೌ)=ಅರಿದರೌ ಅಂದರೆ ಚಕ್ರಶಂಖೌ=ಚಕ್ರಶಂಖಾದಿಗಳನ್ನು ಧರತೀತಿ=ಧರಿಸುತ್ತಾರೆ. ಇತಿ=ಎಂದು, ಸಃ=ಆ ಶ್ರೀಮದಾಚಾರ್ಯರು, ತಥಾ=ಹಾಗೆ ಅಂದರೆ ಸದರಿದರಧರಃ ಎಂಬ ಶಬ್ದದಿಂದ ಹೇಳಲ್ಪಡುತ್ತಾರೆ. ದ್ವಾದಶೋರ್ಧ್ವಪುಂಡ್ರಾಣಿ= ಹನ್ನೆರಡು ಗೋಪೀಚಂದನದ ಊರ್ಧ್ವಪುಂಡ್ರನಾಮಗಳನ್ನು ಶಂಖಚಕ್ರಾದಿಪಂಚಮುದ್ರಾಶ್ಚ=ಶಂಖ ಚಕ್ರ ಮುದಲಾದ ಐದು ಮುದ್ರೆಗಳನ್ನು, ಧೃತವಾನ್=ಧರಿಸಿದರು. ಇತಿ ಭಾವಃ=ಎಂದು ಅಭಿಪ್ರಾಯವು. ತಂತ್ರಶಾಸ್ತ್ರಾನುಸಾರೀ ಎಂದರೆ, ತಂತ್ರಂ=ಪಂಚರಾತ್ರಂ, ತಂತ್ರಂ ಎಂದರೆ ಪಂಚರಾತ್ರವನ್ನು, ಅನುಸರತಿ ಇತಿ=ಅನುಸರಿಸುತ್ತಾರೆ ಎಂದು ಸಃ=ಆ ಶ್ರೀಮಧ್ವಾಚಾರ್ಯರು ತಥಾ=ತಂತ್ರಶಾಸ್ತ್ರಾನುಸಾರೀ ಎಂಬ ಪದದಿಂದ ಹೇಳಲ್ಪಡುತ್ತಾರೆ. ತಂತ್ರಸಾರಶಾಸ್ತ್ರಾತ್ಮಕ=ತಂತ್ರ ಸಾರಶಾಸ್ತ್ರಸ್ವರೂಪವಾದ, ಪಂಚರಾತ್ರಾನುಸಾರೇಣ=ಪಂಚರಾತ್ರ ಆಗಮದ ಕ್ರಮದಿಂದ (ಅನುಸರಣೆಯಿಂದ,) ವಿಷ್ಣುಪೂಜಕಃ=ವಿಷ್ಣುವನ್ನು ಪೂಜಿಸುವ ಶ್ರೀ ಮಧ್ವಾಚಾರ್ಯರು ವಿಷ್ಣುಂ=ಶ್ರೀ ಮನ್ನಾರಾಯಣನನ್ನು ವರತುಲಸಿಕಯಾ= ಶ್ರೇಷ್ಠವಾದ ತುಲಸಿಯಿಂದ, ಅಂದರೆ ಉತ್ತಮ ಶ್ರೀತುಲಸೀಗಂಧಸಮೂಹೇನ=ಶ್ರೇಷ್ಠವಾದ ಶ್ರೀತುಲಸೀ ಮತ್ತು ಗಂಧ ಸಮೂಹದಿಂದ, ಎಂದು ಅಭಿಪ್ರಾಯ ಸಮ್ಯಕ್=ಚೆನ್ನಾಗಿ, ಸಂಪೂಜ್ಯ=ಪೂಜಿಸಿ, ಹರಿನಿರ್ಮಾಲ್ಯ=ಶ್ರೀಹರಿಯ ನಿರ್ಮಾಲ್ಯರೂಪವಾದ, ಕರ್ಣಧೃತ=ಕಿವಿಗಳಲ್ಲಿ ಧರಿಸಲ್ಪಟ್ಟ, ಉತ್ತಮತುಲಸಿಗುಚ್ಛೇನ=ಶ್ರೇಷ್ಠವಾದ ತುಲಸಿಯ (ಗೊಂಚಲಿನಿಂದ) ದಳದಿಂದ, ದರ್ಶನೀಯಃ=ನೋಡಲು

ಯೋಗ್ಯರಾದ, ರಮ್ಯಃ ಇತಿ ವಾ=ಸ್ವಭಾವದಿಂದಲೇ ಮನೋಹರವಾದ, ಎಂದಾದರೂ ಅರ್ಥ, **ಅಥ ಅಂದರೆ** ದೇವಪೂಜಾನಂತರಂ=ದೇವರ ಪೂಜೆಯ ಅನಂತರ, ಭುಕ್ತ್ವಾ ಎಂದರೆ ನೈವೇದ್ಯಶೇಷಭಿಕ್ಷಾಂ ಕೃತ್ವಾ=ಹರಿಪ್ರಸಾದ**ರೂಪವಾದ** ನೈವೇದ್ಯದ ಉಳಿದ ಭಾಗವನ್ನು ಭಿಕ್ಷಾರೂಪವಾಗಿ ಸ್ವೀಕರಿಸಿ, ವಿಲಸದ್ ವ್ಯಾಖ್ಯಯಾ ಅಂದರೆ ಭಾಸಮಾನ**ವ್ಯಾಖ್ಯಾನೇನ=** ಶೋಭಿಸುತ್ತಿರುವ ಪ್ರವಚನದಿಂದ, ನಾನಾಲೋಕಾಭಿನಂದೀ=ನಾನಾ ಜನಸಂತೋಷಕಾರೀ=ಅನೇಕ ಪ್ರಕಾರದ **ಜನರನ್ನು** ಸಂತೋಷಪಡಿಸಿದ, ಗುರುಃ=ಶ್ರೀಮಧ್ವಾಚಾರ್ಯರು, ಅಥ ಅಂದರೆ ಸಾಯಂಕಾಲೇ=ಸಾಯಂಕಾಲದಲ್ಲಿ, **ಸಾಂಧ್ಯಂ** ಕೃತ್ಯಂ=ಸಂಧ್ಯಾಸಂಬಂಧಿಕರ್ಮ ಅಂದರೆ ಸಾಯಂಕಾಲ ಮಾಡಬೇಕಾದ ಸ್ನಾನಧ್ಯಾನಾದಿ ಕಾರ್ಯವನ್ನು, ಕೃತ್ವಾ**=ಮಾಡಿ** ಉತ=ಅನಂತರಂ ಅಂದರೆ ಅದರ ಮೇಲೆ ಗೋವಿಂದಲೀಲಾಕಥಕಃ, ಅಂದರೆ, ಗೋವಿಂದಸ್ಯ=ಶ್ರೀಕೃಷ್ಣನ, **ಲೀಲಾಃ** =ಚರಿತಾನಿ ಅಂದರೆ ಚರಿತ್ರೆಗಳು, ತೇಷಾಂ=ಅವುಗಳ, ಕಥಕಃ=ಪ್ರವಚನಕಾರರಾದ, ನಿಶಿ=ರಾತ್ರಿಯಲ್ಲಿ, ಬಹುಕಾಲಂ=**ಬಹಳ** ಹೊತ್ತಿನವರೆಗೆ, ಭಾಗವತವ್ಯಾಖ್ಯಾತಾ=ಭಾಗವತ ಪ್ರವಚನವನ್ನು ಮಾಡುವವರು, ಇತ್ಯರ್ಥಃ=ಎಂದು ಅರ್ಥವು ನಃ=**ಅಸ್ಮಾನ್** ನಃ ಅಂದರೆ ನಮ್ಮನ್ನು, ಸಃ ಮಧ್ವಃ=ಆ ಮಧ್ವರು ವೈಷ್ಣವೀಂ ಅಂದರೆ ವಿಷ್ಣುಪ್ರತಿಪಾದಿಕಾಂ ವಿಷ್ಣುವನ್ನು ಪ್ರತಿಪಾದಿಸು**ವ,** ಕಥಾಂ=ಕಥೆಯನ್ನು, ವಾಚಯೇತ್=ಪ್ರವಚನ ಮಾಡಿಸಲಿ, ವಾಚಯೇತ್ ಎಂಬಲ್ಲಿ, ವಚ ಪರಿಭಾಷಣೇ='ವಚ' **ಎಂದರೆ** ಪರಿಭಾಷಣೇ=ಚೆನ್ನಾಗಿ ಮಾತನಾಡುವುದು ಎಂಬ ಅರ್ಥದಲ್ಲಿರುವ, ವಚಧಾತುವಿನ ಲಿಙ್=ವಿಧಿಲಿಙ್ ಲಕಾರದ ರೂಪವು ।।೨೭।।

**ಮಾನ್ಯೋಪನ್ಯಾಸಧನ್ಯೋ ಹರಿರಮಿತಗುಣೋ ಬ್ರಹ್ಮ ವೇದೈಕವೇದ್ಯಃ**
**ಕರ್ತಾ ವಿಶ್ವಸ್ಯ ಮೋಕ್ಷಂ ಶುಭಸುಖವಿಷಯಂ ರಾತಿ ಭಕ್ತೇಭ್ಯ ಇತ್ಥಮ್**
**ಸತ್ತರ್ಕೈಸ್ಸಾಧಯಿತ್ವಾ ಶ್ರುತಿಶತಸಹಿತೈಸ್ಸೂರಿಸೂನುಂ ವಿಜಿತ್ಯ**
**ವ್ಯಾಖ್ಯಾತಾ ತಸ್ಯ ಪೂರ್ಣಪ್ರಮತಿರನುದಿನಂ ವ್ಯಾಖ್ಯಯಾಪ್ಯಾಯಯೇನ್ಮಾಮ್ ।।೨೮।।**

## ಗೂಢಾಭಾವಪ್ರಕಾಶಿಕಾ ವ್ಯಾಖ್ಯಾನಂ ಮೂಲ

**ಮಾನ್ಯೇತಿ** - ಮಾನ್ಯೋಪನ್ಯಾಸಧನ್ಯಃ ಮಾನ್ಯಃ ಪೂಜ್ಯಃ ಸ ಚಾಸಾವುಪನ್ಯಾಸಃ ತೇನ ಧನ್ಯಃ ನಿರ**ಪೇಕ್ಷಗುಣಃ** ನಿರಪೇಕ್ಷಗುಣೋ ಯಸ್ತು ಧನ್ಯ ಇತ್ಯುಚ್ಯತೇ ಬುಧೈಃ ಇತಿ ವಚನಾತ್ ಸ್ವಸ್ಯ ಪ್ರತಿವಾದಿತಯಾ **ಅಗ್ರೇ ಸ್ಥಿತಂ** ತ್ರಿವಿಕ್ರಮಪಂಡಿತಾಚಾರ್ಯಂ ದೃಷ್ಟ್ವಾ ತದ್ವಿಜಯಾಯ ಉಪನ್ಯಾಸಮಕರೋದಿತಿ ಭಾವಃ । ಉಪನ್ಯಾಸಪ್ರ**ತಿಪಾದ್ಯಮಾಹ** ಹರಿರಿತ್ಯಾದಿನಾ ಇತ್ಥಮಿತ್ಯಂತೇನಹರಿಃ ಅಮಿತಗುಣಃ ಅಪರಿಮಿತಕಲ್ಯಾಣಧರ್ಮಃ ಅಪರಿತಮಿತ **(ಕಲ್ಯಾಣಧರ್ಮಾ)** ಬ್ರಹ್ಮ ಬಹ್ಮಶಬ್ದವಾಚ್ಯಃ, ವೇದೈಕವೇದ್ಯಃ (ಸದಾಗಮೈಕವಿಜ್ಞೇಯಃ) ವಿಶ್ವಸ್ಯ (ಪ್ರಪಂಚಸ್ಯ) ಕರ್ತಾ **(ಸ್ರಷ್ಟಾ) ಭಕ್ತೇಭ್ಯಃ** (ಸ್ವೋಪಾಸಕೇಭ್ಯಃ) ಸಂಪ್ರದಾನೇ ಚತುರ್ಥೀ ಶುಭಸುಖವಿಷಯಂ, ಶುಭಂ ಸುಖಂ ಶುಭಾಃ **(ಸುಖಾಃ) ವಿಷಯಾಃ** ಭೋಗ್ಯಾಃ ಯಸ್ಮಿನ್ ತಂ, ಮೋಕ್ಷಂ (ಅಪವರ್ಗಂ) ರಾತಿ ದದಾತಿ ರಾದಾನೇ ಇತ್ಥಂ ಏವಂ ಪ್ರ**ಕಾರೇಣ ಶ್ರುತಿಶತಸಹಿತೈಃ** (ಅಸಂಖ್ಯವೇದಪ್ರಮಾಣಕೈಃ) ಸತ್ತರ್ಕೈಃ ಸಮೀಚೀನಾನುಮಾನೈಃ ಸಾಧಯಿತ್ವಾ, ಸೂರಿಸೂನುಂ **ಸುಬ್ರಹ್ಮಣ್ಯಾಖ್ಯವಿದುಷಃ** ಪುತ್ರಂ ತ್ರಿವಿಕ್ರಮಪಂಡಿತಾಚಾರ್ಯಂ ವಿಜಿತ್ಯ, ಪಂಚದಶಸು ದಿವಸೇಷು ತೇನ ಸಹ **ಪ್ರಸಂಗಂ ಕೃತ್ವಾ ಸ್ವಶಿಷ್ಯತಾಂ** ಪ್ರಾಪಿತವಾನಿತಿ ಭಾವಃ ತಸ್ಯ (ತ್ರಿವಿಕ್ರಮಪಂಡಿತಾಚಾರ್ಯಸ್ಯ) ಅನುದಿನಂ ವ್ಯಾಖ್ಯಾತಾ **ಪ್ರವಚನಕರ್ತಾ ಪೂರ್ಣಪ್ರಮತಿಃ** ಶ್ರೀ ಮದಾನಂದತೀರ್ಥಭಗವತ್ ಪಾದಾಚಾರ್ಯಃ ವ್ಯಾಖ್ಯಯಾ ಪ್ರವಚನೇನ ಮಾಂ **ಆಪ್ಯಾಯಯೇತ್ ವರ್ಧಯೇತ್** ಆನಂದಯೇತ್ ಓಪ್ಯಾಯೀ ವೃದ್ಧೌಲಿಙ್ ।।೨೮।।

**ಪದಚ್ಛೇದ** - ಮಾನ್ಯೋಪನ್ಯಾಸಧನ್ಯಃ, ಹರಿಃ, ಅಮಿತಗುಣಃ, **ಬ್ರಹ್ಮ, ವೇದೈಕವೇದ್ಯಃ,** ಕರ್ತಾ,ವಿಶ್ವಸ್ಯ ಮೋಕ್ಷಂ, ಶುಭಸುಖವಿಷಯಂ, ರಾತಿ, ಭಕ್ತೇಭ್ಯಃ, ಇತ್ಥಂ, ಸತ್ತರ್ಕೈಃ, **ಸಾಧಯಿತ್ವಾ, ಶ್ರುತಿಶತಸಹಿತೈಃ,** ಸೂರಿಸೂನುಂ, ವಿಜಿತ್ಯ, ವ್ಯಾಖ್ಯಾತಾ, ತಸ್ಯ, ಪೂರ್ಣಪ್ರಮತಿಃ, ಅನುದಿನಂ, **ವ್ಯಾಖ್ಯಯಾ, ಆಪ್ಯಾಯಯೇತ್,** ಮಾಂ.

**ಅನ್ವಯ** - ಮಾನ್ಯೋಪನ್ಯಾಸಧನ್ಯಃ ಹರಿಃ ಅಮಿತಗುಣಃ, ಬ್ರಹ್ಮ ವೇದೈಕವೇದ್ಯಃ, ವಿಶ್ವಸ್ಯ, ಕರ್ತಾ, ಭಕ್ತೇಭ್ಯಃ ಶುಭಸುಖವಿಷಯಂ ಮೋಕ್ಷಂ ರಾತಿ ಇತ್ಥಂ ಶ್ರುತಿಶತಸಹಿತೈಃ ಸತ್ತರ್ಕೈಃ ಸಾಧಯಿತ್ವಾ ಸೂರಿಸೂನುಂ, ವಿಜಿತ್ಯ, ತಸ್ಯ ಅನುದಿನಂ ವ್ಯಾಖ್ಯಾತಾ, ಪೂರ್ಣಪ್ರಮತಿಃ, ಮಾಂ, ವ್ಯಾಖ್ಯಯಾ, ಆಪ್ಯಾಯಯೇತ್,

**ಅನ್ವಯಾರ್ಥ** - ಮಾನ್ಯೋಪನ್ಯಾಸಧನ್ಯಃ, ಮಾನ್ಯ=ಪೂಜ್ಯವಾದ, ಉಪನ್ಯಾಸ=ತತ್ತ್ವವಿಷಯಕವಾದ ಪ್ರವಚನದಿಂದ, ಧನ್ಯಃ=ನಿರಪೇಕ್ಷಗುಣಪೂರ್ಣರಾದ ಶ್ರೀ ಮಧ್ವಾಚಾರ್ಯರು, ಹರಿಃ= ಶ್ರೀಮನ್ನಾರಾಯಣನು, ಅಮಿತಗುಣಃ= ಅಸಂಖ್ಯಾತವಾದ ಮಂಗಳಕರವಾದ ಜ್ಞಾನಾನಂದಾದಿ ಧರ್ಮಗಳಿಂದ ಕೂಡಿದವನು, ಬ್ರಹ್ಮ=ಬ್ರಹ್ಮ ಎಂಬ ಶಬ್ದದಿಂದ ವಾಚ್ಯನಾದವನು, ವೇದೈಕವೇದ್ಯಃ=ವೇದಗಳಿಂದ ಸದಾಗಮಗಳಿಂದ ಮಾತ್ರವೇ ತಿಳಿಯಲ್ಪಡಬೇಕಾದವನು, ವಿಶ್ವಸ್ಯ=ಸಮಸ್ತಪ್ರಪಂಚಕ್ಕೂ, ಕರ್ತಾ=ಸೃಷ್ಟ್ಯಾದಿಗಳಿಗೆ ನಿಮಿತ್ತ ಕಾರಣನು, ಭಕ್ತೇಭ್ಯಃ= ವೈರಾಗ್ಯ ಭಕ್ತಿಗಳಿಂದ ಶ್ರವಣ ಮನನನಿದಿಧ್ಯಾಸನಗಳನ್ನು ಮಾಡಿ ಅಪರೋಕ್ಷಜ್ಞಾನಿಗಳಾಗಿ ಭಗವಂತನ ಪ್ರಸಾದವನ್ನು ಹೊಂದಿದ ಅಧಿಕಾರಿಗಳಿಗೆ, ಶುಭಸುಖವಿಷಯಂ=ಮಂಗಳಕರವಾದ ಮತ್ತು ಆನಂದಕರವಾದ ಅಪ್ರಾಕೃತದಿವ್ಯಭೋಗಗಳುಳ್ಳ, ಮೋಕ್ಷಂ= ಸ್ವಸ್ವರೂಪಾನಂದಾವಿರ್ಭಾವರೂಪವಾದ ಕೈವಲ್ಯವನ್ನು, ರಾತಿ=ಕೊಡುತ್ತಾನೆ, ಇತ್ಥಂ=ಈ ರೀತಿಯಾಗಿ, ಶ್ರುತಿಶತಸಹಿತೈಃ=ನೂರಾರು ವೇದವಾಕ್ಯಗಳ ಆಧಾರದಿಂದ ಕೂಡಿದ, ಸತ್ತರ್ಕೈಃ=ಸಮೀಚೀನವಾದ ಅನುಮಾನಗಳಿಂದ, ಸಾಧಯಿತ್ವಾ=ಸಾಧಿಸಿ, ಸೂರಿಸೂನುಂ=ಸುಬ್ರಹ್ಮಣ್ಯಪಂಡಿತರ ಮಕ್ಕಳಾದ ತ್ರಿವಿಕ್ರಮಪಂಡಿತಾಚಾರ್ಯರನ್ನು, ವಿಜಿತ್ಯ=ಜಯಿಸಿ, ತಸ್ಯ=ಆ ತ್ರಿವಿಕ್ರಮಪಂಡಿತಾಚಾರ್ಯರಿಗೆ, ಅನುದಿನಂ=ಪ್ರತಿದಿನವೂ, ವ್ಯಾಖ್ಯಾತಾ=ಪ್ರವಚನ ಮಾಡುತ್ತಿರುವ, ಪೂರ್ಣಪ್ರಮತಿಃ=ಶ್ರೀಪೂರ್ಣಪ್ರಜ್ಞಾಚಾರ್ಯರು, ವ್ಯಾಖ್ಯಯಾ=ಪ್ರವಚನದಿಂದ, ಮಾಂ=ನನ್ನನ್ನು, ಆಪ್ಯಾಯಯೇತ್=(ವೃದ್ಧಿಪಡಿಸಲಿ) ಸಂತೋಷಪಡಿಸಲಿ. ನನಗೆ ಆನಂದಾಭಿವೃದ್ಧಿಯನ್ನುಂಟು ಮಾಡಲಿ.॥೨೮॥

**ತಾತ್ಪರ್ಯ** – ಆಚಾರ್ಯರು ವಿಷ್ಣುಮಂಗಲದಲ್ಲಿ ಇರುವಾಗ ಅವರಿಗೆ ಪ್ರತಿವಾದಿಗಳಾಗಿ ತ್ರಿವಿಕ್ರಮ ಪಂಡಿತಾಚಾರ್ಯರು ಎದುರಿಗೆ ಬಂದು ಕುಳಿತರು. ಆಚಾರ್ಯರು ತ್ರಿವಿಕ್ರಮಪಂಡಿತಾಚಾರ್ಯರನ್ನು ಜಯಿಸಲು ಉಪನ್ಯಾಸವನ್ನು ಪ್ರಾರಂಭಿಸಿದರು.

~~ಶ್ರೀಮನ್ನಾರಾಯಣನು ಅನಂತಕಲ್ಯಾಣಗುಣಗಣಪರಿಪೂರ್ಣನಾಗಿದ್ದಾನೆ. ಅವನನ್ನೇ ಬ್ರಹ್ಮಶಬ್ದವು ಪರಮ~~ ಮುಖ್ಯ ವೃತ್ತಿಯಿಂದ ಹೇಳುತ್ತದೆ. ಅವನು ವೇದಗಳಿಂದಲೇ (ಮತ್ತು ವೇದಾನುಸಾರಿಯಾದ ಪೌರುಷೇಯ ಗ್ರಂಥಗಳಿಂದ ಮಾತ್ರವೇ) ವೇದ್ಯನು. ಪ್ರಪಂಚದ ಸೃಷ್ಟಿ ಮುಂತಾದವುಗಳಿಗೆ ಅವನೇ ಮುಖ್ಯಕಾರಣನು. ಅವನು ತನ್ನನ್ನು ಉಪಾಸನೆ ಮಾಡುವವರಿಗೆ ಮೋಕ್ಷವನ್ನು ಕೊಡುತ್ತಾನೆ. ಪರಮಮಂಗಳಕರವೂ ಶುದ್ಧಾನಂದಾತ್ಮಕವೂ ಆದ ಅಪ್ರಾಕೃತ ಭೋಗ್ಯವಿಷಯಗಳು ಮೋಕ್ಷದಲ್ಲಿ ಯಥೇಚ್ಛವಾಗಿವೆ!

ಈ ಸಾರಭಾಗವನ್ನು ಒಳಗೊಂಡ ಉಪನ್ಯಾಸವನ್ನು ಮಾಡುತ್ತಾ ಆಚಾರ್ಯರು ನೂರಾರು ಶ್ರುತಿಗಳಿಂದ ಸಹಿತವಾದ ನಿರ್ದೋಷವಾದ ಅನುಮಾನಗಳಿಂದ ತಾನು ಹೇಳಿರುವ ಪ್ರಮೇಯಗಳನ್ನು ದೃಢವಾಗಿ ಸಾಧಿಸಿದರು. ಆಗ ತ್ರಿವಿಕ್ರಮಪಂಡಿತಾಚಾರ್ಯರು ಪ್ರತಿಯುಕ್ತಿಗಳನ್ನು ಪ್ರಯೋಗಿಸುತ್ತಾ ಆಚಾರ್ಯರನ್ನು ಎದುರಿಸಿ ವಾದಮಾಡಲು ನಿಂತರು. ಆಚಾರ್ಯರು ಹದಿನೈದು ದಿನಗಳವರೆಗೆ ತ್ರಿವಿಕ್ರಮಪಂಡಿತರ ಜತೆಗೆ ವಾದಮಾಡಿ ಅವರನ್ನು ಜಯಿಸಿ ತನ್ನ ಶಿಷ್ಯನನ್ನಾಗಿ ಮಾಡಿಕೊಂಡರು.

ಅನಂತರ ತ್ರಿವಿಕ್ರಮಪಂಡಿತಾಚಾರ್ಯರಿಗೆ ಆಚಾರ್ಯರು ಪ್ರತಿನಿತ್ಯವೂ ಪ್ರವಚನ ಮಾಡಲಾರಂಭಿಸಿದರು. ಇಂತಹ ಆಚಾರ್ಯರು ತನ್ನ ಪ್ರವಚನದಿಂದ ನನ್ನನ್ನು ಆಪ್ಯಾಯನಗೊಳಿಸಲಿ ಎಂದು ಶ್ರೀಮನ್ನಾರಾಯಣಪಂಡಿತಾಚಾರ್ಯರು ಆಚಾರ್ಯರನ್ನು ಪ್ರಾರ್ಥಿಸಿದ್ದಾರೆ.

**ವಿಗ್ರಹ ವಿಶೇಷಾಂಶಾದಿಗಳು** - ಮಾನಯಿತುಂ ಯೋಗ್ಯಃ ಮಾನ್ಯಃ, ಮಾನ್ಯಶ್ಚಾಸೌ ಉಪನ್ಯಾಸಶ್ಚ ಮಾನ್ಯೋಪನ್ಯಾಸಃ, ಮಾನ್ಯೋಪನ್ಯಾಸೇನ ಧನ್ಯಃ ಮಾನ್ಯೋಪನ್ಯಾಸಧನ್ಯಃ, ಧನ್ಯಃ=ಕೃತಾರ್ಥನು ಎಂದು ಸಾಧಾರಣವಾದ ಅರ್ಥ. ನಿರಪೇಕ್ಷೋ

ಗುಣೈರ್ಯಸ್ತು ಧನ್ಯ ಇತ್ಯುಚ್ಯತೇ ಬುಧೈ' ಎಂಬ ಪ್ರಮಾಣಾನುಸಾರವಾಗಿ ತಾನು ಮಾಡಿದ ಕರ್ತವ್ಯಗಳಿಂದ ಉಂಟಾದ ಗುಣಗಳಲ್ಲಿಯೂ ಅಪೇಕ್ಷೆ ಇಲ್ಲದವನು, ಫಲಾಪೇಕ್ಷ ಇಲ್ಲದೆ ಕರ್ತವ್ಯವನ್ನು ಮಾಡುವವನು ಎಂದು ಅರ್ಥವಾಗುತ್ತದೆ. ನ ಮಿತಾಃ ಅಮಿತಾಃ ಅಮಿತಾಃ ಗುಣಾಃ ಯಸ್ಯಸಃ ಅಮಿತಗುಣಃ, ಏಕಶ್ಚಾಸೌ ವೇದ್ಯಶ್ಚ ಏಕವೇದ್ಯಃ (ವೇದ್ಯಶ್ಚಾಸೌ ಏಕಶ್ಚ ಏಕವೇದ್ಯಃ) ವೇದೈಃ ಏಕವೇದ್ಯಃ ವೇದೈಕವೇದ್ಯಃ, ಶುಭಾಃ ಸುಖಾಃ ವಿಷಯಾಃ ಯಸ್ಮಿನ್ ಸಃ ಶುಭಸುಖವಿಷಯಃ ತಂ, ಸಂತಶ್ಚತೇ ತರ್ಕಾಶ್ಚ ಸತ್ತರ್ಕಾಃ, ತೈಃ ಶ್ರುತೀನಾಂ ಶತಂ ಶ್ರುತಿಶತಂ, ಶ್ರುತಿಶತೇನ ಸಹಿತಾಃ ಶ್ರುತಿಶತಸಹಿತಾಃ ತೈಃ, ಸೂರೇಃ ಸೂನುಃ ಸೂರಿಸೂನುಃ ತಂ, ಪ್ರಕೃಷ್ಟಾ ಮತಿಃ ಯಸ್ಯಸಃ ಪ್ರಮತಿಃ, ಪೂರ್ಣಶ್ಚಾಸೌ ಪ್ರಮತಿಶ್ಚ ಪೂರ್ಣಪ್ರಮತಿಃ ( ಪ್ರಕೃಷ್ಟಾ ಚ ಸಾಮತಿಶ್ಚ ಪ್ರಮತಿಃ, ಪೂರ್ಣಾ ಪ್ರಮತಿಃಯಸ್ಯಸಃ ಪೂರ್ಣಪ್ರಮತಿಃ)

**ಧಾತುರೂಪ** – ರಾತಿ ರಾತಃ ರಾಂತಿ, ರಾಸಿ ರಾಥಃ ರಾಥ ಇತ್ಯಾದಿ ರಾದಾನೇ, ಸಕ ಅನಿಟ್, ಪರ to give ಯಾ ಧಾತುವಿನಂತೆ, ಆಪ್ಯಾಯಯೇತ್, ಪ್ಯಾಯಯೇತಾಂ ಪ್ಯಾಯಯೇಯುಃ, ಪ್ಯಾಯಯೇಃ ಪ್ಯಾಯಯೇತಂ ಪ್ಯಾಯಯೇತ, ಪ್ಯಾಯಯೇಯಂ ಪ್ಯಾಯಯೇವ ಪ್ಯಾಯಯೇಮ. ಓಪ್ಯಾಯೀ ವೃದ್ಧೌ. ಅಕರ್ಮಕಃ ಸೇಟ್ ಆತ್ಮನೇಪದಿ, (ಇಲ್ಲಿ) ಣಿಜಂತ ಪರಸ್ಮೈಪದಿ ವಿಧಿಲಿಙ್ ಪ್ರಥಮ ಪುರುಷ ಏಕವಚನಂ.

**ಪ್ರಯೋಗ** - ಹರಿಣಾ ಅಮಿತಗುಣೇನ ಬ್ರಹ್ಮಣಾ ವೇದೈಕವೇದ್ಯೇನ ವಿಶ್ವಸ್ಯ ಕರ್ತ್ರಾ ಭಕ್ತೇಭ್ಯಃ ಶುಭಸುಖವಿಷಯಃ ಮೋಕ್ಷಃ ರಾಯತೇ ಇತ್ಥಂ ಶ್ರುತಿಶತಸಹಿತೈಃ, ಸತ್ತರ್ಕೈಃ ಸಾಧಯಿತ್ವಾ ಸೂರಿಸೂನುಂ ವಿಜಿತ್ಯ ತಸ್ಯ ಅನುದಿನಂ ವ್ಯಾಖ್ಯಾತ್ರಾ ಮಾನ್ಯೋಪನ್ಯಾಸಧನ್ಯೇನ ಪೂರ್ಣಪ್ರಮತಿನಾ ಅಹಂ ವ್ಯಾಖ್ಯಯಾ ಆಪ್ಯಾಯೇಯ (ಕರ್ಮಣಿ ವಿಧಿಲಿಙ್)

## ಗೂಢಾಭಾವ ಪ್ರಕಾಶಿಕಾ ಪದಪದಾರ್ಥವಿವರಣ

ಮಾನ್ಯೋಪನ್ಯಾಸಧನ್ಯಃ, ಮಾನ್ಯಃ ಪೂಜ್ಯಃ=ಮಾನ್ಯ ಅಂದರೆ, ಪೂಜ್ಯವಾದ, ಸಚಸೌ ಉಪನ್ಯಾಸಃ = ಅಂತಹ ಉಪನ್ಯಾಸವು, ತೇನ=ಆದುದರಿಂದ, ಧನ್ಯಃ=ನಿರಪೇಕ್ಷಗುಣಃ=ನಿರಪೇಕ್ಷವಾದ ಗುಣವುಳ್ಳ, 'ನಿರಪೇಕ್ಷೋ ಗುಣೈರ್ಯಸ್ತು ಧನ್ಯ ಇತ್ಯುಚ್ಯತೇ ಬುಧೈ' ಇತಿ ವಚನಾತ್, ಯಸ್ತು=ಯಾವನಾದರೋ, ಗುಣೈಃ=ಗುಣಗಳಿಂದ, ನಿರಪೇಕ್ಷಃ= ಅಪೇಕ್ಷಾರಹಿತನಾದವನೋ, (ಸಃ=ಅವನು) ಬುಧೈಃ=ಜ್ಞಾನಿಗಳಿಂದ, ಧನ್ಯಃ ಇತಿ=ಧನ್ಯನೆಂದು, ಉಚ್ಯತೇ=ಹೇಳಲ್ಪಡುತ್ತಾನೆ ಸ್ವಸ್ಯ=ತನಗೆ, ಪ್ರತಿವಾದಿತಯಾ=ಪ್ರತಿವಾದಿ ರೂಪದಿಂದ, ಅಗ್ರೇ=ಮುಂಭಾಗದಲ್ಲಿ, ಸ್ಥಿತಂ=ಇದ್ದ, ತ್ರಿವಿಕ್ರಪಂಡಿತಾಚಾರ್ಯಂ= ತ್ರಿವಿಕ್ರಮಪಂಡಿತಾಚಾರ್ಯರನ್ನು, ದೃಷ್ಟ್ವಾ=ನೋಡಿ, ತದ್ವಿಜಯಾಯ=ಆ ತ್ರಿವಿಕ್ರಮಪಂಡಿತಾಚಾರ್ಯರ ವಿಜಯಕ್ಕೋಸ್ಕರ, ಉಪನ್ಯಾಸಂ ಅಕರೋತ್ ಇತಿಭಾವಃ=ಉಪನ್ಯಾಸವನ್ನು ಮಾಡಿದರು ಎಂದು ಅಭಿಪ್ರಾಯ, ಉಪನ್ಯಾಸಪ್ರತಿಪಾದ್ಯಂ= ಉಪನ್ಯಾಸದಲ್ಲಿ ಪ್ರತಿಪಾದಿಸಲ್ಪಡುವ ವಿಷಯವನ್ನು, ಆಹ=ಹೇಳುತ್ತಾರೆ, ಹರಿಃ ಇತ್ಯಾದಿನಾ=ಹರಿಃ ಅಮಿತಗುಣಃ ಇತ್ಯಾದಿಯಾದ ವಾಕ್ಯದಿಂದ, ಇತ್ಥಂ ಇತ್ಯಂತೇನ=ಇತ್ಥಂ ಎಂಬ ಪದವೇ ಕೊನೆಯಾಗಿವುಳ್ಳ ವಾಕ್ಯದಿಂದ, 'ಅಮಿತಗುಣಃ ಅಪರಿಮಿತಕಲ್ಯಾಣಧರ್ಮಃ=ಅಮಿತಗುಣಃ ಅಂದರೆ ಅಸಂಖ್ಯಾತವಾದ ಮಂಗಳಕರವಾದ ಧರ್ಮಗಳುಳ್ಳವನು, ಬ್ರಹ್ಮ =ಎಂದರೆ ಬ್ರಹ್ಮಶಬ್ದವಾಚ್ಯನು, ವೈದೈಕವೇದ್ಯಃ=ವೇದಗಳಿಂದ ಮಾತ್ರವೇ ತಿಳಿಯಲ್ಪಡುವವನು, ವಿಶ್ವಸ್ಯ=ಪ್ರಪಂಚಕ್ಕೆ, ಕರ್ತಾ=ಸೃಷ್ಟ್ಯಾದಿ ಅಷ್ಟಕರ್ತನು, ಭಕ್ತೇಭ್ಯಃ=ತನ್ನ ಉಪಾಸಕರಾದವರಿಗೆ, ಭಕ್ತೇಭ್ಯಃ ಎಂಬಲ್ಲಿ ಸಂಪ್ರದಾನೇ=ಸಂಪ್ರದಾನ ಸಂಜ್ಞೆ ಬಂದು, ಚತುರ್ಥೀ=ನಾಲ್ಕನೆಯ ವಿಭಕ್ತಿ ಬಂದಿದೆ. ಶುಭಸುಖವಿಷಯಂ ಎಂದರೆ, ಶುಭಂ=ಮಂಗಳಕರವು, ಸುಖಂ=ಆನಂದಕರವೂ, ಶುಭಾಃ=ಮಂಗಳಕರವಾದ, ಸುಖಾಃ=ಆನಂದಕರವಾದ, ವಿಷಯಾಃ ಅಂದರೆ ಭೋಗ್ಯಾಃ ಅನುಭವಿಸಲು ಯೋಗ್ಯವಾದ ಅಪ್ರಾಕೃತ ಪದಾರ್ಥಗಳು,ಯಸ್ಮಿನ್ ತಂ=ಯಾವ ಮೋಕ್ಷದಲ್ಲಿವೆಯೋ ಅಂತಹ ಮೋಕ್ಷವನ್ನು, ರಾತಿ ದದಾತಿ=ರಾತಿ ಎಂದರೆ ಕೊಡುತ್ತಾನೆ, ರಾತಿ ಎಂಬಲ್ಲಿ ರಾದಾನೇ ದಾನಾರ್ಥಕವಾದ ರಾಧಾತುವು. ಇತ್ಥಂ ಏವಂಪ್ರಕಾರೇಣ, ಇತ್ಥಂ ಎಂದರೆ ಈ ಪ್ರಕಾರದಿಂದ, ಶ್ರುತಿಶತಸಹಿತೈಃ=ನೂರಾರು ಶ್ರುತಿಗಳಿಂದ ಸಹಿತವಾದ, ಸತ್ತರ್ಕೈ=ಸಮೀಚೀನಾ ನುಮಾನೈಃ=ಸರಿಯಾದ ಅನುಮಾನಗಳಿಂದ, ಸಾಧಯಿತ್ವಾ=ಸಾಧಿಸಿ, ಸೂರಿಸೂನುಂ=ಸುಬ್ರಹ್ಮಣ್ಯಾಖ್ಯ ವಿದುಷಃ ಪುತ್ರಂ=

ಸೂರಿಸೂನು ಎಂದರೆ ಸುಬ್ರಹ್ಮಣ್ಯ ಪಂಡಿತರೆಂಬ ವಿದ್ವಾಂಸರ ಮಕ್ಕಳಾದ, ತ್ರಿವಿಕ್ರಮಪಂಡಿತಾಚಾರ್ಯಂ= ತ್ರಿವಿಕ್ರಮಪಂಡಿತಾಚಾರ್ಯರನ್ನು, ವಿಜಿತ್ಯ=ಜಯಿಸಿ, ಪಂಚದಶಸು ದಿವಸೇಷು=ಹದಿನೈದು ದಿನಗಳಲ್ಲಿ, ತೇನ ಸಹ=ತ್ರಿವಿಕ್ರಮ ಪಂಡಿತರೊಡನೆ, ಪ್ರಸಂಗಂ=ವಾದವನ್ನು, ಕೃತ್ವಾ=ಮಾಡಿ, (ತಂ ವಿಜಿತ್ಯ=ಅವರನ್ನು ಜಯಿಸಿ) ಸ್ವಶಿಷ್ಯತಾಂ=ತನ್ನ ಶಿಷ್ಯತ್ವವನ್ನು, ಪ್ರಾಪಿತವಾನ್=ಹೊಂದಿಸಿದರು, ಇತಿಭಾವಃ=ಎಂದು ಅಭಿಪ್ರಾಯವು). ತಸ್ಯ=ಆ ತ್ರಿವಿಕ್ರಮಪಂಡಿತಾಚಾರ್ಯರಿಗೆ, ಅನುದಿನಂ=ಪ್ರತಿದಿನವೂ, ವ್ಯಖ್ಯಾತಾ=ಪ್ರವಚನ ಮಾಡುವ, ಪೂರ್ಣಪ್ರಮತಿಃ=ಶ್ರೀಮದಾನಂದತೀರ್ಥಭಗವತ್ ಪಾದಾಚಾರ್ಯರು, ವ್ಯಾಖ್ಯಯಾ=ಪ್ರವಚನದಿಂದ, ಮಾಂ=ನನ್ನನ್ನು, ಅಪ್ಯಾಯಯೇತ್=ಅಭಿವೃದ್ಧಿಗೊಳಿಸಲಿ. ಆಪ್ಯಾಯಯೇತ್ ಎಂಬಲ್ಲಿ ಓಪ್ಯಾಯೀವೃದ್ಧೌ ಲಿಙ್ ಓಪ್ಯಾಯೀ ವೃದ್ಧೌ ಎಂಬ ಧಾತುವಿನ ವಿಧಿಲಿಙ್ ॥೨೮॥

ಅವತಾರಿಕಾ=ಆಚಾರ್ಯರು ಅನೇಕ ಗ್ರಂಥಗಳನ್ನು ರಚಿಸಿದರೆಂದೂ, ತನ್ನ ತಮ್ಮನಿಗೆ ಸನ್ಯಾಸವನ್ನು ಕೊಟ್ಟು ವಿಷ್ಣುತೀರ್ಥರೆಂದು ಹೆಸರಿಟ್ಟರೆಂದೂ, ಪದ್ಮನಾಭತೀರ್ಥರೇ ಮೊದಲಾದವರನ್ನೂ, ಇನ್ನೂ ಅನೇಕ ಗೃಹಸ್ಥರನ್ನೂ ತನ್ನ ಶಿಷ್ಯರನ್ನಾಗಿ ಮಾಡಿಕೊಂಡು ಕಣ್ವತೀರ್ಥದ ಹತ್ತಿರ ಚಾತುರ್ಮಾಸ್ಯ ಕಾಲದಲ್ಲಿ ವಾಸಮಾಡುತ್ತಿದ್ದರೆಂದೂ ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

**ಸಾಮ್ನಸ್ತ್ರೈವಿಕ್ರಮಾರ್ಯಾದ್ ವ್ಯರಚಯದನುಭಾಷ್ಯಂ ಶತಗ್ರಂಥಕರ್ತಾ**
**ಸೋದರ್ಯಂ ಸ್ವಂ ವಿರಕ್ತಂ ಯತಿಮಕೃತ ಮಹಾಸದ್ಗುಣಂ ವಿಷ್ಣುತೀರ್ಥಂ**
**ವಾದೀಂದ್ರಂ ಪದ್ಮನಾಭಂ ಪ್ರಿಯಮಥ ಚ ಪರಾನ್ ಸದ್ಗುಣಾನ್ ಶ್ಲಾಘ್ಯಶಿಷ್ಯಾನ್**
**ಯೋನೇಕಾನ್ ಸದ್ಗೃಹಸ್ಥಾನಪಿ ಸ ವಿಜಯತೇ ಕಣ್ವತೀರ್ಥಾಂತಿಕಸ್ಥಃ ॥೨೯॥**

**ಗೂಢಾಭಾವಪ್ರಕಾಶಿಕಾ** - ಯೋ ಮಧ್ವಃ ತ್ರೈವಿಕ್ರಮಾರ್ಯಾತ್ ತ್ರಿವಿಕ್ರಮಾರ್ಯಸಂಬಂಧಿನಃ ಸಾಮ್ನಃ ಚತುರುಪಾಯೇಷ್ವಾದ್ಯೋಪಾಯತ್ (ಸಾಂತ್ವಾತ್) ಭವತ್ಕೃತಗ್ರಂಥಾನಾಮಗಾಧತ್ವಾತ್ ಮಂದಮತಿಭಿರ್ನ್ಯಾಯಾನಾಂ ದುರ್ಧಾರ್ಯತ್ವಾತ್ (ದುರುದ್ಧಾರ್ಯತಾತ್) ದುರುದ್ಧರತ್ವಾತ್) ವ್ಯಕ್ತಯುಕ್ತ್ಯುಪೇತಂ ಗ್ರಂಥಾಂತರಂ ಕುರ್ವಿತಿ ಪ್ರಾರ್ಥನಾರೂಪಾತ್ ಸಾಮ್ನಃ ಇತ್ಯರ್ಥಃ, ಅನುಭಾಷ್ಯಂ ಅನುವ್ಯಾಖ್ಯಾನಂ ವ್ಯರಚಯತ್. ವಿರಚಿತವಾನ್ ರಚ (ವಿಸ್ತಾರೇ) ಪ್ರತಿಯತ್ನೇ) ಲಙ್ ಶತಗ್ರಂಥಕರ್ತಾ=ಶತಶಬ್ದಃ ಬಹುತ್ವಮಾಹ ತಥಾಚ ಅನೇಕ ಪ್ರಕರಣ ದಶೋಪನಿಷದ್ಭಾಷ್ಯಸೂತ್ರಭಾಷ್ಯ ಅಣುಭಾಷ್ಯ ನ್ಯಾಯವಿವರಣ ಗೀತಾಭಾಷ್ಯ ಭಾರತತಾತ್ಪರ್ಯನಿರ್ಣಯ ತಂತ್ರಸಾರ ದ್ವಾದಶಸ್ತೋತ್ರ ಯಮಕಭಾರತಾದಿಬಹುಗ್ರಂಥ ನಿರ್ಮಾತೇತ್ಯರ್ಥಃ ಉಕ್ತಾನೇಕಗ್ರಂಥಕರ್ತೃತ್ವಪ್ರಶಂಸಾಪೂರ್ವಕಂ ಗ್ರಂಥಾಂತರರಚನಾಯ ಪ್ರಾರ್ಥಿತಃ ಮಧ್ವಃ ಅನುವ್ಯಾಖ್ಯಾನಮಕರೋದಿತಿ ಭಾವಃ ಸ್ವಂ ಸ್ವಕೀಯಂ ಸೋದರ್ಯಂ ಸಮಾನೇ ಉದರೇ ಶೇತೇ ಇತಿ ಸೋದರ್ಯಃ, ತಂ, ಸ್ವಾನುಜಮಿತ್ಯರ್ಥಃ, ಸಮಾನೋದರೇ ಶಯಿತ ಓಚೋದಾತ್ತಃ (4-4-108) ಇತ್ಯಸ್ಯ ಅನಂತರೇಣ ಸೋದರಾದ್ಯಃ (4-4-109) ಇತಿ ಸೂತ್ರೇಣ ಪ್ರತ್ಯಯಃ ಸಮಾನಸ್ಯ (ವಿಭಾಷೋದರೇ 6-3-88) ಇತಿ ಸೂತ್ರೇಣ) ಸಃ, ವಿರಕ್ತಂ ವೈರಾಗ್ಯ ಸಂಪನ್ನಂ ಮಹಾಸದ್ಗುಣಂ ಮಹಾಂತಃ ಸಂತಃ ನಿರ್ದುಷ್ಟಾಃ ಗುಣಾಃ ಜ್ಞಾನಭಕ್ತ್ಯಾದಯಃ ಯಸ್ಯ ತಂ, ವಿಷ್ಣು ತೀರ್ಥಂ ವಿಷ್ಣುತೀರ್ಥನಾಮಕಂ ಯತಿಂ ಯತ್ಯಾಶ್ರಮೋಪೇತಂ ಅಕೃತ ಅಕರೋತ್ ತಥಾ ವಾದೀಂದ್ರಂವಾದಿಶ್ರೇಷ್ಠಂ ಪ್ರಿಯಂ ಅತ್ಯಂತಪ್ರೀತಿವಿಷಯಂ ಪದ್ಮನಾಭಂ ಪದ್ಮನಾಭತೀರ್ಥಾಖ್ಯಂ (ಯತಿಂ ಯತ್ಯಾಶ್ರಮೋಪೇತಂ ಅಕೃತ ಅಕರೋತ್) ಅಥ ಸಮನಂತರಂ ಸದ್ಗುಣಾನ್ ಜ್ಞಾನಭಕ್ತ್ಯಾದಿಸಾಧುಗುಣಾನ್ ಪರಾನ್ ಚರಮಾನ್.

ಪದ್ಮನಾಭತೀರ್ಥಾಪೇಕ್ಷಯಾ ಪಶ್ಚಾತ್ತನಾನ್ (ಇತಿಯಾವತ್) ಶ್ಲಾಘ್ಯಶಿಷ್ಯಾನ್ ಚ ಪ್ರಶಂಸನೀಯಾನ್ ಅಂತೇವಾಸಿನಃ ಅಪಿ (ಯತೀನ್ ಅಕೃತ) ಅನೇಕಾನ್ ಬಹೂನ್ ಸದ್ಗೃಹಸ್ಥಾನ್ ಅಪಿ ಗೃಹಾಸ್ಥಾಶ್ರಮೋಪೇತಾನಪಿ ಶಿಷ್ಯಾನ್ ಅಕೃತ ಇತ್ಯನ್ವಯಃ ಡುಕೃಞ್ ಕರಣೇ ಲುಙ್ ಆತ್ಮನೇಪದಂ. ಸಃ ಮಧ್ವಃ ಕಣ್ವತೀರ್ಥಾಂ ತಿಕಸ್ಥಃ ಸನ್ ಕಣ್ವತೀರ್ಥಸಮೀಪೇ ಸ್ಥಿತಃ ಸನ್ ವಿಜಯತೇ ಉತ್ಕೃಷ್ಟೋವರ್ತತೇ ಜಿ ಜಯೇ ಜಯಃ ಉತ್ಕರ್ಷಃ, ಲಟ್ ಆತ್ಮನೇ ಪದಂ ॥೨೯॥

**ಪದಚ್ಛೇದ** - ಸಾಮ್ನಃ ತ್ರೈವಿಕ್ರಮಾರ್ಯಾತ್, ವ್ಯರಚಯತ್, ಅನುಭಾಷ್ಯಂ, ಶತಗ್ರಂಥಕರ್ತಾ, **ಸೋದರ್ಯಂ,** ಸ್ವಂ, ವಿರಕ್ತಂ, ಯತಿಂ, ಅಕೃತ, ಮಹಾಸದ್ಗುಣಂ, ವಿಷ್ಣುತೀರ್ಥಂ, ವಾದೀಂದ್ರ, ಪದ್ಮನಾಭಂ, ಪ್ರಿಯಂ, **ಅಥ, ಚ** ಪರಾನ್, ಸದ್ಗುಣಾನ್, ಶ್ಲಾಘ್ಯಶಿಷ್ಯಾನ್, ಯಃ, ಅನೇಕಾನ್, ಸದ್ಗೃಹಸ್ಥಾನ್, ಅಪಿ, ಸಃ, ವಿಜಯತೇ, **ಕಣ್ವತೀರ್ಥಾಂತಿಕಸ್ಥಃ**

**ಅನ್ವಯ** – ಶತಗ್ರಂಥಕರ್ತಾ ಯಃ ತ್ರೈವಿಕ್ರಮಾರ್ಯಾತ್ ಸಾಮ್ನಃ ಅನುಭಾಷ್ಯಂ, ವ್ಯರಚಯತ್, **ವಿರಕ್ತಂ,** ಮಹಾಸದ್ಗುಣಂ, ಶತಗ್ರಂಥಕರ್ತಾ, ಸ್ವಂ ಸೋದರ್ಯಂ, ಸ್ವಂ, ವಿಷ್ಣುತೀರ್ಥಂ, ಯತಿಂ, ಅಕೃತ, ವಾದೀಂದ್ರಂ, **ಪ್ರಿಯಂ,** ಪದ್ಮನಾಭಂ, ಯತಿಂಅಕೃತ ಅಥ, ಪರಾನ್, ಸದ್ಗುಣಾನ್, ಶ್ಲಾಘ್ಯಶಿಷ್ಯಾನ್, ಚ (ಯತೀನ್ ಅಕೃತ) **ಅನೇಕಾನ್,** ಸದ್ಗೃಹಸ್ಥಾನಪಿ (ಶಿಷ್ಯಾನ್ ಅಕೃತ) ಸಃ (ಮಧ್ವಃ) ಕಣ್ವಾತೀರ್ಥಾಂತಿಕಸ್ಥಃ (ಸನ್) ವಿಜಯತೇ.

**ಅನ್ವಯಾರ್ಥ** - ಶತಗ್ರಂಥಕರ್ತಾ=ಅನೇಕ ಗ್ರಂಥಗಳ ನಿರ್ಮಾತೃಗಳಾದ, ಯಃ=ಯಾವ ಶ್ರೀ ಮಧ್ವಾಚಾರ್ಯ**ರು,** ತ್ರೈವಿಕ್ರಮಾರ್ಯಾತ್=ತ್ರಿವಿಕ್ರಮಪಂಡಿತಾಚಾರ್ಯರಿಗೆ ಸಂಬಂಧಿಸಿದ, (ತ್ರಿವಿಕ್ರಮಪಂಡಿತರು ಮಾಡಿದ) ಸಾಮ್ನಃ= ಪ್ರಾರ್ಥನಾವಾಕ್ಯರೂಪವಾದ ಸಾಂತ್ವವಚನ ಪ್ರಯೋಗದಿಂದ, ಅನುಭಾಷ್ಯಂ=ಅನುವ್ಯಾಖ್ಯಾನ ಎಂಬ ಗ್ರಂಥವನ್ನು, ವ್ಯರಚಯತ್= ನಿರ್ಮಿಸಿದರು. ವಿರಕ್ತಂ= ವೈರಾಗ್ಯಶಾಲಿಯಾದ, ಮಹಾಸದ್ಗುಣಂ ಮಹಾ=ಉತ್ಕೃಷ್ಟವಾದ, ಸತ್=ನಿರ್ದೋಷವಾದ ಗುಣಂ=ಜ್ಞಾನಭಕ್ತ್ಯಾದಿ ಸಾಧುಗುಣಗಳುಳ್ಳ, ಸ್ವಂ=ತನ್ನವನಾದ, ಸೋದರ್ಯಂ=ಸಹೋದರನನ್ನು, ವಿಷ್ಣುತೀರ್ಥಂ=ವಿಷ್ಣುತೀರ್ಥ**ನೆಂಬ** ಹೆಸರುಳ್ಳ, ಯತಿಂ=ಸನ್ಯಾಸಿಯನ್ನಾಗಿ, ಅಕೃತ=ಮಾಡಿದರು ವಾದೀಂದ್ರಂ=ವಾದಿಶ್ರೇಷ್ಠರಾದ, ಪ್ರಿಯಂ=(ತನಗೆ) **ಅತ್ಯಂತ** ಪ್ರೀತಿವಿಷಯರಾದ, ಶೋಭನಭಟ್ಟರನ್ನು, ಪದ್ಮನಾಭಂ ಪದ್ಮನಾಭತೀರ್ಥರೆಂಬ ಹೆಸರುಳ್ಳ, ಯತಿಂ ಅಕೃತ=ಸನ್ಯಾಸಿಯ**ನ್ನಾಗಿ** ಮಾಡಿದರು. ಅಥ=ಇದರ ಅನಂತರದಲ್ಲಿಯೇ, ಪರಾನ್=ಪದ್ಮನಾಭತೀರ್ಥರ ಅನಂತರದ ಶ್ಲಾಘ್ಯಶಿಷ್ಯಾನ್ ಚ=ಪ್ರಸಂಶನೀಯರಾದ ಶಿಷ್ಯರನ್ನು, ಯತೀನ್ ಅಕೃತ=ಸನ್ಯಾಸಿಗಳನ್ನಾಗಿ ಮಾಡಿದರು. ಅನೇಕಾನ್=ಬಹುಸಂಖ್ಯೆಯ, ಸದ್ಗೃಹಸ್ಥಾನ್ ಅಪಿ=ಯೋಗ್ಯರಾದ ಗೃಹಸ್ಥಾಶ್ರಮಿಗಳನ್ನು, ಶಿಷ್ಯಾನ್ ಅಕೃತ=ಶಿಷ್ಯರನ್ನಾಗಿ ಮಾಡಿಕೊಂಡರು. ಸಃ=ಅಂತಹ ಮಧ್ವಾಚಾರ್ಯರು, ಕಣ್ವತೀರ್ಥಾಂ**ತಿಕಸ್ಥಃ** (ಸನ್) ಕಣ್ವತೀರ್ಥಸಮೀಪದಲ್ಲಿದ್ದವರಾಗಿ, ವಿಜಯತೇ=ಉತ್ಕರ್ಷಶಾಲಿಗಳಾಗಿದ್ದಾರೆ.

**ತಾತ್ಪರ್ಯ** - ಶ್ರೀ ಮಧ್ವಾಚಾರ್ಯರು ಅನೇಕ ಗ್ರಂಥಗಳನ್ನು ರಿಚಿಸಿದ್ದಾರೆ. ಅವರು ಬಹುಸಂಖ್ಯೆಯ ಗ್ರಂಥಗಳನ್ನು ರಿಚಿಸಿದ್ದರಿಂದ ಅವರನ್ನು ಶತಗ್ರಂಥಕರ್ತರೆಂದೇ ಎಲ್ಲರೂ ಪ್ರಶಂಸೆ ಮಾಡುತ್ತಾರೆ. ಅವರು **ಮೊದಲು** 1. ಗೀತಾಭಾಷ್ಯವನ್ನು ಬರೆದರು. 2. ಅನಂತರ ಬ್ರಹ್ಮಸೂತ್ರಭಾಷ್ಯ 3. ಅಣುಭಾಷ್ಯ ಇವುಗಳನ್ನು ಬರೆದರು. **ಅನಂತರ** ದಶಪ್ರಕರಣಗಳನ್ನು ಬರೆದಿರುತ್ತಾರೆ. 4. ಪ್ರಮಾಣ ಲಕ್ಷಣ 5. ಕಥಾಲಕ್ಷಣ 6. ಉಪಾಧಿಖಂಡನ 7. **ಮಾಯಾವಾದ** ಖಂಡನ 8. ಪ್ರಪಂಚ ಮಿಥ್ಯಾತ್ವಾನುಮಾನಖಂಡನ 9. ತತ್ತ್ವಸಂಖ್ಯಾನ 10 ತತ್ತ್ವವಿವೇಕ 11. **ತತ್ತ್ವೋದ್ಯೋತ** 12. ಕರ್ಮನಿರ್ಣಯ 13. ವಿಷ್ಣುತತ್ತ್ವವಿನಿರ್ಣಯ ಎಂದು ಪ್ರಮಾಣಲಕ್ಷಣದಿಂದ ಆರಂಭಿಸಿ ವಿಷ್ಣುತತ್ತ್ವ**ವಿನಿರ್ಣಯದವರೆಗೆ** ಇರುವ ಹತ್ತುಗ್ರಂಥಗಳೇ ದಶಪ್ರಕರಣಗಳು, ಇವುಗಳನ್ನು ಬರೆದಿರುತ್ತಾರೆ. 10 ಉಪನಿಷತ್ತು**ಗಳಿಗೆ ಭಾಷ್ಯಗಳನ್ನು** ಬರೆದಿರುತ್ತಾರೆ. 14. ಈಶಾವಾಸ್ಯಭಾಷ್ಯ 15. ತಲವಕಾರ ಭಾಷ್ಯ 16. ಕಾಠಕೋಪನಿಷದ್ ಭಾಷ್ಯ 17. **ಷಟ್ಪ್ರಶ್ನೋಪನಿಷದ್** ಭಾಷ್ಯ 18. ಅಥರ್ವಣಭಾಷ್ಯ 19. ಮಾಂಡೂಕ್ಯಭಾಷ್ಯ 20. ತೈತ್ತಿರೀಯಭಾಷ್ಯ 21. **ಐತರೇಯ ಭಾಷ್ಯ** 22. ಛಾಂದೋಗ್ಯಭಾಷ್ಯ 23. ಬೃಹದಾರಣ್ಯಕಭಾಷ್ಯ ಇವೇ ದಶೋಪನಿಷದ್ ಭಾಷ್ಯಗಳು 24. **ಗೀತಾ ತಾತ್ಪರ್ಯ** 25. ನ್ಯಾಯವಿವರಣ 26. ತಂತ್ರಸಾರ 27. ದ್ವಾದಶಸ್ತೋತ್ರ 28. ಯತಿಪ್ರಣವಕಲ್ಪ 29. **ಜಯಂತೀ ನಿರ್ಣಯ** 30. ನಖಸ್ತುತಿ 31. ಯಮಕಭಾರತ 32. ಕೃಷ್ಣಾಮೃತಮಹಾರ್ಣವ 33. ಸದಾಚಾರಸ್ಮೃತಿ, 34. **ಭಾಗವತತಾತ್ಪರ್ಯ** 35. ಮಹಾಭಾರತತಾತ್ಪರ್ಯ ನಿರ್ಣಯ 36. ಋಗ್ ಭಾಷ್ಯ 37. ಅನುವ್ಯಾಖ್ಯಾನ, **ಹೀಗೆ ಆಚಾರ್ಯರು ಮೂವತ್ತ ಏಳು** ಗ್ರಂಥಗಳನ್ನು ಬರೆದಿರುತ್ತಾರೆ. ಇವುಗಳಲ್ಲದೆ ನ್ಯಾಸಪದ್ಧತಿ ತಿಥಿನಿರ್ಣಯ **ಎಂಬ ಎರಡು** ಗ್ರಂಥಗಳೂ, ಅವರು ಬಾಲ್ಯದಲ್ಲಿಯೇ ರಚಿಸಿದ ಕಂದುಕಸ್ತುತಿಯೂ ಅನೇಕ **ಸುಭಾಷಿತ, ಗಾಥಾ, ಸ್ತೋತ್ರ** ಮುಂತಾದುವುಗಳೂ ಇವೆ. ಇವುಗಳಲ್ಲಿ ತಾನು ಆಚಾರ್ಯರ ಶಿಷ್ಯರಾದಾಗ ಯಾವ **ಗ್ರಂಥಗಳನ್ನು ಆಚಾರ್ಯರು** ರಚಿಸಿದರೋ ಅವುಗಳನ್ನು

ತ್ರಿವಿಕ್ರಮ ಪಂಡಿತರು ಪ್ರಶಂಸಿಸಿದರು. ಅನಂತರ ಆಚಾರ್ಯರನ್ನು ಈ ರೀತಿ ಪ್ರಾರ್ಥಿಸಿದರು. ಈ ಗ್ರಂಥಗಳೆಲ್ಲವೂ ಅಗಾಧವಾಗಿವೆ. ಬಹಳ ಗಂಭೀರವಾಗಿವೆ. ಮಂದಮತಿಗಳು ಇವುಗಳಿಂದ ಯುಕ್ತಿಗಳನ್ನು ಉದ್ಧರಿಸಿ ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ, ಸ್ಪಷ್ಟವಾದ ಯುಕ್ತಿಗಳಿಂದ ಕೂಡಿದ ಬೇರೊಂದು ಗ್ರಂಥವನ್ನು ನೀವು ರಚಿಸಬೇಕು' ಎಂದು ತ್ರಿವಿಕ್ರಮಪಂಡಿತರು ಪ್ರಾರ್ಥನಾರೂಪವಾದ ಸಾಂತ್ವವಾಕ್ಯವನ್ನಾಡಿದಾಗ ಆಚಾರ್ಯರು ಅನುವ್ಯಾಖ್ಯಾನವೆಂಬ ಅತ್ಯುತ್ತಮಗ್ರಂಥವನ್ನು ನಿರ್ಮಿಸಿ ಶಿಷ್ಯರಿಂದ ಬರೆಸಿದರು.

ಶ್ರೀಮಧ್ವರಿಗೆ ಪೂರ್ವಾಶ್ರಮದ ಸಹೋದರನೊಬ್ಬನಿದ್ದನು. ಅವನು ತಂದೆತಾಯಿಗಳು ಸ್ವರ್ಗಸ್ಥರಾದ ಮೇಲೆ ವೈರಾಗ್ಯಸಂಪನ್ನನಾದನು. ಅವನಲ್ಲಿ ಜ್ಞಾನಭಕ್ತ್ಯಾದಿಗುಣಗಳು ತುಂಬಿದ್ದವು. ಇಂತಹ ತಮ್ಮನಿಗೆ ಆಚಾರ್ಯರು ಸನ್ನ್ಯಾಸವನ್ನು ಕೊಟ್ಟು ವಿಷ್ಣುತೀರ್ಥ ಎಂದು ಹೆಸರಿಟ್ಟರು. ಅವರಲ್ಲಿ ವಿಶೇಷಾನುಗ್ರಹವನ್ನು ಮಾಡಿದರು. ಗೋದಾವರೀ ತೀರವಾಸಿಗಳಾದ ಶೋಭನಭಟ್ಟರು ವಾದಿಶ್ರೇಷ್ಠರೂ ಆಚಾರ್ಯರಿಗೆ ತುಂಬಾ ಪ್ರೀತಿಪಾತ್ರರೂ ಆಗಿದ್ದರು. ಆಚಾರ್ಯರು ಅವರಿಗೆ ಸನ್ನ್ಯಾಸವನ್ನು ಕೊಟ್ಟು ಪದ್ಮನಾಭತೀರ್ಥರೆಂದು ಹೆಸರಿಟ್ಟರು. ಹೀಗೆ ವಿಷ್ಣುತೀರ್ಥರು ಮತ್ತು ಪದ್ಮನಾಭತೀರ್ಥರಿಗೆ ಸನ್ನ್ಯಾಸಕೊಟ್ಟ ಮೇಲೆ ಜ್ಞಾನಭಕ್ತ್ಯಾದಿ ಸದ್ಗುಣಪೂರ್ಣರಾದ ಅನೇಕಮಂದಿ ಪ್ರಶಂಸಾರ್ಹರಾದ ಶಿಷ್ಯರಿಗೆ ಆಚಾರ್ಯರು ಸನ್ನ್ಯಾಸವನ್ನು ಕೊಟ್ಟರು. ಆಚಾರ್ಯರ ಶಿಷ್ಯರೂ ಪ್ರಶಿಷ್ಯರೂ ಹೀಗೆ ಬಹು ಸಂಖ್ಯೆಯಲ್ಲಿದ್ದರು. ಅನೇಕಮಂದಿ ಗೃಹಸ್ಥರನ್ನೂ ಆಚಾರ್ಯರು ಶಿಷ್ಯರನ್ನಾಗಿ ಮಾಡಿಕೊಂಡರು. ಹೀಗೆ ಪ್ರವಚನ, ಗ್ರಂಥನಿರ್ಮಾಣ, ಶಿಷ್ಯಾನುಗ್ರಹಗಳನ್ನು ಮಾಡುತ್ತಾ ಆಚಾರ್ಯರು ಕಣ್ವತೀರ್ಥದ ಹತ್ತಿರದಲ್ಲಿ ವಾಸಮಾಡುತ್ತಾ ಉತ್ಕೃಷ್ಟರಾಗಿದ್ದಾರೆ. (ಇಲ್ಲಿ ವಿಜಯತೇ ಇತ್ಯಾದಿ ವರ್ತಮಾನಕಾಲ ನಿರ್ದೇಶಮಾಡಿದ್ದರಿಂದ ಆಚಾರ್ಯರು ಎದುರಿಗಿದ್ದಾಗಲೇ ಶ್ರೀ ನಾರಾಯಣಪಂಡಿತಾಚಾರ್ಯರು ಈ ಗ್ರಂಥವನ್ನು ರಚಿಸಿದ್ದಾರೆಂದು ತಿಳಿದು ಬರುತ್ತದೆ.)

**ವಿಗ್ರಹ ವ್ಯಾಕರಣ ವಿಶೇಷಾದಿಗಳು** – ಸಾಮ್ನಃ=ಸಾಂತ್ವಾತ್, ಸಾಮ=ಪ್ರಾರ್ಥನಾಪೂರ್ವಕವಾದ ಸಮಾಧಾನದ ಮಾತು, ಸಾಮ ಸಾಂತ್ವಮುಭೇಸಮೇ ಅಮರ. ಸಾಮನ್ ನಕಾರಾಂತ ನಪುಂ ಪ್ರ. ಏ. ತ್ರಿವಿಕ್ರಮಾರ್ಯಸ್ಯ ಇದಂ ತ್ರೈವಿಕ್ರಮಾರ್ಯಂ ತಸ್ಮಾತ್, ಶತಂ ಚ ತೇ ಗ್ರಂಥಾಶ್ಚ ಶತಗ್ರಂಥಾಃ, ಶತಗ್ರಂಥಾನಾಂ ಕರ್ತಾ ಶತಗ್ರಂಥಕರ್ತಾ, ಸೋದರ್ಯಃ =ಒಡಹುಟ್ಟಿದ ತಮ್ಮ ಸಮಾನೋದರ್ಯಸೋದರ್ಯ ಸಗರ್ಭ್ಯಸಹಜಾಸ್ಸಮಾಃ ಅಮರ ಸಮಾನೇ ಉದರೇ ಶಯಿತಃ (ಸ್ಥಿತಃ)=ಒಂದೇ ತಾಯಿಯ ಉದರದಲ್ಲಿದ್ದವನು ಎಂಬ ಅರ್ಥದಲ್ಲಿ ಸೋದರಾದ್ಯಃ 4-109 ಎಂಬ ಸೂತ್ರದಿಂದ ಯ. ಪ್ರತ್ಯಯ. ಸಮಾನೋದರ+ಯ ಎಂದಿರುವಾಗ ಯಸ್ಯೇತಿ ಚ ಎಂಬ ಸೂತ್ರದಿಂದ ಅಕಾರಲೋಪ ಸಮಾನೋದರ್ಯ ಎಂದಿರುವಾಗ ವಿಭಾಷೋದರೇ (6-3-88) ಎಂಬ ಸೂತ್ರದಿಂದ ಉದರಶಬ್ದಕ್ಕೆ ಯಕಾರಾದಿ ಪ್ರತ್ಯಯವನ್ನು ಹಚ್ಚಿದಾಗ ಸಮಾನಶಬ್ದಕ್ಕೆ ವಿಕಲ್ಪದಿಂದ 'ಸ' ಆದೇಶ. ಸಂತ ಶ್ಚ ತೇ ಗುಣಾಶ್ಚ ಸದ್ಗುಣಾಃ, ಮಹಾಂತಃ ಸದ್ಗುಣಾಃ ಯಸ್ಯ ಸಃ ಮಹಾಸದ್ಗುಣಃ ತಂ, ವಾದಿನಾಂ ಇಂದ್ರಃ ವಾದೀಂದ್ರಃ ತಂ, ಸಂತಃ ಗುಣಾಃ ಯೇಷಾಂ ತೇ ಸದ್ಗುಣಾಃ) ತಾನ್, ಶ್ಲಾಘಿತುಂ ಯೋಗ್ಯಾಃ ಶ್ಲಾಘ್ಯಾಃ, ಶ್ಲಾಘ್ಯಾಶ್ಚತೇ ಶಿಷ್ಯಾಶ್ಚ ಶ್ಲಾಘ್ಯಶಿಷ್ಯಾಃ ತಾನ್, ನ ಏಕೇ ಅನೇಕೇ ತಾನ್, ಗೃಹೈಃ (ಪತ್ನ್ಯಾ) ಸಹತಿಷ್ಠಂತೀತಿ ಗೃಹಸ್ಥಾಃ ಸಂತಶ್ಚ ತೇ ಗೃಹಸ್ಥಾಶ್ಚ ಸದ್ಗೃಹಸ್ಥಾಃ ತಾನ್, ಕಣ್ವತೀರ್ಥಸ್ಯ ಅಂತಿಕಂ ಕಣ್ವತೀರ್ಥಾಂತಿಕಂ, ಕಧ್ವತೀರ್ಥಾಂತಿಕೇ ತಿಷ್ಠತೀತಿ ಕಣ್ವತೀರ್ಥಾಂತಿಕಸ್ಥಃ

**ಕ್ರಿಯಾಪದ** - ವಿ+ಅರಚಯತ್. ಅರಚಯತಾಂ ಅರಚಯನ್, ಅರಚಯಃ ಅರಚಯತಂ ಅರಚಯತ, ಅರಚಯಂ ಅರಚಯಾವ, ಅರಚಯಾಮ, ವಿ ಉಪಸರ್ಗ ರಚ ಪ್ರತಿಯತ್ನೇ ಸಕ. ಸೇಟ್ ಉಭ. + to arrange, to write, to make ಲಙ್ ಪರ ಪ್ರ.ಪು.ಏ.

ಅಕೃತ ಅಕೃಷಾತಾಂ ಅಕೃಷತ, ಅಕೃಥಾಃ ಅಕೃಷಾಥಾಃ ಅಕೃಷಾಥಾಂ ಅಕೃಢ್ವಂ, ಅಕೃಷಿ ಅಕೃಷ್ವಹಿ, ಅಕೃಷ್ಮ ಹಿ ಡುಕೃಙ್(ಕೃ) ಕರಣೇ ಸಕ. ಅನಿ ಉಭ ಆತ್ಮನೇ ಲುಙ್. ವಿ ಜಯತೇ ವಿಜಯೇತೇ ವಿಜಯಂತೇ ಇತ್ಯಾದಿ ಜಿ.ಜಯೇ, ಅಕರ್ಮ ಅನಿ ಪರ. ವಿ.ಉಪಸರ್ಗ ಬಂದಾಗ ವಿಪರಾಭ್ಯಾಂಜೇಃ ಎಂಬ ಸೂತ್ರದಿಂದ ಆತ್ಮನೇ ಪದ.

**ಪ್ರಯೋಗ** - ಶತಗ್ರಂಥಕರ್ತ್ರಾಯೇನ ತ್ರೈವಿಕ್ರಮಾರ್ಯಾತ್ ಸಾಮ್ನಃ ಅನುಭಾಷ್ಯಂ ವ್ಯರಚ್ಯತ, **ವಿರಕ್ತಃ** ಮಹಾಸದ್ಗುಣಃ ಸ್ವಃ ಸೋದರ್ಯಃ ವಿಷ್ಣುತೀರ್ಥಃ ಯತಿಃ ಅಕಾರಿ, ವಾದೀಂದ್ರಃ ಪ್ರಿಯಃ ಪದ್ಮನಾಭಃ ಯತಿಃ **ಅಕಾರಿ** ಅಥ ಪರೇ ಸದ್ಗುಣಾಃ ಶ್ಲಾಘ್ಯಶಿಷ್ಯಾಃ ಚ ಯತಯಃ ಅಕಾರಿಷತ, ಅನೇಕೇ ಸದ್ಗೃಹಸ್ಥಾಃ ಅಪಿ ಶಿಷ್ಯಾಃ **ಅಕಾರಿಷತ**, ತೇನ (ಮಧ್ವೇನ) ಕಣ್ವಾತೀರ್ಥಾಂತಿಕಸ್ಥೇನ ಸತಾ ವಿಜೀಯತೇ ॥

**ಗೂಢಭಾವಪ್ರಕಾಶಿಕಾ ಭಾಷಾನುವಾದ** - ಯಃ=(ಮಧ್ವಃ) ಯಾವ ಶ್ರೀ ಮಧ್ವಾಚಾರ್ಯರು ತ್ರೈವಿಕ್ರಮಾರ್ಯಾತ್= ತ್ರಿವಿಕ್ರಮಾರ್ಯಸಂಬಂಧಿನಃ=ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯರಿಗೆ ಸಂಬಂಧಿಸಿದ (ಅವರು ಹೇಳಿದ) **ಸಾಮ್ನಃ**= ಚತುರುಪಾಯೇಷು ಆದ್ಯೋಪಾಯಾತ್=(ಸಾಂತ್ವಾತ್) ಸಾಮ್ನಃ ಎಂದರೆ ಸಾಮದಾನ ಭೇದದಂಡ ಎಂಬ ನಾಲ್ಕು ಉಪಾಯಗಳಲ್ಲಿ ಮೊದಲನೆಯ ಉಪಾಯದಿಂದ, ಪ್ರಾರ್ಥನಾರೂಪವಾದ ಸಮಾಧಾನದ ಮಾತಿನಿಂದ, (ಸಾಂತ್ವದಿಂದ) ಭವತ್ ಕೃತಗ್ರಂಥಾನಾಂ=ತಾವು ರಚಿಸಿರಿವ ಗ್ರಂಥಗಳಿಗೆ (ಗಳು) ಅಗಾಧತಯಾ=ಗಂಭೀರತೇ ಇರುವುದರಿಂದ (ಗಂಭೀರವಾಗಿರು ವುದರಿಂದ) ಮಂದಮತಿಭಿಃ=ಅಲ್ಪಬುದ್ಧಿಯುಳ್ಳವರಿಂದ, ನ್ಯಾಯಾನಾಂ=ನ್ಯಾಯಗಳನ್ನು, ದುರ್ಧಾರ್ಯತ್ವಾತ್=ಧರಿಸಲು ಸಾಧ್ಯವಿಲ್ಲದ್ದರಿಂದ (ದುರುದ್ಧರತ್ವಾತ್) =ಪ್ರತ್ಯೇಕಿಸಿ ತೆಗೆಯಲು ಸಾಧ್ಯವಿಲ್ಲದ್ದರಿಂದ) ವ್ಯಕ್ತಯುಕ್ತ್ಯುಪೇತಂ=ಸ್ಪಷ್ಟವಾದ ಯುಕ್ತಿಗಳಿಂದ ಕೂಡಿದ, ಗ್ರಂಥಾತಂರಂ=ಬೇರೊಂದು ಗ್ರಂಥವನ್ನು ಕುರು ಇತಿ=ಮಾಡಿರಿ ಎಂದು ಪ್ರಾರ್ಥನಾರೂಪಾತ್ ಸಾಮ್ನಃ ಇತ್ಯರ್ಥಃ=ಪ್ರಾರ್ಥನಾರೂಪವಾದ ಸಾಂತ್ವವಚನದಿಂದ ಎಂದು ಅರ್ಥ, ಅನುಭಾಷ್ಯಂ ಅನುವ್ಯಾಖ್ಯಾನಂ= ಅನುಭಾಷ್ಯವನ್ನು ಎಂದರೆ ಅನುವ್ಯಾಖ್ಯಾನವನ್ನು, ವ್ಯರಚಯತ್ ವಿರಚಿತವಾನ್=ವ್ಯರಚಯತ್ ಎಂದರೆ ರಚಿಸಿದರು ಎಂದು ಅರ್ಥ. ರಚ (ವಿಸ್ತಾರೇ) ಪ್ರತಿಯತ್ನೇ ವ್ಯರಚಯತ್ ಎಂಬಲ್ಲಿ 'ರಚ' ಧಾತು, ಅದಕ್ಕೆ ವಿಸ್ತಾರ ಮಾಡುವುದು ಎಂದು ಅರ್ಥ ಲಙ್=ಈ ಧಾತುವಿನ ಲಙ್ ಲಕಾರ ಶತಗ್ರಂಥಕರ್ತಾ ಎಂಬಲ್ಲಿ ಶತ ಶಬ್ದಃ=ಶತ ಎಂಬ **ಶಬ್ದವು**, ಬಹುತ್ವಮಾಹ=ಬಹುತ್ವವನ್ನು ಹೇಳುತ್ತದೆ, ತಥಾ ಚ=ತಾತ್ಪರ್ಯವೇನೆಂದರೆ ಅನೇಕ ಪ್ರಕರಣ=ಪ್ರಮಾಣ **ಲಕ್ಷಣ** ಮುಂತಾದ ಹತ್ತು ಪ್ರಕರಣಗಳು, ದಶೋಪನಿಷದ್ ಭಾಷ್ಯ=ಈಶಾವಾಸ್ಯಾದಿ ಹತ್ತು ಉಪನಿಷತ್ತುಗಳ **ಭಾಷ್ಯಗಳು**, ಸೂತ್ರಭಾಷ್ಯ=ಶ್ರೀ ಮದ್ ಬ್ರಹ್ಮಸೂತ್ರಭಾಷ್ಯ, ಅಣುಭಾಷ್ಯ=ಬ್ರಹ್ಮಸೂತ್ರಗಳ ಶ್ಲೋಕರೂಪವಾದ ವ್ಯಾಖ್ಯಾನ, **ನ್ಯಾಯವಿವರಣ**= ಬ್ರಹ್ಮಸೂತ್ರಗಳಲ್ಲಿ ಹೇಳಿರುವ ನ್ಯಾಯಗಳ ವಿವರಣ ಗೀತಾಭಾಷ್ಯ=ಭಗವದ್ಗೀತೆಯ ಭಾಷ್ಯ, **ಭಾರತತಾತ್ಪರ್ಯ** ನಿರ್ಣಯ=ಮಹಾಭಾರತದ ತಾತ್ಪರ್ಯವನ್ನು ತಿಳಿಸುವ ಗ್ರಂಥ, ತಂತ್ರಸಾರ=ತಂತ್ರಸಾರಸಂಗ್ರಹ ಎಂಬ ಗ್ರಂಥ, ದ್ವಾದಶ**ಸ್ತೋತ್ರ**= ಹನ್ನೆರಡು ಸ್ತೋತ್ರಗಳ ಸಂಗ್ರಹ, ಯಮಕಭಾರತಾದಿ=ಯಮಕಭಾರತ ಮೊದಲಾದ, ಬಹುಗ್ರಂಥನಿರ್ಮಾತಾ **ಇತ್ಯರ್ಥಃ**= ಅನೇಕ ಗ್ರಂಥಗಳನ್ನು ನಿರ್ಮಿಸಿದವರು ಎಂದು ಅರ್ಥ. ಉಕ್ತಾನೇಕಗ್ರಂಥಕರ್ತೃತ್ವಪ್ರಶಂಸಾಪೂರ್ವಕಂ=ಹೀಗೆ **ಹೇಳಿದ** ಅನೇಕ ಗ್ರಂಥಗಳ ನಿರ್ಮಾತೃತ್ವದ ಪ್ರಸಂಶೆಯ ಪೂರ್ವಕವಾಗಿ, ಗ್ರಂಥಾಂತರರಚನಾಯ=ಬೇರೊಂದು ಗ್ರಂಥದ **ರಚನೆಗೋಸ್ಕರ** ಪ್ರಾರ್ಥಿತಃ=ಪ್ರಾರ್ಥಿಸಲ್ಪಟ್ಟ, ಮಧ್ವಃ=ಶ್ರೀ ಮಧ್ವಾಚಾರ್ಯರು, ಅನುವ್ಯಾಖ್ಯಾನಂ=ಅನುವ್ಯಾಖ್ಯಾನವೆಂಬ ಗ್ರಂಥ**ವನ್ನು, ಅಕರೋದಿತಿ** ಭಾವಃ=ಮಾಡಿದರು ಎಂದು ಭಿಪ್ರಾಯವು.

ಸ್ವಂ ಸ್ವಕೀಯ=ಸ್ವಂ ಎಂದರೆ ಸ್ವಕೀಯನಾದ (ತನ್ನವನಾದ) ಸೋದರ್ಯಂ=ಏಕೋದರಜಾ**ತನಾದ ತಮ್ಮನನ್ನು**, ಸಮಾನೇ ಉದರೇ ಶೇತೆ ಇತಿ=ಒಂದೇ ತಾಯಿಯ ಗರ್ಭದಲ್ಲಿ ಇದ್ದನು ಎಂಬ ಕಾರಣದಿಂದ, ಸೋದರ್ಯ**=ಸೋದರ್ಯನೆಂದು** ಹೇಳಲ್ಪಡುವ ತಮ್ಮನು, ತಂ=ಅವನನ್ನು, ಸ್ವಾನುಜಂ ಇತ್ಯರ್ಥಃ=ತನ್ನ ಅನಂತರ **ಹುಟ್ಟಿದ ತಮ್ಮನನ್ನು ಎಂದು** ಅರ್ಥವು. 'ಸಮಾನೋದರೇ ಶಯಿತ ಓಚೋದಾತ್ತ, ಇತ್ಯಸಃ ಅನಂತರೇಣ ಸಮಾನೋ**ದರೇ ಶಯಿತ ಓಚೋದಾತ್ತ** ಎಂಬ ಪಾಣಿನೀಯ ಸೂತ್ರದ ಅನಂತರ ಇರುವ, ಸೋದರಾದ್ಯಃ ಇತಿ ಸೂತ್ರೇಣ=**ಸೋದರಾದ್ಯಃ ಎಂಬ ಸೂತ್ರದಿಂದ** ಯಪ್ರತ್ಯಯಃ=ಯ ಎಂಬ ಪ್ರತ್ಯಯವು, ಸಮಾನಸ್ಯ=ಸಮಾನಶಬ್ದಕ್ಕೆ ವಿಭಾಷೋ**ದರೇ ಎಂಬ ಸೂತ್ರದಿಂದ**, ಸಃ=ಸ ಎಂಬ ಆದೇಶವು, ವಿರಕ್ತಂ ಎಂದರೆ ವೈರಾಗ್ಯಸಂಪನ್ನನಾದ ಎಂದು ಅರ್ಥ, **ಮಹಾಸದ್ಗುಣಂ ಎಂಬಲ್ಲಿ ಮಹಾಂತಃ**=ದೊಡ್ಡದಾದ ಶ್ರೇಷ್ಠವಾದ, ಸಂತಃ=ನಿರ್ದೋಷವಾದ, ಗುಣಾಃ=ಜ್ಞಾನ ಭಕ್ತ್ಯಾದಿಗಳು **ಯಸ್ಯ=ಯಾವನಿಗೆ ಇವೆಯೋ ಅವನು** ಮಹಾಸದ್ಗುಣ ಎನಿಸಿಕೊಳ್ಳುತ್ತಾನೆ, ತಂ=ಅಂತಹವನನ್ನು, ವಿಷ್ಣುತೀರ್ಥಂ ವಿಷ್ಣುತೀರ್ಥ**ನಾಮಾನಂ=ವಿಷ್ಣುತೀರ್ಥ** ಎಂಬ ಹೆಸರುಳ್ಳವನನ್ನಾಗಿ

ಯತಿಂ ಯತ್ಯಾಶ್ರಮೋಪೇತಂ=ಯತಿಂ ಎಂದರೆ ಸನ್ಯಾಸಾಶ್ರಮದಿಂದ ಕೂಡಿದವನನ್ನಾಗಿ, ಅಕೃತ ಅಕರೋತ್=ಅಕೃತ ಅಂದರೆ ಅಕರೋತ್=ಮಾಡಿದರು. ತಥಾ=ಹಾಗೆಯೇ, ವಾದೀಂದ್ರಂ ವಾದಿಶ್ರೇಷ್ಠಂ= ವಾದಮಾಡುವವರಲ್ಲಿ ಶ್ರೇಷ್ಠರಾದ, ಪ್ರಿಯಂ ಅತ್ಯಂತ ಪ್ರೀತಿ ವಿಷಯಂ=ಪ್ರಿಯಂ ಅಂದರೆ ಹೆಚ್ಚು ಪ್ರೀತಿಗೆ ವಿಷಯರಾದ (ಶೋಭನಭಟ್ಟರನ್ನು) ಪದ್ಮನಾಭಂ ಪದ್ಮನಾಭಾಖ್ಯಂ=ಪದ್ಮನಾಭತೀರ್ಥರೆಂಬ ಹೆಸರುಳ್ಳವರನ್ನಾಗಿ ಅಕೃತ ಅಕರೋತ್=ಅಕೃತ ಅಂದರೆ ಮಾಡಿದರು. ಅಥ=ಸಮನಂತರಂ, ಅಥ ಅಂದರೆ ಇದರ ಅನಂತರ, ಸದ್ಗುಣಾನ್=ಜ್ಞಾನಭಕ್ತ್ಯಾದಿಸಾಧುಗುಣಾನ್, ಸದ್ಗುಣಾನ್ ಎಂದರೆ ಜ್ಞಾನಭಕ್ತಿ ಮೊದಲಾದ ಉತ್ತಮಗುಣವುಳ್ಳ ಪರಾನ್=ಚರಮಾನ್, ಪರಾನ್ ಅಂದರೆ ಅನಂತರದವರನ್ನು, ಪದ್ಮನಾಭ ತೀರ್ಥಾಪೇಕ್ಷಯಾಪಶ್ಚಾತ್ತಾನಾನ್=ಪದ್ಮನಾಭತೀರ್ಥರಿಗಿಂತ ಅನಂತರದವರನ್ನು, (ಇತಿಯಾವತ್=ಎಂದು ತಾತ್ಪರ್ಯ) ಶ್ಲಾಘ್ಯಶಿಷ್ಯಾನ್ ಚ=ಪ್ರಶಂಸನೀಯಾನ್ ಅಂತೇವಾಸಿನಃ ಅಪಿ=ಹೊಗಳಲು ಯೋಗ್ಯರಾದ ಶಿಷ್ಯರನ್ನೂ ಕೂಡ) ಯತೀನ್ ಅಕೃತ=ಸನ್ಯಾಸಿಗಳನ್ನಾಗಿ ಮಾಡಿದರು. ಅನೇಕಾನ್=ಬಹೂನ್, ಅನೇಕಾನ್ ಅಂದರೆ ಬಹಳ ಮಂದಿ, ಸದ್ಗೃಹಸ್ಥಾನ್ ಅಪಿ=ಗೃಹಸ್ಥಾಶ್ರಮೋಪೇತಾನ್ ಅಪಿ=ಗೃಹಸ್ಥಾಶ್ರಮಿಗಳಾದವರನ್ನೂ, ಶಿಷ್ಯಾನ್ ಅಕೃತ=ಶಿಷ್ಯರನ್ನಾಗಿ ಮಾಡಿಕೊಂಡರು. ಇತ್ಯನ್ವಯಃ=ಎಂದು ಅನ್ವಯ. ಡುಕೃಞ್ ಕರಣೇ ಲುಙ್ ಆತ್ಮನೇ ಪದಂ ಅಕೃತ ಎಂಬಲ್ಲಿ ಕರಣ ಮಾಡುವುದು ಎಂಬ ಅರ್ಥವುಳ್ಳ ಕೃಧಾತುವು, ಈ ಧಾತುವನ್ನು ಡು ಮತ್ತು ಞ್ ಎಂಬ ಅಕ್ಷರಗಳನ್ನು ಹಿಂದೆ ಮುಂದೆ ಸೇರಿಸಿ ಹೇಳುವುದು ವ್ಯಾಕರಣಶಾಸ್ತ್ರಜ್ಞರ ಸಂಪ್ರದಾಯ. ಈ ಕೃಧಾತುವಿನ ಆತ್ಮನೇ ಪದದಲ್ಲಿ 'ಅಕೃತ' ಎಂದು ರೂಪ. ಇದು ಭೂತಕಾಲದ ಲುಙ್‌ರೂಪ. ಸಃ ಮಧ್ವಃ= ಆಮಧ್ವರು, ಕಣ್ವತೀರ್ಥಾಂತಿಕಸ್ಥಃ ಸನ್=ಕಣ್ವತೀರ್ಥದ ಬಳಿಯಲ್ಲಿ ಇದ್ದವರಾಗಿ. ವಿಜಯತೇ=ಉತ್ಕೃಷ್ಟೋ ವರ್ತತೇ ಉತ್ಕೃಷ್ಟರಾಗಿ ಇರುತ್ತಾರೆ. ಜಿಜಯೇ=ಜಿ ಎಂಬ ಧಾತುವಿಗೆ ಜಯ ಎಂದು ಅರ್ಥ. ಜಯ ಉತ್ಕರ್ಷಃ ಜಯವೆಂದರೆ ಉತ್ಕರ್ಷವು ಶ್ರೇಷ್ಠನಾಗಿರುವುದು ಲಟ್ ಆತ್ಮನೇ ಪದಂ ಜಿಧಾತುವಿನ ವರ್ತಮಾನಕಾಲದ ಲಟ್ ಲಕಾರ. ಆತ್ಮನೇಪದ ವಿಜಯತೇ ಎಂದು ರೂಪ. ॥೨೯॥

**ಅವತರಣಿಕಾ** - ವೇದೋಕ್ತವಾದ ಫಲವು ಅಧಿಕಾರಿಗಳಿಗೆ ಈಗಲೇ ಲಭ್ಯವಾಗುತ್ತದೆ ಎಂದು ಆಚಾರ್ಯರು ಪ್ರತ್ಯಕ್ಷವಾಗಿ ತೋರಿಸಿದರೆಂದೂ, ತನ್ನ ಅಂಗುಷ್ಠ ಪ್ರಕಾಶದಿಂದ ಕತ್ತಲೆಯಲ್ಲಿ ಶಿಷ್ಯರಿಗೆ ಗ್ರಂಥವನ್ನು ಓದಲು ಅನುಕೂಲಮಾಡಿಕೊಟ್ಟರೆಂದೂ, ವಿಶೇಷವಾದ ದೇಹಬಲವನ್ನು ತೋರಿಸಿದರೆಂದೂ, ತನ್ನ ದಿವ್ಯಪ್ರಭಾವದಿಂದ ಸಮುದ್ರವನ್ನೇ ಸ್ತಂಭಿಸಿದರೆಂದೂ ಇವೇ ಮೊದಲಾದ ಮಹಾಮಹಿಮೆಗಳನ್ನು ಹೇಳುತ್ತಾರೆ.

**ಸಂಸ್ತವ್ಯೋ ವೇದಮಾನಂ ಸಮವಿತುಮತನೋದೋಷಧೀರ್ಯಃ ಕ್ಷಣಾಂತೇ**
**ದಿಪ್ತಾಂಗುಷ್ಠಃ ಶಿಲಾನೀಃ ಶ್ರುತಿವಿವರಣಕೃದ್ ವರ್ಧಿತಸ್ತಂಭಿತಾಬ್ಧಿಃ**
**ಅಂಗುಲ್ಯಾ ಗಂಡವಾಟಾವತುಲಬಲಚಣೌ ಚಾಲನೇ ಯಸ್ಯ ನಾಲಂ**
**ಪ್ರಾಗ್ವಾಟೋ ವಾವಟೂಢೋ ಮಮ ಮನಸಿ ಲಸೇದಪ್ಯಲಾವ್ಯೈ ಕಲೋಮಾ ॥೩೦॥**

**ಗೂಢಭಾವಪ್ರಕಾಶಿಕಾವ್ಯಾಖ್ಯಾನ** - ಸಂಸ್ತವ್ಯ ಇತಿ॥ ಯಃ ಶ್ರೀ ಮಧ್ವಃ, ವೇದಮಾನಂ, ಭಾವ ಪ್ರಧಾನೋ ನಿರ್ದೇಶಃ ವೇದಪ್ರಾಮಾಣ್ಯಮಿತ್ಯರ್ಥಃ ವೇದಾಖ್ಯಂ ಪ್ರಮಾಣಮಿತಿವಾ ಸಮವಿತುಂ ರಕ್ಷಿತುಂ ಕ್ಷಣಾಂತೇ ಅಲ್ಪಕಾಲೇ ಓಷಧಿಃ ಓಷಧಿವಿಶೇಷಾನ್ ಅತನೋತ್ ಅಕರೋತ್, ತನು ವಿಸ್ತಾರೇ ಲಙ್ ಅಯಂ ಭಾವಃ ವೇದೇ ಶ್ರೂಯತೇ ಕಿಂಚಿದ್ ಬೀಜಂ ಹಸ್ತೇನಿಧಾಯ ಯಾ ಓಷಧೀಃ ಪೂರ್ವಜಾತಾದೇವೇಭ್ಯ ಸ್ತ್ರಿಯುಗಂ ಪುರಾ' ಇತ್ಯಾದಿ ಸೂಕ್ತಂ ಜಪಿತ್ವಾ ಭೂಮೌ ಉಪ್ತಂ ಚೇತ್ ಸದ್ಯಃ ಅಂಕುರಪುಷ್ಪಫಲಾದ್ಯುತ್ಪತ್ತಿಃ ಭವತೀತಿ ಇದಾನೀಂತನೇನ ತಥಾಕೃತೇಽಪಿ ತನ್ನ ದೃಶ್ಯತೇ ಇತೀದಂ ವಾಕ್ಯಮಮಾನಮ್ । ತಥಾಚ ತದ್ವತ್ ಸರ್ವವೇದವಾಕ್ಯಮಮಾನಮಿತಿ ಕೇನಚಿದ್ದುಷ್ಟಪ್ರಭುಣಾ ಉದಿತೇ, ತದಾಕ್ಷೇಪಮಸಹಿಷ್ಣುಃ ಶ್ರೀಮಧ್ವಃ 'ಅಧಿಕಾರವಿಶೇಷವತಃ ಫಲಿಷ್ಯತಿ ಇತ್ಯುಕ್ತ್ವಾ ತದ್ ಬೀಜಂ ಸ್ವಯಂ ಆದಾಯ ತತ್ ಸೂಕ್ತಂ ಜಪಿತ್ವಾ ಕ್ಷಣೇನ ಅಂಕುರಪುಷ್ಪಾದೀನಿ ಕೃತವಾನಿತಿ । ದೀಪ್ತಾಂಗುಷ್ಠಃ ದೀಪ್ತಃ ಪ್ರಕಾಶಮಮಾನಃ ಅಂಗುಷ್ಠಃ ಅಂಗುಷ್ಠಸ್ಯ ನಖಃ ಯಸ್ಯಸಃ ತಥಾ, ಕದಾಚಿದ್ರಾತ್ರೌ ವ್ಯಾಖ್ಯಾನಸಮಯೇ ದೀಪೇ ಪ್ರಶಾಂತೇ ಸತಿ

ಸ್ವಾಂಗುಷ್ಠನಖರೋಚಿಷಾ ಶಿಷ್ಯಾನ್ ವಾಚಯಾಮಾಸ ಇತಿಭಾವಃ । ಶಿಲಾನೀಃ ಶಿಲಾಂ ಪಾಷಾಣಂ ನಯತಿ ಪ್ರಾಪಯತೀತಿ ಸಃ ತಥಾ । ಕ್ವಚಿತ್ ತುಂಗಭದ್ರಾ ತೀರೇ ಸ್ಥಾಪನಾರ್ಥಂ ಸಹಸ್ರಸಂಖ್ಯೈಃ ಪುರುಷೈರಾನೀತಾಂ ಅಶಕ್ತ್ಯಾ ಮಧ್ಯೇ ತ್ಯಕ್ತಾಂ (ಶಿಲಾಂ) ದೃಷ್ಟ್ವಾ ಶ್ರೀ ಮಧ್ವಃ ತಾಂ ಅನಾಯಾಸೇನ ತುಂಗಭದ್ರಾತೀರಂ ಪ್ರಾಪಿತವಾನ್ ಇತಿಭಾವಃ । ಶ್ರುತಿವಿವರಣಕೃತ್ ಶ್ರುತೇಃ ಋಕ್ ಶಾಖಾಗತಸೂಕ್ತವಿಶೇಷಸ್ಯ ವಿವರಣಂ ವ್ಯಾಖ್ಯಾನಂ ಕರೋತೀತಿ ಸಃ ತಥಾ ವರ್ಧಿತಸ್ತಂಭಿತಾಬ್ಧಿಃ, ವರ್ಧಿತಃ ಅಭಿವೃದ್ಧಃ, ಸ್ತಂಭಿತಃ ನಿಶ್ಚಲೀಕೃತಃ ಅಬ್ಧಿಃ ಸಮುದ್ರೋಯೇನ ಸಃ, ಪೂರ್ವಕಾಲೈಕೇತ್ಯಾದಿನಾ ಸಮಾಸಃ ವ್ಯಾಖ್ಯಾನಕಾಲೇ ತರಂಗೈರುದ್ಘೋಷಯಂತಂ ಅಬ್ಧಿಂ ಅಪಾಂಗೇನ ದೃಷ್ಟ್ವಾ ತಟಾಕಜಲವತ್ ನಿಶ್ಚಲಮಕರೋದಿತಿಭಾವಃ। ಅತುಲಬಲಚಣೌ ಅತುಲಬಲೇನ ಅಸದೃಶಸಾಮರ್ಥ್ಯೇನ ವಿತ್ತೌಪ್ರಸಿದ್ಧೌಅತುಲಬಲಚಣೌ, ತೇನ ವಿತ್ತಶ್ಚುಂಚುಪ್ ಚಣಪೌ ಇತಿ ಚಣಪ್ ಪ್ರತ್ಯಯಃ । ಗಂಡವಾಟೌ ಗಂಡವಾಟಾಖ್ಯವಿಪ್ರೌ ಯಸ್ಯ ಶ್ರೀಮಧ್ವಸ್ಯ ಅಂಗುಲ್ಯಾಃ ಅಂಗುಲಿಮಾತ್ರಸ್ಯ ಚಾಲನೇ ನಾಲಂ ನ ಸಮರ್ಥೌ, ಧರಾಯಾಂ ಅಂಗುಲಿಂ ನಿಕ್ಷಿಪ್ಯ ಇಯಂ ಉದ್ಧ್ರಿಯತಾಂಇತಿ ಮಧ್ವೇನ ಉಕ್ತೇ, ತಾಂ ಉದ್ಧರ್ತುಂ ಕಂಪನೇsಪಿ (ವಾ) ನ ಸಮರ್ಥಾವಿತಿ (ಅಭೂತಾಮಿತಿ ಭಾವಃ ಪ್ರಾಗ್ವಾಟೋ ವಾ ಪ್ರಾಗ್ವಾಟಾಖ್ಯಶ್ಚ ಅಂಗುಲೀಚಾಲನಾಯ ನಾಲಮಿತ್ಯರ್ಥಃ ವಟೂಢಃ ವಟುನಾ ಕೇನಚಿದ್ ಬಾಲಕೇನ ಊಢಃ ಧೃತಃ ಅತಿಲಾಘವವಾನ್ ಇತಿಭಾವಃ । ಅಲಾವ್ಯೈಕಲೋಮಾ ಅಲಾವ್ಯಂ ಅಯಸಾಪ್ಯಚ್ಛೇದ್ಯಂ ಏಕಂ ಲೋಮ ಕೇಶಃ ಯಸ್ಯಸಃ ತಥಾ, ಏವಂವಿಧಚರಿತಃ, ಸ್ತವ್ಯಃ ಮಹತಾಂ ಸ್ತುತಿಯೋಗ್ಯಃ ಶ್ರೀ ಮಧ್ವಃ ಮಮ ಮನಸಿ ಲಸೇತ್ ಭಾತು ಲಸ ಕಾಂತೌ (ವಿಧಿ) ಲಿಙ್ ಉಪರಾಗೇ ಸಮುದ್ರೇಸ್ನಾತ್ವಾ ಗಮನಸಮಯೇ ತತ್ರ ಸ್ವಸ್ಯಲಘಿಮಾದ್ಯೈಶ್ವರ್ಯಂ ಅತ್ಯಧಿಕಶಾರೀರಬಲಂ ಚ ಪ್ರಕಾಶಿತವಾನ್ ಇತ್ಯುತ್ತರಾರ್ಧತಾತ್ಪರ್ಯಾರ್ಥಃ ॥೩೦॥

**ಪದಚ್ಛೇದ** - ಸಂ, ಸ್ತವ್ಯಃ, ವೇದಮಾನಂ ಸಮವಿತುಂ ಅತನೋತ್, ಓಷಧೀಃ, ಯಃ ಕ್ಷಣಾಂತೇ, ದೀಪ್ತಾಂಗುಷ್ಠಃ ಶಿಲಾನೀಃ ಶ್ರುತಿವಿವರಣ್ಯಕೃತ್, ವರ್ಧಿತಸ್ತಂಭಿತಾಬ್ಧಿಃ, ಅಂಗುಲ್ಯಾಃ, ಗಂಡವಾಟೌ, ಅತುಲಬಲಚಣೌ, ಚಾಲನೇ, ಯಸ್ಯ, ನ ಅಲಂ, ಪ್ರಾಗ್ವಾಟಃ, ವಾ, ವಟೂಢಃ, ಮಮ, ಲಸೇತ್, ಅಪಿ, ಅಲಾವ್ಯೈಕಲೋಮಾ॥

**ಅನ್ವಯ** - ಯಃ ವೇದಮಾನಂ ಸಮವಿತುಂ ಓಷಧೀಃ ಅತನೋತ್ ದೀಪ್ತಾಂಗುಷ್ಠಃ **ಶಿಲಾನೀಃ** ~~ಶ್ರುತಿವಿವರಣ್ಯಕೃತ್, ವರ್ಧಿತಸ್ತಂಭಿತಾಬ್ಧಿಃ, ಅತುಲಬಲಚಣೌ, ಗಂಡವಾಟೌ, ಯಸ್ಯ, ಅಂಗುಲ್ಯಾಃ ಚಾಲನೇ **ನಾಲಂ**,~~ (ಅಭೂತಾಂ) ಪ್ರಾಗ್ವಾಟೋ ವಾ (ಯಸ್ಯ ಅಂಗುಲ್ಯಾಃ ಚಾಲನೇ) ನಾಲಂ (ಅಭೂತ್) ವಟೂಢಃ, **ಅಲಾವ್ಯೈಕಲೋಮಾ** ಸ್ತವ್ಯಃ ಸಃ ಮಮ ಮನಸಿ ಲಸೇತ್ ॥

**ಅನ್ವಯಾರ್ಥ** - ಯಃ=ಯಾವ ಶ್ರೀ ಮಧ್ವಾಚಾರ್ಯರು, ವೇದಮಾನಂ =ವೇದಪ್ರಾಮಾಣ್ಯವನ್ನು, **(ವೇದವೆಂಬ** ಪ್ರಮಾಣವನ್ನು) ಸಮವಿತುಂ=ರಕ್ಷಿಸುವುದಕ್ಕಾಗಿ, ಕ್ಷಣಾಂತೇ=ಅತ್ಯಲ್ಪಕಾಲದಲ್ಲಿ ಓಷಧೀಃ=ಸಸ್ಯವಿಶೇಷಣಗಳನ್ನು, **ಅತನೋತ್=** ಸೃಷ್ಟಿಸಿದರು. ದೀಪ್ತಾಂಗುಷ್ಠಃ=ಪ್ರಕಾಶಮಾನವಾದ ಹೆಬ್ಬೆರಳುಳ್ಳ (ಹೆಬ್ಬೆಟ್ಟಿನ ಉಗುರುಳ್ಳ) ಶಿಲಾನೀಃ=ಬಂಡೆ**ಕಲ್ಲನ್ನು ಒಯ್ದಿರುವ**, ವರ್ಧಿತಸ್ತಂಬಿತಾಬ್ಧಿಃ, ವರ್ಧಿತ=ಉಕ್ಕಿರುವಂತಹ, ಸ್ತಂಭಿತ=ನಿಶ್ಚಲವಾಗಿ ಮಾಡಲ್ಪಟ್ಟ, ಅಬ್ಧಿಃ=ಸಮುದ್ರ**ವುಳ್ಳ**, **ಅತುಲಬಲಚಣೌ**, ಅತುಲ=ಎಣೆಯಿಲ್ಲದ, ಬಲ=ಸಾಮರ್ಥ್ಯದಿಂದ, ಚಣೌ=ಪ್ರಸಿದ್ಧರಾದ, ಗಂಡವಾಟೌ=ಗಂಡವಾಟರೆಂಬ ಇಬ್ಬರು **ಅಣ್ಣತಮ್ಮಂದಿರಾದ** ಬ್ರಾಹ್ಮಣರು, ಯಸ್ಯ=ಯಾವ ಶ್ರೀಮಧ್ವಾಚಾರ್ಯರ, ಅಂಗುಲ್ಯಾಃ=ಕೇವಲ ಒಂದೇ ಬೆರಳಿನ, **ಚಾಲನೆ=ಅಲ್ಲಾಡಿಸುವುದರಲ್ಲಿ**, ನ ಅಲಂ (ಅಭೂತಾಂ)=ಸಮರ್ಥರಾಗಲಿಲ್ಲವೋ, ಪ್ರಾಗ್ವಾಟಃ ವಾ=ಪ್ರಾಗ್ವಾಟನೆಂಬ **ಬ್ರಾಹ್ಮಣನೂ, ಅಂಗುಲ್ಯಾಃ** ಚಾಲನೇ ನ ಅಲಂ (ಅಭೂತ್)=ಒಂದೇ ಒಂದು ಬೆರಳನ್ನು ಅಲ್ಲಾಡಿಸಲೂ ಸಮರ್ಥನಾಗಲಿಲ್ಲ**ವೋ**, **ವಟೂಢಃ** =ಬಾಲಕನಾದ ಬ್ರಹ್ಮಚಾರಿಯಿಂದ (ಹೆಗಲಿನಮೇಲೆ) ಧರಿಸಲ್ಪಟ್ಟ, ಅಲಾವ್ಯೈಕಲೋಮಾ, **ಅಲಾವ್ಯ=(ಕತ್ತರಿಸಲೂ)** ಕಿತ್ತಲೂಬಾರದ, ಏಕ=ಒಂದೇ, ಒಂದಾದ, ಲೋಮಾ=ರೋಮವುಳ್ಳವರೂ ಆದ, ಸ್ತವ್ಯಃ=**ಮಹಾತ್ಮರಸ್ತುತಿಪಾತ್ರ**ರಾದ, ಸಃ=ಅಂತಹ ಶ್ರೀ ಮಧ್ವರು, ಮಮ=ನನ್ನ ಮನಸಿ=ಮನಸ್ಸಿನಲ್ಲಿ ಲಸೇತ್=ಪ್ರಕಾಶಿಸಲಿ.

**ತಾತ್ಪರ್ಯ** - ಗೋಮತೀ ನದೀತೀರದಲ್ಲಿ ಒಬ್ಬ ಶೂದ್ರರಾಜನಿದ್ದನು. ಅವನು ಮಹಾವೇದದ್ವೇಷಿಯಾಗಿದ್ದನು.

ಯಾರಾದರೂ ವೈದಿಕರಾದ ಶಾಸ್ತ್ರಜ್ಞ ಬ್ರಾಹ್ಮಣರು ಸಿಕ್ಕಿದರೆ ಅವನ ಹತ್ತಿರ 'ನಿಮ್ಮ ವೇದವೆಲ್ಲವೂ ಹುಚ್ಚರ ಬಡಬಡಿಕೆಯಂತೆ ಅಪ್ರಮಾಣವು. ಏತಕ್ಕೆಂದರೆ ವೇದದಲ್ಲಿ ಹೇಳಿದಂತೆ ಆಚರಿಸಿದರೆ ಫಲಪ್ರಾಪ್ತಿಯಾಗುವುದಿಲ್ಲ. ವೇದದಲ್ಲಿ ಒಂದು ಮಂತ್ರವಿದೆ. ಯಾ ಓಷಧೀಃ ಪೂರ್ವಜಾತಾದೇವೇಭ್ಯಸ್ತ್ರಿಯುಗಂ ಪುರಾ। ಮನ್ಯೆನು ಬಭ್ರೂಣಾಮಹಂ ಶತಂ ಧಾಮಾನಿ ಸಪ್ತ ಚ॥ (ಋಗ್ವೇದ ಅಷ್ಟಕ ೮ ಅಧ್ಯಾಯ ೫ ಋಕ್ ೧) ಯಾವುದಾದರೊಂದು ಧಾನ್ಯದ ಬೀಜವನ್ನು ಕೈಯಲ್ಲಿ ಹಿಡಿದುಕೊಂಡು ಈ ಮಂತ್ರವನ್ನು ಜಪಿಸಿ ಆ ಬೀಜವನ್ನು ಭೂಮಿಯಲ್ಲಿ ಬಿತ್ತಿದರೆ ಕೂಡಲೇ ಮೊಳಕೆ ಹೂವು ಕಾಯಿ (ಹಣ್ಣು) ಇತ್ಯಾದಿಗಳೆಲ್ಲವೂ ಹುಟ್ಟುತ್ತವೆ ಎಂದು ಹೇಳುತ್ತಾರೆ. ಆದರೆ ಈಗಿನವರು ಯಾರಾದರೂ ಆ ಮಂತ್ರವನ್ನು ಹೇಳಿ ಮೊಳಕೆ ಬರಿಸಬಲ್ಲರೇ ? ಯಾರಿಗೂ ಸಾಧ್ಯವಿಲ್ಲ. ಆದ್ದರಿಂದ ಅಸತ್ಯವಾದ ವಿಷಯವನ್ನು ಹೇಳುವ ಈ ವೇದವಾಕ್ಯವು ಅಪ್ರಮಾಣವು. ಅದರಂತೆ ಎಲ್ಲಾ ವೇದವೂ ಅಪ್ರಮಾಣವು ಎಂದು ಹೇಳಿದಾಗ, ಆ ಆಕ್ಷೇಪವನ್ನು ಆಚಾರ್ಯರು ಸಹಿಸಲಿಲ್ಲ 'ಅಧಿಕಾರ ವಿಶೇಷವಿದ್ದವರು ಆಯಾ ಮಂತ್ರವನ್ನು ಜಪಿಸಿದರೆ ಅಲ್ಲಲ್ಲಿ ಹೇಳಿದ ಫಲವು ಸಿಗುತ್ತದೆ.' ಎಂದು ಹೇಳಿ ಆಚಾರ್ಯರು ಹೆಸರುಕಾಳುಗಳನ್ನು ಕೈಯಲ್ಲಿ ಹಿಡಿದುಕೊಡು 'ಯಾ ಓಷಧೀಃ' ಇತ್ಯಾದಿ ಓಷಧೀ ಸೂಕ್ತವನ್ನು ಜಪಿಸಿ ಒಂದು ಕ್ಷಣದಲ್ಲಿ ಹೆಸರುಗಿಡವನ್ನು ಉತ್ಪಾದಿಸಿ ತೋರಿಸಿದರು. ಈ ವಿಷಯವನ್ನು 'ಯಃ ವೇದಮಾನಂ ಸವವಿತುಂ ಕ್ಷಣಾಂತೇ ಓಷಧೀಃ ಅತನೋತ್' ಎಂಬ ವಾಕ್ಯದಿಂದ ಹೇಳಿದ್ದಾರೆ.

ಒಂದಾನೊಂದು ದಿವಸ ರಾತ್ರಿ ಆಚಾರ್ಯರು ಪ್ರವಚನ ಮಾಡುತ್ತಿದ್ದಾಗ ದೀಪವು ಆರಿಹೋಯಿತು. ಆಚಾರ್ಯರು ತನ್ನ ಬಲಗೈ ಹೆಬ್ಬೆರಳನ್ನು ಮುಂದೆ ಚಾಚಿ ಆ ಬೆರಳಿನ ಉಗುರಿನ ಪ್ರಕಾಶದಿಂದ ಶಿಷ್ಯರು ಪುಸ್ತಕವನ್ನು ನೋಡಿ ಓದುವಂತೆ ಮಾಡಿದರು. ಈ ವಿಷಯವನ್ನು 'ದಿಪ್ತಾಂಗುಷ್ಠಃ' ಎಂಬ ಪದದಿಂದ ತಿಳಿಸಿದ್ದಾರೆ.

ತುಂಗಾನದಿಯ ಹತ್ತಿರದಲ್ಲಿ (ಭದ್ರಾನದಿಯ ಹತ್ತಿರ ಕಳಸ ಎಂಬ ಊರಲ್ಲಿ) ಸಾವಿರಾರು ಜನರು ಸೇರಿ ಒಂದು ಬಂಡೆಯನ್ನು ನದಿಯಲ್ಲಿ ಪ್ರವಾಹ ಮಧ್ಯದಲ್ಲಿ ಸ್ಥಾಪಿಸಲು ದೂರದಿಂದ ಸಾಗಿಸುತ್ತಾ ಇದ್ದರು. ಆದರೆ ನದೀ ತೀರವು ಇನ್ನೂ ಬಹಳ ದೂರದಲ್ಲಿರುವಾಗಲೇ ದೊಡ್ಡಗಾತ್ರದ ಆ ಬಂಡೆಯನ್ನು ಒಯ್ಯಲಾರದೆ ಬಿಟ್ಟುಬಿಟ್ಟರು. ಆಗ ಶ್ರೀ ಮಧ್ವಾಚಾರ್ಯರು ಆ ಮಹಾಶಿಲೆಯನ್ನು ಒಂದೇ ಕೈಯಿಂದ ಎತ್ತಿ ತೆಗೆದುಕೊಂಡು ಹೋಗಿ ನದೀ ಪ್ರವಾಹದ ಮಧ್ಯದಲ್ಲಿಟ್ಟರು. ಈ ಕಥೆಯನ್ನು 'ಶಿಲಾನೀಃ' ಎಂಬ ಪದದಿಂದ ಸೂಚಿಸಿದ್ದಾರೆ.

ಒಂದು ಸೂರ್ಯಗ್ರಹಣದ ಸಮಯದಲ್ಲಿ ಆಚಾರ್ಯರು ಸಮುದ್ರತೀರದಲ್ಲಿ ಮರಳಿನ ಮೇಲೆ ಕುಳಿತು ಐತರೇಯ ಉಪನಿಷತ್ತಿನ (ಐತರೆಯ ಶಾಖೆಯು) ಸೂಕ್ತಗಳನ್ನು ಪಠಿಸಿ ಶ್ರುತ್ಯರ್ಥವನ್ನು ವಿವರಿಸಿದರು. ಈ ವಿಷಯವನ್ನು 'ಶ್ರುತಿವಿವರಣಕೃತ್' ಎಂಬ ಪದದಿಂದ ಸೂಚಿಸಿದ್ದಾರೆ.

ಆಚಾರ್ಯರು ಸಮುದ್ರದ ಬಳಿಯಲ್ಲಿ ಋಕ್‌ಶಾಖೆಯ ಸೂಕ್ತಗಳನ್ನು ಈರೀತಿ ವಿವರಿಸುತ್ತಾ ಇರುವಾಗ ಅಲೆಗಳ ಸದ್ದನ್ನು ಮಾಡುತ್ತಾ ಸಮುದ್ರವು ಉಕ್ಕಿಬರುತ್ತಿತ್ತು. ಆಚಾರ್ಯರು ತಮ್ಮ ಕಡೆಗಣ್ಣಿನಿಂದ ನೋಡಿದ ಕೂಡಲೇ ಸಮುದ್ರವು ತನ್ನ ಆಟೋಪವನ್ನು ಬಿಟ್ಟು ಕೆರೆಯ ನೀರಿನಂತೆ ಶಾಂತವಾಯಿತು. ಆಚಾರ್ಯರು ಸಮುದ್ರದಲ್ಲಿ ಸ್ನಾನಮಾಡುವಾಗ ನೀರಿನಲ್ಲಿ ಅಲೆಗಳ ಮಧ್ಯದಲ್ಲಿ ಮುಳುಗುತ್ತಿದ್ದರು. ಅಲೆಗಳ ಹೊಡೆತದಿಂದ ಸ್ವಲ್ಪಬಿದ್ದು ಹೋಗುವಂತಾಗುತ್ತಿದ್ದರು. ಆಗ ಅಲ್ಲಿದ್ದ ದುರ್ಜನರು 'ಓಹೋ ತ್ರಿಲೋಕವಿಜಯಿಗಳಾದ ನಿಮ್ಮ ಗುರುಗಳು ಸಣ್ಣ ಅಲೆಯ ಹೊಡೆತದಿಂದಲೇ ಮುಗ್ಗರಿಸಿ ಬೀಳುತ್ತಾ ಇದ್ದಾರೆ' ಎಂದು ಅಪಹಾಸ ಮಾಡಿದರು. ಆಗ ಆಚಾರ್ಯರು ತನ್ನ ಕಡೆಗಣ್ಣಿನ ನೋಟದಿಂದ ಸಮುದ್ರವನ್ನು ಸ್ತಂಭಿಸಿದರು. ಈ ಕಥೆಗಳನ್ನು 'ವರ್ಧಿತಸ್ತಂಭಿತಾಬ್ಧಿಃ ಎಂಬ ವಿಶೇಷಣದಿಂದ ಸೂಚಿಸಿದ್ದಾರೆ.

ಗಂಡವಾಟ ಕುಲದಲ್ಲಿ (ಕೊಡಿಂಜಾಡಿಕುಲ) ಹುಟ್ಟಿದ ಇಬ್ಬರು ಸೋದರರಾದ ಮಲ್ಲರ್ಲು ಆಚಾರ್ಯರ ಬಲವನ್ನು ಪರೀಕ್ಷಿಸಲು ಬಂದು ಸೋತರು. ಆಚಾರ್ಯರು ಬೆರಳನ್ನು ನೆಲದ ಮೇಲಿಟ್ಟು "ಈ ಬೆರಳನ್ನು ಅಲ್ಲಾಡಿಸಿ ನೋಡೋಣ" ಎಂದು ಹೇಳಿದಾಗ ಅವರು ಬೆರಳನ್ನೂ ಅಲ್ಲಾಡಿಸಲಾರದೆ ಸೋತು ಹೋದರು. ಅತುಲ ಬಲಚಣೌಗಂಟವಾಟೌ

ಯಸ್ಯ ಅಂಗುಲ್ಯಾಃ ಚಾಲನೇ ನಾಲಂ, ಎಂಬ ವಿಶೇಷಣದಿಂದ ಈ ಕಥೆಯನ್ನು ಸೂಚಿಸಿದ್ದಾರೆ. ಪ್ರಾಗ್‌ವಾಟನೆಂಬ (ಮೂಡೆಂಬಡಿತ್ತಾಯ) ಮಲ್ಲನೂ ಕೂಡ ಆಚಾರ್ಯರನ್ನು ಪರೀಕ್ಷಿಸಲು ಬಂದು ಸೋತನು. ಅವನೂ ಕೂಡ ಆಚಾರ್ಯರ ಬೆರಳನ್ನು ಅಲ್ಲಾಡಿಸಲು ಅಸಮರ್ಥನಾದನು. 'ಪ್ರಾಗ್ವಾಟೋ ವಾ' ಎಂಬ ವಾಕ್ಯದಿಂದ ಈ ಕಥೆಯನ್ನು ಸೂಚಿಸಿದ್ದಾರೆ. ಇಂತಹ ವಜ್ರಕಾಯರಾದರೂ ಒಮ್ಮೆ ಹೂವಿಗಿಂತ ಹಗುರವಾಗಿ ಅವರು ಒಬ್ಬ ಬ್ರಹ್ಮಚಾರಿ **ಬಾಲಕನ** ಹೆಗಲ ಮೇಲೇರಿ ಕುಳಿತು ಅಲ್ಲಿದ್ದ ನರಸಿಂಹದೇವಾಲಯಕ್ಕೆ ಪ್ರದಕ್ಷಿಣೆ ಬಂದರು. ಈ ಕಥೆಯನ್ನು 'ವಟೂಢಃ' ಎಂಬ ವಾಕ್ಯದಿಂದ ಸೂಚಿಸಿದ್ದಾರೆ. ಅಕ್ಕಸಾಲಿಗರ ಚಿಮುಟದಿಂದ ಬಲವಾಗಿ ಹಿಡಿದೆಳೆದರೂ ಅವರ ಒಂದು ರೋಮವನ್ನು ಕಿತ್ತಲಾಗಲಿಲ್ಲ, ಯಾವ ಮಲ್ಲನಿಗೂ ಆಯುಧಕ್ಕೂ ಅವರ ಒಂದು ಕೂದಲೆಳೆಯನ್ನು ಕೊಂಕಿಸಲಾಗಲಿಲ್ಲ, ಇಂತಹ ಮಧ್ವಮುನೀಂದ್ರರು ನನ್ನ ಮನದಲ್ಲಿ ಬೆಳಗಲಿ ಎಂದು ಶ್ರೀನಾರಾಯಣಪಂಡಿತಾಚಾರ್ಯರು ಪ್ರಾರ್ಥಿಸಿದ್ದಾರೆ.

**ವಿಗ್ರಹ** – ಸ್ತೋತುಂ ಯೋಗ್ಯಃ ಸ್ತವ್ಯಃ ವೇದಸ್ಯ ಮಾನಂ ವೇದಮಾನಂ ತತ್ (ವೇದಇತಿ) ಮಾನಂ ತತ್ ಕ್ಷಣಸ್ಯ ಅಂತಃ ಕ್ಷಣಾಂತಃ ತಸ್ಮಿನ್, ದೀಪ್ತಃ ಅಂಗುಷ್ಠಃ ಯಸ್ಯ ಸಃ ದಿಪ್ತಾಂಗುಷ್ಠಃ ಶಿಲಾಂ ನಯತೀತಿ ಶಿಲಾನೀಃ ಶ್ರುತೀನಾಂವಿವರಣಂ ಶ್ರುತಿವಿವರಣಂ, ಶ್ರುತಿವಿವರಣಂ, ಕರೋತೀತಿ ಶ್ರುತಿವಿವರಣಕೃತ್, ವರ್ಧಿತಶ್ಚಾಸೌಸ್ತಂಭಿತಶ್ಚ ವರ್ಧಿತಸ್ತಂಭಿತಃ, ವರ್ಧಿಸ್ತಂಭಿತಃ ಅಬ್ಧಿಃ ಯೇನ ಸಃ ವರ್ಧಿತಸ್ತಂಭಿತಾಬ್ಧಿಃ, ಅತುಲಂ ಚ ತತ್ ಬಲಂ ಚ ಅತುಲಬಲಂ , ಅತುಲಬಲೇನ ವಿತ್ತೌ ಅತುಲಬಲಚಣೌ, ತೌ, ವಟುನಾ ಊಢಃ ವಟೂಢಃ, ಲವಿತುಂ ಯೋಗ್ಯಂ ಲಾವ್ಯಂ, ನಲಾವ್ಯಂ ಅಲಾವ್ಯಂ, ಏಕಂ ಚ ತತ್ ಲೋಮ ಚ ಏಕಲೋಮ, ಅಲಾವ್ಯಂ ಏಕಲೋಮ ಯಸ್ಯ ಸಃ ಅಲಾವ್ಯೈಕಲೋಮಾ;

**ಕ್ರಿಯಾಪದ** - ಅತನೋತ್ ಅತನುತಾಂ ಅತನ್ವನ್, ಅತನೋಃ ಅತನುತಂ ಅತನುತ, ಅತನವಂ ಅತನುವ ಅತನ್ವ ಅತನುಮ ಅತನ್ಮ ತನು ವಿಸ್ತಾರೇ ಪರಸ್ಮೈಪದಿ ಅನದ್ಯತನಲಙ್ ಪ್ರಥಮ ಪುರುಷ ಏಕವಚನಂ **ಲಸೇತ್** (೧೧) ನೆಯ ಪದ್ಯದ ವ್ಯಾಖ್ಯಾನದಲ್ಲಿ ಈ ಧಾತುರೂಪದ ವಿವರಣೆ ಬಂದಿದೆ.

**ಪ್ರಯೋಗ** – ಯೇನ ವೇದಮಾನಂ ಸಮವಿತುಂ ಕ್ಷಣಾಂತೇ ಓಷಧ್ಯಃ ಅತನ್ಯಂತ, ದೀಪ್ತಾಂಗುಷ್ಠೇನ, ಶಿಲಾನ್ಯಾ, ಶ್ರುತಿವಿವರಣಕೃತಾ, ವರ್ಧಿತಂಸ್ತಭಿತಾಬ್ಧಿನಾ, ಅತುಲಬಲಚಣಾಭ್ಯಾಂ ಗಂಡವಾಟಾಭ್ಯಾಂ ಯಸ್ಯ**ಅಂಗುಲ್ಯಾಃ** ಚಾಲನೇ ನಾಲಮಭಾವಿ, ಪ್ರಾಗ್ ವಾಟೇನ ವಾ (ಅಂಗುಲ್ಯಾಃ ಚಾಲನೇ ನ ಅಲಮಭಾವಿ) ವಟೂಢೇನ **ಅಪಿ** ಅಲಾವ್ಯೈಕಲೋಮ್ನಾ, ಸ್ತವ್ಯೇನ ತೇನ ಮಮ ಮನಸಿ ಲಸ್ಯೇತ.

**ಭಾವಪ್ರಕಾಶಿಕಾ ಶಬ್ದಾರ್ಥ** – ಯಃ ಶ್ರೀಮಧ್ವಃ=ಯಾವ ಶ್ರೀ ಮಧ್ವಾಚಾರ್ಯರು, ವೇದಮಾನಂ, **ಭಾವಪ್ರಧಾನೋ** ನಿರ್ದೇಶಃ= ವೇದಮಾನಂ ಎಂಬಲ್ಲಿ ಧರ್ಮವೇ ಪ್ರಧಾನವಾಗಿ ಉಳ್ಳ ನಿರ್ದೇಶನವು (ಅಂದರೆ **ವೇದದ ಮಾನತ್ವ** ಎಂದು ಅರ್ಥ) ವೇದಪ್ರಾಮಾಣ್ಯಮಿತ್ಯರ್ಥಃ=ವೇದಪ್ರಾಮಾಣ್ಯ ಎಂದು ಅರ್ಥ. ವೇದಾಖ್ಯಂ **ಪ್ರಮಾಣಮಿತಿವಾ=ಅಥವಾ** ವೇದವೆಂಬ ಪ್ರಮಾಣವನ್ನು ಎಂದಾದರೂ ಅರ್ಥ. ಸಮವಿತುಂ ರಕ್ಷಿತುಂ=ಸಮವಿತುಂ **ಎಂದರೆ ರಕ್ಷಿಸುವುದಕ್ಕೋಸ್ಕರ** ಎಂದು ಅರ್ಥ. ಓಷಧೀಃ=ಓಷಧಿವಿಶೇಷಾನ್ ಓಷಧೀಃ ಎಂದರೆ ಧಾನ್ಯ ವಿಶೇಷವನ್ನು **ಎಂದು ಅರ್ಥ. (ಹೆಸರುಕಾಳು** ಎಂದು ಸಾಂಪ್ರದಾಯಿಕರು ಹೇಳುತ್ತಾರೆ) ಕ್ಷಣಾಂತೇ=ಒಂದು ಕ್ಷಣಮುಗಿಯುವುದರ **ಒಳಗಾಗಿ, ಅತನೋತ್** ಅಕರೋತ್=ಅತನೋತ್ ಎಂದರೆ ಮಾಡಿದರು ಎಂದು ಅರ್ಥ. ಅಯಂಭಾವಃ=**ಇಲ್ಲಿಯ ಅಭಿಪ್ರಾಯವು ಇದು**, ವೇದೇಶ್ರೂಯತೇ=ವೇದದಲ್ಲಿ ಕೇಳಲ್ಪಡುತ್ತಿದೆ. ಕಿಂಚಿದ್ ಬೀಜಂ=**ಯಾವುದೋ ಬೀಜವನ್ನು, ಹಸ್ತೇ=ಕೈಯಲ್ಲಿ**, ನಿಧಾಯ=ಇಟ್ಟುಕೊಂಡು, 'ಯಾ ಓಷಧೀಃ ಪೂರ್ವಜಾತಾ ದೇವೇಭ್ಯಸ್ತ್ರಿಯುಗಂ **ಪುರಾ ಇತ್ಯಾದಿಸೂಕ್ತಂ ಜಪಿತ್ವಾ**=ಯಾ ಓಷಧೀಃ ಪೂರ್ವಜಾತಾದೇವೇಭ್ಯ ಸ್ತ್ರಿಯುಗಂ ಪುರಾ' ಇತ್ಯಾದಿ **ಸೂಕ್ತವನ್ನು ಜಪಿಸಿ, ಭೂಮೌ ಉಪ್ತಂ ಚೇತ್**=ನೆಲದಮೇಲೆ ಬಿತ್ತಿದರೆ, ಸದ್ಯಃ ಅಂಕುರಪುಷ್ಪಫಲಾದ್ಯುತ್ಪತ್ತಿಃ ಭವತಿ=**ಕೂಡಲೇ ಮೊಳಕೆ ಹೂವು ಹಣ್ಣು ಮುಂತಾದುದರ** ಉತ್ಪತ್ತಿಯು ಆಗುತ್ತದೆ, ಇತಿ ಶ್ರೂಯತೇ=ಎಂದು ಕೇಳಲ್ಪಡುತ್ತದೆ. ಇದಾನೀಂತನೇನ=**ಈಗಿನ ಕಾಲದವನಿಂದ**, ತಥಾ ಕೃತೇಽಪಿ=ಹಾಗೆ

ಮಾಡಿದರೂ, ತತ್ ನ ದೃಶ್ಯತೇ=ಆ ಮೊಳಕೆ ಮುಂತಾದುದರ ಉತ್ಪತ್ತಿಯು ಕಾಣಲ್ಪಡುವುದಿಲ್ಲ, **ಇತಿ** ಇದಂ ವಾಕ್ಯಂ ಅಮಾನಂ=ಆದ್ದರಿಂದ ಈ ವಾಕ್ಯವು ಪ್ರಮಾಣವಲ್ಲ, ತಥಾಚ=ಆದುದರಿಂದ ತದ್ವತ್=ಅಪ್ರಮಾಣವಾದ ವಾಕ್ಯದಂತೆ, ಸರ್ವವೇದವಾಕ್ಯಂ=ಎಲ್ಲಾ ವೇದವಾಕ್ಯವೂ, ಅಮಾನಂ=ಪ್ರಮಾಣವಲ್ಲ, ಇತಿ=ಎಂದು, ಕೇನಚಿತ್ ದುಷ್ಟಪ್ರಭುಣಾ=ಯಾವನೋ ಒಬ್ಬ ದುಷ್ಟರಾಜನಿಂದ ಉದಿತೇ (ಸತಿ)=ಹೇಳಲ್ಪಟ್ಟಾಗ, ತದಾಕ್ಷೇಪಂ=ಅವನ ಆ ಆಕ್ಷೇಪವನ್ನು, ಅಸಹಿಷ್ಣುಃ=ಸಹಿಸಲಾರದ, ಶ್ರೀ ಮಧ್ವಃ=ಶ್ರೀಮಧ್ವಾಚಾರ್ಯರು, ಅಧಿಕಾರವಿಶೇಷವತಃ=ಅಧಿಕಾರವಿಶೇಷವಿದ್ದವನಿಗೆ ಫಲಿಷ್ಯತಿ=ಫಲಿಸುವುದು, ಇತಿ ಉಕ್ತ್ವಾ=ಎಂದು ಹೇಳಿ, ತದ್ ಬೀಜಂ=ಆ ಬೀಜವನ್ನು, ಸ್ವಯಂ ಆದಾಯ=ತಾನೇ ತೆಗೆದುಕೊಂಡು ತತ್ ಸೂಕ್ತಂ ಜಪಿತ್ವಾ=ಆ ಸೂಕ್ತವನ್ನು ಜಪಿಸಿ, ಕ್ಷಣೇನ=ಒಂದು ಕ್ಷಣದಿಂದ (ದಲ್ಲಿ) ಅಂಕುರಪುಷ್ಪಾದೀನಿ ಕೃತವಾನಿತಿ=ಮೊಳಕೆ ಹೂವು ಮುಂತಾದವುಗಳನ್ನು ಮಾಡಿದರು ಎಂದು (ಭಾವವು) ದೀಪ್ತಾಂಗುಷ್ಠಃ, ದೀಪ್ತಾಂಗುಷ್ಠಃ ಎಂದರೆ ದೀಪ್ತಃ ಪ್ರಕಾಶಮಾನಃ=ದೀಪ್ತಃ ಎಂದರೆ ಪ್ರಕಾಶಿಸುತ್ತಿರುವ, ಅಂಗುಷ್ಠಃ ಅಂಗುಷ್ಠನಖಃ=ಅಂಗುಷ್ಠಃ ಎಂದರೆ ಹೆಬ್ಬೆರಳಿನ ಉಗುರು, ಯಸ್ಯ ಸಃ=ಯಾವನಿಗೆ ಇದೆಯೋ ಅವನು, ತಥಾ=ಹಾಗೆ ಅಂದರೆ ದೀಪ್ತಾಂಗುಷ್ಠಃ ಎಂಬ ಪದದಿಂದ ವಾಚ್ಯರಾಗುತ್ತಾರೆ. ಕದಾಚಿತ್=ಒಂದಾನೊಂದು ದಿನ, ರಾತ್ರೌ=ರಾತ್ರಿಯಲ್ಲಿ, ವ್ಯಾಖ್ಯಾನ ಸಮಯೇ=ಪ್ರವಚನ ಮಾಡುತ್ತಿರುವಾಗ, ದೀಪೇ=ದೀಪವು, ಪ್ರಶಾಂತೇಸತಿ=ಆರಿ ಹೋಗಲಾಗಿ, ಸ್ವಾಂಗುಷ್ಠನಖರೋಚಿಷಾ=ತನ್ನ ಹೆಬ್ಬೆರಳಿನ ಉಗುರಿನ ಬೆಳಕಿನಿಂದ, ಶಿಷ್ಯಾನ್=ಶಿಷ್ಯರನ್ನು, ವಾಚಯಾಮಾಸ=ಓದಿಸಿದರು. ಇತಿಭಾವಃ=ಎಂದು ಅಭಿಪ್ರಾಯವು. ಶಿಲಾನೀಃ ಎಂದರೆ, ಶಿಲಾಂ ಪಾಷಾಣಂ=ಶಿಲಾಂ ಅಂದರೆ ಬಂಡೆಕಲ್ಲನ್ನು, ನಯತಿ ಪ್ರಾಪಯತೀತಿ=ನಯತಿ ಅಂದರೆ ಒಯ್ದು ತಲುಪಿಸುತ್ತಾರೆ ಎಂದು, ಸಃ=ಆ ಮಧ್ವಾಚಾರ್ಯರು ತಥಾ=ಶಿಲಾನೀಃ ಎಂಬ ಪದದಿಂದ ಹೇಳಲ್ಪಡುತ್ತಾರೆ. ಕ್ವಚಿತ್=ಎಲ್ಲೋ ಒಂದು ಕಡೆ, ತುಂಗಭದ್ರಾತೀರೇ=ತುಂಗಭದ್ರಾನದಿಯ ದಡದಲ್ಲಿ ಸ್ಥಾಪನಾರ್ಥಂ=ಸ್ಥಾಪಿಸುವುದಕ್ಕಾಗಿ ಸಹಸ್ರಸಂಖ್ಯೈಃ=ಒಂದು ಸಾವಿರಮಂದಿ, ಪುರುಷೈಃ=ಮನುಷ್ಯರಿಂದ, ಅನೀತಾಂ=ತರಲ್ಪಟ್ಟ , ಅಶಕ್ತ್ಯಾ=ಸಾಮರ್ಥ್ಯ ಇಲ್ಲದುದರಿಂದ, ಮಧ್ಯೇ=ಮಧ್ಯದಲ್ಲಿ ತ್ಯಕ್ತಾಂ=ಬಿಡಲ್ಪಟ್ಟ, ಶಿಲಾಂ ಬಂಡೆಯನ್ನು, ದೃಷ್ಟ್ವಾ=ನೋಡಿ, ಶ್ರೀಮಧ್ವಃ=ಶ್ರೀ ಮಧ್ವಾಚಾರ್ಯರು ತಾಂ=ಆ ಬಂಡೆಯನ್ನು, ಅನಾಯಸೇನ=ಶ್ರಮವಿಲ್ಲದೆ, ತುಂಗಭದ್ರಾತೀರಂ=ತುಂಗಭದ್ರೆಯ ದಡಕ್ಕೆ, ಪ್ರಾಪಿತವಾನ್=ತಲುಪಿಸಿದರು, ಇತಿ ಭಾವಃ=ಎಂದು ಅಭಿಪ್ರಾಯವು. ಶ್ರುತಿವಿವರಣಕೃತ್ ಎಂದರೆ, ಶ್ರುತೇಃ ಋಕ್ ಶಾಖಾಗತಸೂಕ್ತವಿಶೇಷಸ್ಯ=ಶ್ರುತೇಃ ಎಂದರೆ ಋಕ್‌ಶಾಖೆಯಲ್ಲಿರುವ ~~ವಿಶೇಷವಾದ ಸೂಕ್ತದ, ವಿವರಣಂ, ವ್ಯಾಖ್ಯಾನಂ=ವಿವರಣಂ ಎಂದರೆ ವ್ಯಾಖ್ಯಾನವನ್ನು, ಕರೋತಿ ಇತಿ=ಮಾಡುತ್ತಾರೆ.~~ ಎಂದು ಸಃ=ಆ ಮಧ್ವರು ತಥಾ=ಹಾಗೆ (ಶ್ರುತಿವಿವರಣ ಕೃತ್ ಎಂಬ ಪದದಿಂದ ವಾಚ್ಯರು ಆಗುತ್ತಾರೆ.) ವರ್ಧಿತಸ್ತಂಭಿತಾಬ್ಧಿಃ ಎಂದರೆ, ವರ್ಧಿತಃ ಅಭಿವೃದ್ಧಃ ವರ್ಧಿತಃ ಎಂದರೆ ಅಭಿವೃದ್ಧಿಹೊಂದಿದ, ಸ್ತಂಭಿತಃ ನಿಶ್ಚಲೀಕೃತಃ=ಸ್ತಂಭಿತಃ ಎಂದರೆ ನಿಶ್ಚಲವಾಗಿ ಮಾಡಲ್ಪಟ್ಟ ಅಬ್ಧಿಃ ಸಮುದ್ರವು, ಯೇನ=ಯಾವನಿಂದಲೋ, ಸಃ=ಅಭಿವೃದ್ಧಿ ಹೊಂದಿದ ಸಮುದ್ರವನ್ನು ನಿಶ್ಚಲವಾಗಿ ಮಾಡಿದವನು (ತಥಾ=ವರ್ಧಿತಸ್ತಂಭಿತಾಬ್ಧಿಃ ಎಂಬ ಪದದಿಂದ ಹೇಳಲ್ಪಡುತ್ತಾನೆ) ವಧಿತಸ್ತಂಭಿತಾಬ್ಧಿಃ ಎಂಬಲ್ಲಿ ಮೊದಲು ಅಭಿವೃದ್ಧಿ ಹೊಂದಿದ ಅನಂತರ ಅಲ್ಲಾಡದಂತೆ ಮಾಡಲ್ಪಟ್ಟ ಸಮುದ್ರವು ಯಾವನಿಂದ ಹೀಗಾಯಿತೋ ಅವನು ಆ ಪದದಿಂದ ವಾಚ್ಯನು ಎಂಬ ಅರ್ಥದಲ್ಲಿ, ಪೂರ್ವಕಾಲೈ ಕಸರ್ವಜರತ್ ಇತ್ಯಾದಿ ಸೂತ್ರದಿಂದ ಸಮಾಸ, ವಾಖ್ಯಾನಕಾಲೇ=ಆಚಾರ್ಯರ ಪ್ರವಚನಕಾಲದಲ್ಲಿ ತರಂಗೈಃ=ಅಲೆಗಳಿಂದ, ಉದ್ಘೋಷಯಂತಂ= ಗರ್ಜಿಸುತ್ತಿರುವ, ಅಬ್ಧಿಂ=ಸಮುದ್ರವನ್ನು, ಅಪಾಂಗೇನ= ಕಡೆಗಣ್ಣಿನಿಂದ, ದೃಷ್ಟ್ವಾ=ನೋಡಿ, ತಟಾಕಜಲವತ್=ಕೆರೆಯ ನೀರಿನಂತೇ, ನಿಶ್ಚಲಂ ಅಕರೋತ್ ಇತಿಭಾವಃ=ಅಲ್ಲಾಡದಂತೆ ಮಾಡಿದರು ಎಂದು ಅಭಿಪ್ರಾಯವು. ಅತುಲಬಲಚಣೌ ಎಂದರೆ, ಅತುಲಬಲೇನ ಅಸದೃಶಸಾಮರ್ಥ್ಯೇನ=ಅತುಲಬಲೇನ ಎಂದರೆ ಎಣೆಯಿಲ್ಲದ ಸಾಮರ್ಥ್ಯದಿಂದ ಎಂದು ಅರ್ಥ, (ವಿತ್ತೌ) ಪ್ರಸಿದ್ಧೌ=ವಿತ್ತೌ ಎಂದರೆ ಪ್ರಸಿದ್ಧರಾದ, ತೇನ ವಿತ್ತಶ್ಚುಂಚುಪ್ ಚಣಪೌ ಇತಿ ಚಣಪ್ ಪ್ರತ್ಯಯಃ=ಅಸಾಧಾರಣ ಸಾಮರ್ಥ್ಯದಿಂದ ವಿತ್ತರು, ಅಂದರೆ ಪ್ರಸಿದ್ಧರು ಎಂಬ ಅರ್ಥದಲ್ಲಿ ತೇನವಿತ್ತಶ್ಚುಂಚುಪ್ ಚಣಪೌ ಎಂಬ ಸೂತ್ರದಿಂದ ಚಣಪ್ ಪ್ರತ್ಯಯ, ಗಂಡವಾಟೌ ಗಂಡವಾಟಾಖ್ಯೌ ವಿಪ್ರೌ=ಗಂಡವಾಟೌ ಎಂದರೆ ಗಂಡವಾಟರೆಂಬ ಹೆಸರುಳ್ಳ ಇಬ್ಬರು ಬ್ರಾಹ್ಮಣರು, ಯಸ್ಯ= ಶ್ರಿಮಧ್ವಸ್ಯ ಯಸ್ಯ ಎಂದರೆ ಶ್ರೀ ಮಧ್ವರ, ಅಂಗುಲ್ಯಾಃ ಅಂಗುಲಿ ಮಾತ್ರಸ್ಯ=ಅಂಗುಲ್ಯಾ ಎಂದರೆ ಒಂದೇ ಒಂದು ಬೆರಳಿನ, ಚಾಲನೇ=ಅಲ್ಲಾಡಿಸುವ ವಿಷಯದಲ್ಲಿ ನಾಲಂ ನ ಸಮರ್ಥೌ=ನಾಲಂ ಎಂದರೆ ಸಮರ್ಥರಲ್ಲದವರು,

(ಅಭೂತಾಂ ಆದರು) ಧರಾಯಾಂ=ನೆಲದ ಮೇಲೆ, ಅಂಗುಲಿಂ ನಿಕ್ಷಿಪ್ಯ=ಬೆರಳನ್ನು ಇಟ್ಟು, ಇಯಂ=ಈ ಬೆರಳು, ಉದ್ಧ್ರಿಯತಾಂ=ಎತ್ತಲ್ಪಡಲಿ, ಇತಿ=ಎಂದು, ಮಧ್ವೇನ ಉಕ್ತೇ (ಸತಿ)=ಮಧ್ವಾಚಾರ್ಯರಿಂದ ಹೇಳಲ್ಪಟ್ಟಾಗ, ತಾಂ ಉದ್ಧರ್ತುಂ=ಆ. ಬೆರಳನ್ನು ಎತ್ತಲು ಕಂಪನೇಪಿ=ಅಲ್ಲಾಡಿಸುವ ವಿಷಯದಲ್ಲಿಯೂ ಕೂಡ, ನ ಸಮರ್ಥೌ ಇತಿಭಾವಃ=ಸಮರ್ಥರಲ್ಲ ಎಂದು ಅಭಿಪ್ರಾಯ. ಪ್ರಾಗ್ ವಾಟನೆಂಬುವನು ಕೂಡ, ಅಂಗುಲೀಚಾಲನಾಯ ನಾಲಂ ಇತ್ಯರ್ಥಃ=ಬೆರಳನ್ನು ಅಲ್ಲಾಡಿಸಲೂ ಸಮರ್ಥನಾಗಲಿಲ್ಲ ಎಂದು ಅರ್ಥ. ವಟೂಢೋ ವಟುನಾ ಕೇನಚಿದ್ ಬಾಲಕೇನ ಊಢಃ ಧೃತಃ= ವಟೂಢಃ ಎಂದರೆ ಬ್ರಹ್ಮಚಾರಿಯಾದ ಯಾವನೋ ಒಬ್ಬ ಬಾಲಕನಿಂದ ಧರಿಸಲ್ಪಟ್ಟವರು, ಅತಿಲಾಘವವಾನ್ ಇತಿಭಾವಃ=ಅತಿಶಯವಾದ ಹಗುರತನ (ತೂಕ ಕಡಿಮೆಯಾಗುವಿಕೆ) ಉಳ್ಳವರು ಎಂದು ಅಭಿಪ್ರಾಯ. ಅಪಿ=ಮತ್ತು ಅಲಾವ್ವೈ ಕಲೋಮಾ ಎಂದರೆ ಅಲಾವ್ಯಂ ಅಯಸಾಪಿ ಅಚ್ಛೇದ್ಯಂ=ಅಲಾವ್ಯಂ ಎಂದರೆ ಕಬ್ಬಿಣದಿಂದಲೂ (ಕಬ್ಬಿಣದ ಚಿಮುಟದಿಂದಲೂ) ಛೇದಿಸಲು ಶಕ್ಯವಲ್ಲದ, ಏಕಂ=ಒಂದು, ಲೋಮ=ಕೇಶವು), ಯಸ್ಯ ಸಃ=ಯಾವನಿಗೆ ಇದೆಯೋ ಅವನು, ಯಾವನ ಒಂದೇ ಒಂದು ಕೂದಲು ಮತ್ತು ರೋಮವನ್ನು ಕೀಳಲು ಅಸಾಧ್ಯವಾಗಿದೆಯೋ ಅಂತಹವನು, ಏವಂವಿಧಚರಿತಃ=ಇಂತಹ ವ್ಯಾಪಾರವುಳ್ಳ, ಸ್ತವ್ಯಃ ಮಹತಾಂ ಸ್ತುತಿಯೋಗ್ಯಃ=ಸ್ತವ್ಯಃ ಎಂದರೆ ಹಿರಿಯರ ಸ್ತುತಿಪಾತ್ರರಾದ, ಶ್ರೀಮಧ್ವಃ = ಶ್ರೀ ಮಧ್ವಾಚಾರ್ಯರು, ಮಮ=ನನ್ನ, ಮನಸ್ಸಿನಲ್ಲಿ, ಲಸೇತ್ ಭಾತು=ಲಸೇತ್ ಪ್ರಕಾಶಿಸಲಿ ಎಂದು ಅರ್ಥ. ಲಸ ಕಾಂತೌ ಲಿಙ್=ಲಸೇತ್ ಎಂಬಲ್ಲಿ ಕಾಂತಿ ಅರ್ಥಕವಾದ ಲಸಧಾತುವಿನ ವಿಧಿಲಿಙ್ ಲಕಾರವು. ಉಪರಾಗೇ=ಗ್ರಹಣ ಸಮಯದಲ್ಲಿ, ಸಮುದ್ರೇ=ಸಮುದ್ರದಲ್ಲಿ, ಸ್ನಾತ್ವಾ=ಸ್ನಾನಮಾಡಿ, (ಆ) ಗಮನಸಮಯೇ=ಹಿಂದಿರುಗಿ ಬರುವಾಗ, ತತ್ರ=ಅಲ್ಲಿ, ಸ್ವಸ್ಯ=ತನ್ನ ಲಘಿಮಾದ್ಯೈಶ್ವರ್ಯಂ=ಹಗುರವಾಗುವಿಕೆ ಮೊದಲಾದ ಐಶ್ವರ್ಯವನ್ನು ಅತ್ಯಧಿಕಶಾರೀರಬಲಂ ಚ=ಬಹಳ ಹೆಚ್ಚಾದ ದೇಹಸಾಮರ್ಥ್ಯವನ್ನೂ, ಪ್ರಕಾಶಿತವಾನ್=ಪ್ರಕಟಗೊಳಿಸಿದರು.

ಇತಿ=ಎಂದು ಉತ್ತರಾರ್ಧತಾತ್ಪರ್ಯಾರ್ಥಃ=ಈ ಪದ್ಯದ ಉತ್ತರಾರ್ಧದ ತಾತ್ಪರ್ಯರೂಪವಾದ ಅರ್ಥವು ॥೩೦॥

**ಅವತಾರಿಕಾ** – ಪಾರಂತೀಶ್ವರನ ಉತ್ಸವವನ್ನು ಮಾಡಿಸಿದುದು, ಸರಿದನಂತರ ಎಂಬ ಗ್ರಾಮದಲ್ಲಿ ಬೇಸಿಗೆಯಲ್ಲಿ ಮಳೆ ಬರಿಸಿದ್ದು, ಇತ್ಯಾದಿ ಮಹಿಮೆಯನ್ನು ಹೇಳುತ್ತಾರೆ.

**ಪಾರಂತೀಶಾಭಿನಂದೀ ಸಪದಿ ಚ ಸರಿತಾಮಂತರೇ ವರ್ಷಯದ್ಯೋ**
**ಗ್ರಿಷ್ಮೇ ಮಿತ್ರೀಚಕಾರಾಪ್ಯಹಿತಮಥಗತೋ ವೈದ್ಯನಾಥಂ ಸ್ವಭೂತ್ಯೈ**
**ಛಂದಃ ಖಂಡಾರ್ಥವಾದೀ ಜಿತಕುಮತಿಕುಲೋ ದುರ್ಜನೇರ್ಷ್ಯಾಭ್ಯುಪೇಕ್ಷೀ**
**ಲಘ್ವನ್ನಂ ಬೃಂಹಯೇದತ್ಯತಿಬಹುಧನಿನಾಮಲ್ಪಕಲ್ಪೇನ ತುಷ್ಯೇತ್ ॥೩೧॥**

## ಗೂಢಭಾವಪ್ರಕಾಶಿಕಾ ವ್ಯಾಖ್ಯಾನ

ಪಾರಂತೀತಿ॥ ಯಃ ಶ್ರೀ ಮಧ್ವಃ ಸಪದಿ ಪಾರಂತೀಶಾಭಿನಂದೀ ಪಾರಂತ್ಯಾಖ್ಯದೇವಾಲಯಾಧಿಪತಿಂ **ಹರಿಂ** ಅಭಿನಂದಯತೀತಿ ಸಃ ತಥಾ, ಚಿರಕಾಲಂ ನೈವೇದ್ಯಹೀನಂ ಪಾರಂತೀಶ್ವರಂ ದೃಷ್ಟ್ವಾ **ಶೀಘ್ರಂ ಸರ್ವಸಂಪತ್ ಸಮೃದ್ಧಿಂ** ತದ್ದೇವಾಲಯೇsಕರೋದಿತಿಭಾವಃ ಯಃ ಸರಿತಾಮಂತರೇ ದೇಶವಿಶೇಷೇ **ಗ್ರೀಷ್ಮೇ ಗ್ರಿಷ್ಮಕಾಲೇ ಅವರ್ಷಯತ್** ವೃಷ್ಟಿಮಜನಯತ್ ವೃಷ ಸೇಚನೇ ಲಙ್, ನಿರ್ಜಲಂ ದೇಶವಿಶೇಷೇ **ತಂ ತಟಾಕಂ ಕ್ಷಣೇನ ವೃಷ್ಟ್ಯಾಜಲೇನ** ಪೂರಯಾಮಾಸೇತಿ ಭಾವಃ ಯಃ ಅಹಿತಂ ಶತ್ರುಮಪಿ ಮಿತ್ರೀಚಕಾರ. **ಮಧ್ವಮಾಹಾತ್ಮ್ಯಾಸಹಿಷ್ಣುಭಿಃ ದುಷ್ಟೈ** ಮಂತ್ರೈಃ ಪ್ರೇರಿತಂ, ಮಧ್ವಂ ಹಂತುಂ ಸ್ವಭಟೈಃ ಸಹಾಗಚ್ಛಂತಂ **ಆಯುಧಪಾಣಿಂ ಶೂದ್ರಪ್ರಭುಂದೃಷ್ಟ್ವಾ**. ಶ್ರೀಮಧ್ವಃ ಸ್ವಸ್ಮಿನ್ ಪೂಜ್ಯತಾಬುದ್ಧಿಂ ತಸ್ಯ ಉತ್ಪಾದ್ಯ ವಶೀಕೃತವಾನ್ **ಇತಿಭಾವಃ ಅಥ** ಅನಂತರಂ ವೈದ್ಯನಾಥಂ ಧನ್ವಂತರ್ಯಧಿಷ್ಠಿತಕ್ಷೇತ್ರವಿಶೇಷಂ ಸ್ವಭೂತ್ಯೈಸ್ವಾನಾಂ ಸ್ವಕೀಯಾನಾಂ **ಭಕ್ತಾನಾಂ ಭೂತ್ಯೈಸಂಪದೇ** ಗತಃ ಪ್ರಾಪ್ತಃ ಕರ್ತರಿ

ಕ್ತಃ, ತತ್ರ ಗತ್ವಾ ಕೃಷ್ಣಾಮೃತಮಹಾರ್ಣವಂ ಸ್ವಭಕ್ತಸಂಪದೇ ಕೃತವಾನಿತಿ ಭಾವಃ ಛಂದಃಖಂಡಾರ್ಥವಾದೀ ಛಂದಸಾಂ ಯಃ ಖಂಡಾರ್ಥವಾದೀ, ಛಂದಸಾಂ ವೈ ಷಷ್ಠೇನ ಇತ್ಯಾದಿ ತಸ್ಯಾರ್ಥಂ ವದತೀತಿ ಸಃತಥಾ, ಜಿತಕುಮತಿಕುಲಃ ಜಿತದುರ್ವಾದಿಸಂಘಃ ಕೈಶ್ಚಿದ್ ವಿದ್ವದ್ಭಿಃ '(ಅಯಂ) ಯತಿತ್ವಾತ್ ಕರ್ಮಕಾಂಡಂ ನ ಜಾನಾತಿ ಅತೋಽತ್ರ ಅಸ್ಯ ಪರಾಜಯಃ ಸ್ಯಾತ್' ಇತಿ ದುರ್ಬುದ್ಧ್ಯಾ ಛಂದಃ ಖಂಡಾರ್ಥೇ ಪೃಷ್ಟೇ ತದಾ ಶ್ರೀಮಧ್ವಃ ತತ್ ಖಂಡಾರ್ಥಂ ಸಮ್ಯಗುಕ್ತ್ವಾ ತಾನ್ ವಿಜಿತ್ಯ ಶಿಷ್ಯಹಿತಾರ್ಥಂ ಕರ್ಮನಿರ್ಣಯಾಖ್ಯಂ ಪ್ರಕರಣಂ ಲೇಖಯಾಮಾಸ ಇತಿ। ದುರ್ಜನೇರ್ಷ್ಯಾಭ್ಯುಪೇಕ್ಷೀ ದುರ್ಜನಾನಾಂ ಈರ್ಷ್ಯಾಂ ಅಸೂಯಾಂ ಅಭ್ಯುಪೇಕ್ಷತೇ ಇತಿ ಸಃ ತಥಾ ದುರ್ಜನೈರಸೂಯಯಾ ಉಚ್ಯಮಾನಂ ದುರ್ಭಾಷಣಂ ಉದಾಸ್ತೇ ಇತಿಭಾವಃ । ಲಘು ಸ್ವಲ್ಪಂ ಅನ್ನಂ ಬೃಂಹಯೇತ್ ಬೃಹಿ ವೃದ್ಧೌಲಿಙ್. ದರಿದ್ರೈರ್ದತ್ತಮಲ್ಪಮನ್ನಂ ಚತುರ್ಗುಣತಯಾ ವರ್ಧಯಿತ್ವಾ ಭುಂಕ್ತೇ ಇತಿಭಾವಃ ಧನಿನಾಂ ಧನವತಾಂ ಗೇಹೇಷು ಬಹುತ್ರಿಂಶತ್ಪುರುಷಭೋಗ್ಯಮನ್ನಂ ಅಲ್ಪಕಲ್ಪೇನ, ಅಲ್ಪತ್ವೇನ ಇತಿ ಯಾವತ್, 'ಈಷದಸಮಾಪ್ತೌ ಕಲ್ಪಪ್' ಇತಿ ಕಲ್ಪಪ್ ಪ್ರತ್ಯಯಃ ಅತ್ತಿ ಭುಂಕ್ತೇ ತ್ರಿಂಶನ್ನರೈಃ ಭೋಕ್ತವ್ಯಮನ್ನಂ ಏಕ ಏವ ಭುಂಕ್ತೇ ಇತಿಭಾವಃ ಅದ ಭಕ್ಷಣೇ ಲಟ್ ಸಃ ಶ್ರೀ ಮಧ್ವಃ ತುಷ್ಯೇತ್ ತುಷ್ಟೋ ಭವೇತ್ ಅಲ್ಪಕಲ್ಪೇನ ಇತ್ಯಸ್ಯ ಅತ್ರವಾ ಅನ್ವಯಃ ದ್ವಿತ್ರಿಕಲ್ಪ ಮಾತ್ರೇಣ ತುಷ್ಟೋ ಭವೇಚ್ಚೇತಿ ತುಷತುಷ್ಟೌಲಿಙ್॥೩೧॥

**ಪದಚ್ಛೇದ** – ಪಾರಂತೀಶಾಭಿನಂದೀ, ಸಪದಿ, ಚ, ಸರಿತಾಂ, ಅಂತರೇ, ಅವರ್ಷಯತ್, ಯಃ ಗ್ರೀಷ್ಮೇ ಮಿತ್ರೀಚಕಾರ, ಅಪಿ, ಅಹಿತಂ, ಅಥ, ಗತಃ, ವೈದ್ಯನಾಥಂ, ಸ್ವಭೂತ್ಯೈ, ಛಂದಃಖಂಡಾರ್ಥವಾದೀ, ಜಿತಕುಮತಿ ಕುಲಃ ದುರ್ಜನೇರ್ಷ್ಯಾಭ್ಯುಪೇಕ್ಷೀ, ಲಘು, ಅನ್ನಂ, ಬೃಂಹಯೇತ್, ಅತ್ತಿ ಅತಿಬಹು, ಧನಿನಾಂ, ಅಲ್ಪಕಲ್ಪೇನ, ತುಷ್ಯೇತ್.

**ಅನ್ವಯ** – ಯಃ ಸಪದಿಪಾರಂತೀಶಾಭಿನಂದೀ, ಯಃ ಸರಿತಾಂ, ಅಂತರೇ, ಗ್ರೀಷ್ಮೇ ಅವರ್ಷಯತ್, ಯಃ ಅಹಿತಮಪಿ ಮಿತ್ರೀಚಕಾರ, ಅಥ, ಸ್ವಭೂತ್ಯೈ, ವೈದ್ಯನಾಥಂ ಗತಃ, ಛಂದಃಖಂಡಾರ್ಥವಾದೀ, ಜಿತಕುಮತಿಕುಲಃ ದುರ್ಜನೇರ್ಷ್ಯಾಭ್ಯುಪೇಕ್ಷೀ ಯಃ ಲಘು ಅನ್ನಂ, ಬೃಂಹಯೇತ್, ಧನಿನಾಂ, ಅತಿಬಹು (ಅನ್ನಂ) ಅಲ್ಪಕಲ್ಪೇನ ಅತ್ತಿ, ಸಃ ತುಷ್ಯೇತ್।

**ಅನ್ವಯಾರ್ಥ** - ಯಃ=ಯಾವ ಶ್ರೀ ಮಧ್ವಾಚಾರ್ಯರು, ಸಪದಿ=ಕೂಡಲೇ (ಅಲ್ಪಸಮಯದಲ್ಲಿಯೇ), ಪಾರಂತೀಶಾಭಿನಂದೀ=ಪಾರಂತಿ ಎಂಬ ದೇವಾಲಯದಲ್ಲಿ ಸನ್ನಿಹಿತನಾದ ಶ್ರೀ ಹರಿಯನ್ನು ಅಭಿನಂದಿಸುವವರಾಗಿಯೂ, ಯಃ= ಯಾವ ಶ್ರೀ ಮಧ್ವಾಚಾರ್ಯರು, ಸರಿತಾಂ ಅಂತರೇ=ಸರಿದಂತರ ಎಂಬ ಪ್ರದೇಶದಲ್ಲಿ (ನೇತ್ರಾವತೀ ಕುಮಾರಧಾರಾ ನದಿಗಳ ಮಧ್ಯದಲ್ಲಿರುವ ಇಡೆತುದೆ (ಎರಡು ನದಿಗಳ ಮಧ್ಯ) ಎಂಬ ಹೆಸರಿನ ಗ್ರಾಮದಲ್ಲಿ) ಗ್ರೀಷ್ಮೇ=ಬೇಸಿಗೆಯಲ್ಲಿ, ಅವರ್ಷಯತ್= ಮಳೆಬರಿಸಿದರೋ, ಯಃ=ಯಾವ ಶ್ರೀ ಮಧ್ವಾಚಾರ್ಯರು, ಅಹಿತಮಪಿ=ಶತ್ರುವಾದವನನ್ನೂ ಕೂಡ, ಮಿತ್ರೀಚಕಾರ=ಸ್ನೇಹಿತನನ್ನಾಗಿ ಮಾಡಿಕೊಂಡರೋ, ಅಥ=ಅನಂತರ ಸ್ವ=ತನ್ನವರ, ಭೂತ್ಯೈ=ಸಂಪತ್ತಿಗೋಸ್ಕರ ವೈದ್ಯನಾಥಂ= ವೈದ್ಯನಾಥ ಎಂಬ ಹೆಸರಿನ ಧನ್ವಂತರಿ ಕ್ಷೇತ್ರವನ್ನು ಕುರಿತು, ಗತಃ=ಹೋದವರಾಗಿ, ಛಂದಃಖಂಡಾರ್ಥ=ವೇದದ ಖಂಡಾರ್ಥವನ್ನು, ವಾದೀ=ಹೇಳುವವರಾಗಿ, ಜಿತ=ಜಯಿಸಲ್ಪಟ್ಟ ಕುಮತಿಕುಲಃ=ದುರ್ವಾದಿಗಳ ಸಮೂಹವುಳ್ಳವರಾಗಿ, ದುರ್ಜನ=ಕೆಟ್ಟಜನರ, ಈರ್ಷ್ಯಾ=ಅಸೂಯೆಯನ್ನು, ಅಭ್ಯುಪೇಕ್ಷೀ=ಉಪೇಕ್ಷಿಸತಕ್ಕವರಾಗಿಯೂ, ಯಃ=ಯಾವ ಶ್ರೀ ಮಧ್ವಾಚಾರ್ಯರು ಲಘು=ಅಲ್ಪವಾದ, ಅನ್ನಂ=ಅನ್ನವನ್ನು, ಬೃಂಹಯೇತ್=ಹೆಚ್ಚಿಸಲೂ ಸಮರ್ಥರಾಗಿದ್ದರೋ, ಧನಿನಾಂ=ಶ್ರೀಮಂತರ ಅತಿಬಹು=ಬಹಳ ಹೆಚ್ಚಾದ, ಅನ್ನಂ=ಅನ್ನವನ್ನು, ಅಲ್ಪಕಲ್ಪೇನ=ಬಹಳ ಸ್ವಲ್ಪವೆಂಬ ರೀತಿಯಿಂದ, =ಅತ್ತಿ ಭೋಜನಮಾಡುತ್ತಾರೋ, ಸಃ=ಅಂತಹ ಶ್ರೀ ಮಧ್ವಾಚಾರ್ಯರು, ತುಷ್ಯೇತ್=ನಮ್ಮ ವಿಷಯದಲ್ಲಿ ಸಂತುಷ್ಟರಾಗಲಿ.

**ತಾತ್ಪರ್ಯ** - ಪಾರಂತೀ ಎಂಬಲ್ಲಿ ಒಂದು ದೇವಾಯಲವಿತ್ತು, ಅಲ್ಲಿ ಬಹುಕಾಲದಿಂದ ಪೂಜಾನೈವೇದ್ಯಾದಿಗಳು ಇರಲಿಲ್ಲ, ಆಚಾರ್ಯರು ಆ ದೇವಾಲಯಕ್ಕೆ ಹೋಗಿ ಅರ್ಧದಿವಸದೊಳಗಾಗಿ ಅಲ್ಲಿ ದೇವಾಸ್ಥಾನದ ಜೀರ್ಣೋದ್ಧಾರ ಬ್ರಹ್ಮಕಲಶ ಅಭಿಷೇಕಪೂಜಾದಿ ಸಮಸ್ತಕಾರ್ಯಗಳನ್ನೂ ಗ್ರಾಮಾಧಿಪತಿಗಳೇ ಮುಂತಾದವರ ಸಮಕ್ಷದಲ್ಲಿ ನೆರವೇರಿಸಿ

ಆ ದೇವಾಲಯದಲ್ಲಿ ಮುಂದೆ ಸರ್ವಸಂಪತ್ ಸಮೃದ್ಧಿಯುಂಟಾಗಿ ನಿತ್ಯೋತ್ಸವಾದಿಗಳು ನಡೆಯುವಂತೆ ವ್ಯವಸ್ಥೆಯನ್ನು ಮಾಡಿದರು. ಸರಿದಂತರ (ಇಡೆತುದೆ) ಎಂಬ ಗ್ರಾಮದ ಕೆರೆಯಲ್ಲಿ ಬೇಸಿಗೆಯಲ್ಲಿ ನೀರು ಬತ್ತಿಹೋಗಿತ್ತು. ಆಚಾರ್ಯರು ಅಲ್ಲಿಗೆ ಹೋಗಿ ಆ ಕೆರೆ ತುಂಬುವಂತೆ ಅಲ್ಲಿ ಮಾತ್ರ ಮಳೆ ಬರಿಸಿ ಆ ಕೆರೆಯನ್ನು ನೀರಿನಿಂದ ತುಂಬುವಂತೆ ಮಾಡಿದರು. ಆಚಾರ್ಯರ ಮಹಿಮೆಯನ್ನು ಸಹಿಸದ ಕೆಲವು ದುರ್ಜನರು ಮಂತ್ರಾಲೋಚನೆ ಮಾಡಿ ಆಚಾರ್ಯರನ್ನು ಹೊಡೆಸಬೇಕೆಂದು ಆಲೋಚಿಸಿ ಒಬ್ಬ ಹೀನಜಾತಿಯ ಪ್ರಭುವನ್ನು ಪ್ರೇರಿಸಿದರು. ಅವನು ಆಯುಧಪಾಣಿಗಳಾದ ತನ್ನವರ ಜತೆಗೆ ಆಚಾರ್ಯರನ್ನು ಹೊಡೆಯಬೇಕೆಂದು ಬರುತ್ತಾ ದಾರಿಯಲ್ಲಿ ಉದಯಿಸುತ್ತಿರುವ ಸೂರ್ಯನಂತೆ ಕಾಂತಿಭರಿತರಾದ ಆಚಾರ್ಯರನ್ನು ನೋಡಿ ಆಶ್ಚರ್ಯಪಟ್ಟು ಅವರಲ್ಲಿ ಗೌರವವನ್ನು ಹೊಂದಿ ಆಚಾರ್ಯರಿಗೆ ನಮಸ್ಕಾರಮಾಡಿ ಕ್ಷಮೆ ಕೇಳಿಕೊಂಡು ಹಿಂದಿರುಗಿ ಹೊರಟುಹೋದನು. ಆಚಾರ್ಯರು ಧನ್ವಂತರಿ ಪರಮಾತ್ಮನಿಂದ ಅನುಗೃಹೀತನಾದ ವೈದ್ಯನಾಥೇಶ್ವರನಿರುವ ಊರಿಗೆ ಹೋಗುತ್ತಾ ದಾರಿಯಲ್ಲಿ ತನ್ನ ಭಕ್ತರ ಉದ್ಧಾರಕ್ಕಾಗಿ ಕೃಷ್ಣಾಮೃತ ಮಹಾರ್ಣವ ಗ್ರಂಥವನ್ನು ಮಾಡಿದರು. ಅಲ್ಲಿಂದ ಉಜಿರೆ ಎಂಬ ಊರಿಗೆ ಹೋಗಿ ಛಂದಸಾಂ ವೈಷಷ್ಮೇನ ಇತ್ಯಾದಿ ವೇದಮಂತ್ರಗಳಿಗೆ ಅರ್ಥವನ್ನು ಹೇಳಿದರು. ಕೆಲವು ಅಸೂಯಾಪರರಾದ ವಿದ್ವಾಂಸರು ಶ್ರೀ ಮಧ್ವಾಚಾರ್ಯರು ಸರ್ವಜ್ಞರಾದರೂ ಯಜ್ಞಾದಿಬೋಧಕವಾದ ಕರ್ಮಕಾಂಡವನ್ನು ತಿಳಿದಿಲ್ಲ ಎಂದು ಆಲೋಚಿಸಿ ಆಚಾರ್ಯರ ಬಳಿಗೆ ಬಂದು ಕರ್ಮಕಾಂಡ ಭಾಗದ ಅರ್ಥವನ್ನು ಕೇಳಿದರು. ಆಚಾರ್ಯರು ಆ ಭಾಗಕ್ಕೆ ಸರಿಯಾಗಿ ಅರ್ಥಹೇಳಿ ತನ್ನ ಶಿಷ್ಯರ ಹಿತಕ್ಕೋಸ್ಕರ ಕರ್ಮನಿರ್ಣಯವೆಂಬ ಗ್ರಂಥವನ್ನು ಬರೆಸಿದರು. ದುಷ್ಟಜನರು ಕೋಲಾಹಲ ಮಾಡುತ್ತಾ, ಆಚಾರ್ಯರ ಪಾಂಡಿತ್ಯದ ಬಗ್ಗೆ ಕೆಟ್ಟಮಾತುಗಳನ್ನಾಡಿದರೂ ಆಚಾರ್ಯರು ಅದೆಲ್ಲವನ್ನೂ ಉದಾಸೀನ ಮಾಡಿಬಿಟ್ಟರು. ಬಡವರು ಆಚಾರ್ಯರಿಗೆ ಸ್ವಲ್ಪವೇ ಅನ್ನವನ್ನು ಭಕ್ತಿಯಿಂದ ಸಮರ್ಪಿಸಿದಾಗ, ಅವರು ಅದನ್ನು ಅಧಿಕವನ್ನಾಗಿ ಮಾಡಿ ತಾನು ಸ್ವೀಕರಿಸಿ ಭಕ್ತರಿಗೂ ಪ್ರಸಾದವನ್ನು ಕೊಡುತ್ತಿದ್ದರು. ಧನಿಕರು ಬಹಳವಾಗಿ ಅನ್ನಮಾಡಿಸಿ ಅನೇಕ ಜನರಿಗೆ ಭೋಜನ ಮಾಡಿಸಿದರೂ ಮಿಕ್ಕಿಹೋಗುವ ಹಾಗಿದ್ದ ಮೂವತ್ತು ಜನರು ಊಟ ಮಾಡಬೇಕಾದ ಅನ್ನವನ್ನು ತಾವೊಬ್ಬರೇ ಭೋಜನ ಮಾಡುತ್ತಿದ್ದರು. ಹೀಗೆ ಅಲ್ಪವನ್ನು ಮಹತ್ತಾಗಿ ಮಾಡುತ್ತಿದ್ದರು, ಮಹತ್ತನ್ನು ಅಲ್ಪವನ್ನಾಗಿಯೂ ಮಾಡತಕ್ಕ ಶಕ್ತಿಯು ಆಚಾರ್ಯರಿಗಿತ್ತು, ಬಹಳವಾದ ಅನ್ನವನ್ನು ಒಬ್ಬರೇ ಭೋಜನಮಾಡಿ ತಾನು ಭೀಮಾವತಾರನೆಂದು ಸೂಚಿಸುತ್ತಿದ್ದರು. ಹೀಗೆ ಬಹುವಿಧವಾದ ಆಶ್ಚರ್ಯಕರವಾದ ವ್ಯಾಪಾರಗಳನ್ನು ಮಾಡುತ್ತಿದ್ದ ಆಚಾರ್ಯರು ನಮ್ಮ ವಿಷಯದಲ್ಲಿ ಸಂತೋಷವುಳ್ಳವರಾಗಲಿ ನಮ್ಮನ್ನು ಅನುಗ್ರಹಿಸಲಿ ಎಂದು ಅಭಿಪ್ರಾಯ.

**ವಿಗ್ರಹ** - ಪಾರಂತ್ಯಾಃ ಈಶಃ ಪಾರಂತೀಶಃ ಪಾರಂತೀಶಂ ಅಭಿನಂದತೀತಿ ಪಾರಂತೀಶಾಭಿನಂದೀ, **ನ ಹಿತಃ** ಅಹಿತಃ=ಶತ್ರು ದ್ವಿಡ್ ವಿಪಕ್ಷಾಹಿತಾಮಿತ್ರದಸ್ಯುಶಾತ್ರವ ಶತ್ರವಃ ಅಮರ. ಸ್ವೇಷಾಂ ಭೂತಿಃ ಸ್ವಭೂತಿಃ **ತಸ್ಯೈ, ಭೂತಿ** =ಐಶ್ವರ್ಯ, ಭೂತಿರ್ಭಸ್ಮನಿ ಸಂಪದಿ ಅಮರ. ಛಂದಸಾಂ ಖಂಡಃ ಛಂದಃಖಂಡಃ ಛಂದಃಖಂಡಸ್ಯ **ಅರ್ಥಃ ಛಂದಃ** ಖಂಡಾರ್ಥ, ಛಂದಃಖಂಡಾರ್ಥಂ ವದತೀತಿ ಛಂದಃ ಖಂಡಾರ್ಥವಾದೀ ಕುತ್ಸಿತಾ ಮತಿಃ ಯೇಷಾಂ **ತೇ ಕುಮತಯಃ** ಕುಮತೀನಾಂ ಕುಲಂ ಕುಮತಿಕುಲಂ, ಜಿತಂ ಕುಮತಿಕುಲಂ ಯೇನ ಸಃ ಜಿತಕುಮತಿಕುಲಃ **ತಂ, ದುರ್ಜನಾನಾಂ** ಈರ್ಷ್ಯಾದುರ್ಜನೇರ್ಷ್ಯಾ, ದುರ್ಜನೇರ್ಷ್ಯಾಂ ಅಭ್ಯುಪೇಕ್ಷತೇ ಇತಿ ದುರ್ಜನೇಷ್ಯಾಭ್ಯುಪೇಕ್ಷೀ **ಧನಂ ಏಷಾಂ ಅಸ್ತೀತಿ** ಧನಿನಃ ತೇಷಾಂ ಈಷದಸಮಾಪ್ತಂ ಅಲ್ಪಂ ಅಲ್ಪಕಲ್ಪಂ ತೇನ.

**ಕ್ರಿಯಾಪದ** - ಅವರ್ಷಯತ್ ಅವರ್ಷಯತಾಂ ಅವರ್ಷಯನ್, ಅವರ್ಷಯಃ **ಅವರ್ಷಯತಂ** ಅವರ್ಷಯತ, ಅವರ್ಷಯಂ ಅವರ್ಷಯಾವ ಅವರ್ಷಯಾಮ, ವೃಷು ಸೇಚನೇ ಪರ ಸಕ **ಸೇಟ್ । ಣಿಜಂತ** ಅನದ್ಯತನಭೂತೇ ಲಙ್, ಪ್ರಥಮಪುರುಷ ಏಕವಚನದಲ್ಲಿ ಅವರ್ಷಯತ್ ಎಂದು ರೂಪ **ಅಮಿತ್ರಂ ಮಿತ್ರಂ** ಸಂಪದ್ಯಮಾನಂ ಚಕಾರ ಮಿತ್ರೀಚಕಾರ ಕೃಭ್ವಸ್ತಿಯೋಗೇ ಸಂಪದ್ಯಕರ್ತರಿ ಚ್ವಿಃ (5-4-60) **ಎಂಬ ಸೂತ್ರದಿಂದ ಚ್ವಿಪ್ರತ್ಯಯ** ಅಭೂತತದ್ಭಾವ ಇತಿವಕ್ತವ್ಯಂ (ವಾ 3340) ಎಂಬ ವಾರ್ತಿಕದಿಂದ ಮೊದಲು ಹಾಗಿಲ್ಲದೆ ಇದ್ದದ್ದನ್ನು ಅನಂತರ ಹಾಗೆ ಮಾಡಿಕೊಳ್ಳುವುದು

ಎಂಬ ಅರ್ಥದಲ್ಲಿ ಚ್ವಿಪ್ರತ್ಯಯ ಬರುತ್ತದೆ. ಅಸ್ಯ ಚ್ವೌ (7-4-32) ಎಂಬ ಸೂತ್ರದಿಂದ ಅಕಾರಕ್ಕೆ ಈತ್ವ ಬರುತ್ತದೆ.

ಚಕಾರ ಚಕ್ರತುಃ, ಚಕ್ರುಃ, ಚಕರ್ಥ ಚಕ್ರಥುಃ ಚಕ್ರ ಚಕಾರ ಚಕರ ಚಕೃವ ಚಕೃಮ ಡು (ಕೃ) ಞ್ ಕರಣೇ ಉಭ. ಸಕ, ಅನಿ. ಭೂತಾನದ್ಯತನಪರೋಕ್ಷೇ ಲಿಟ್ ಪ್ರಥಮಪುರುಷ ಏಕವಚನದಲ್ಲಿ ಮಿತ್ರೀಚಕಾರ, ಎಂದು ರೂಪ. ಬೃಂಹಯೇತ್ ಬೃಂಹಯೇತಾಂ, ಬೃಂಹಯೇಯುಃ, ಬೃಂಹಯೇಃ ಬೃಂಹಯೇತಂ, ಬೃಂಹಯೇತ, ಬೃಂಹಯೇಯಂ ಬೃಂಹಯೇವ ಬೃಂಹಯೇಮ ಬೃಹಿ (ಬೃಂಹ್) ವೃದ್ಧೌ, ಸಕ (ಣಿಜಂತ) ಚುರಾದಿ ಪರ. to grow ಪ್ರಾರ್ಥನಾ ಎಂಬ. ಅರ್ಥದಲ್ಲಿ ವಿಧಿಲಿಙ್ ಪ್ರಥಮ ಪುರುಷ ಏಕವಚನದಲ್ಲಿ ಬೃಂಹಯೇತ್ ಎಂದು ರೂಪ.

ಅತ್ತಿ ಅತ್ತಃ ಅದಂತಿ ಅತ್ಸಿ ಅತ್ಥಃ ಅತ್ಥ ಅದ್ಮಿ ಅದ್ವಃ ಅದ್ಮಃ, ಅದ ಭಕ್ಷಣೇ ಅದಾದಿ ಎರಡನೇ ಗಣ. ಸಕ. ಅನಿ. ಪರ ವರ್ತಮಾನೇ ಲಟ್ ಪ್ರಥಮಪುರುಷ ಏಕವಚನದಲ್ಲಿ ಅತ್ತಿ ಎಂದು ರೂಪ.

ತುಷ್ಯೇತ್ ತುಷ್ಯೇತಾಂ ತುಷ್ಯೇಯುಃ. ತುಷ್ಯೇಃ ತುಷ್ಯೇತಂ ತುಷ್ಯೇತ ತುಷ್ಯೇಯಂ ತುಷ್ಯೇವ ತುಷ್ಯೇಮ ತುಷ ಪ್ರೀತೌ ಅಕ. ಅನಿ. ಪರ. to be pleased ಪ್ರಾರ್ಥನೆಯಲ್ಲಿ ಲಿಙ್ ಪ್ರಥಮಪುರುಷ ಏಕವಚನದಲ್ಲಿ ತುಷ್ಯೇತ್ ಎಂದು ರೂಪ.

**ಪ್ರಯೋಗ** – **ಯೇನ ಸಪದಿ ಪಾರಂತೀಶಾಭಿನಂದಿನಾ ಅಭಾವಿ, ಯೇನ ಸರಿತಾಂ ಅಂತರೇ ಗ್ರೀಷ್ಮೇ ಅವರ್ಷ್ಯತ, ಯೇನ ಹಿತ್ರೋsಪಿ ಮಿತ್ರೀಚಕ್ರೇ, ಅಥ ಸ್ವಭೂತ್ಯೈ ವೇದ್ಯನಾಥಂ ಗತೇನ ಛಂದಃಖಂಡಾರ್ಥವಾದಿನಾ ಜಿತಕುಮತಿಕುಲೇನ ದುರ್ಜನೇರ್ಷ್ಯಾಭ್ಯುಪೇಕ್ಷಿಣಾ ಅಭಾವಿ, ಯೇನ ಲಘು ಅನ್ನಂ ಬೃಂಹ್ಯೇತ, ಯೇನ ಧನಿನಾಂ ಅತಿಬಹು ಅನ್ನಂ ಅಲ್ಪಕಲ್ಪೇನ ಅದ್ಯತೇ, ತೇನ ತುಷ್ಯೇತ.**

## ಗೂಢಭಾವಪ್ರಕಾಶಿಕಾ ಪದಾರ್ಥವ್ಯಾಖ್ಯಾನ

ಯಃ ಶ್ರೀ ಮಧ್ವಃ=ಯಾವ ಶ್ರೀಮಧ್ವಾಚಾರ್ಯರು, ಸಪದಿ=ಕೂಡಲೇ, (ತತ್ಕಾಲದಲ್ಲಿಯೇ) ಪಾರಂತೀಶಾಭಿನಂದೀ= ಪಾರಂತ್ಯಾಖ್ಯದೇವಾಲಯಾಧಿಪತಿಂ ಹರಿಂ ಅಭಿನಂದಯತೀತಿ ತಥಾ, ಪಾರಂತೀಶಾಭಿನಂದೀ ಎಂದರೆ, ಪಾರಂತ್ಯಾಖ್ಯ ದೇವಾಲಯಾಧಿಪತಿಂ=ಪಾರಂತೀ ಎಂಬಹೆಸರುಳ್ಳ ದೇವಾಯಲಕ್ಕೆ ಸ್ವಾಮಿಯಾದ, ಹರಿಂ=ಶ್ರೀ ಮನ್ನಾರಾಯಣನನ್ನು ಅಭಿನಂದಯತಿ ಇತಿ=ಅಭಿನಂದಿಸುತ್ತಾರೆ. (ಸಂತೋಷಪಡಿಸುತ್ತಾರೆ) ಎಂದು ಸಃ=ಆ ಶ್ರೀ ಮಧ್ವಾಚಾರ್ಯರು, ತಥಾ =ಪಾರಂತೀಶಾಭಿನಂದೀ ಎಂದು ಹೇಳಲ್ಪಡುತ್ತಾರೆ. ಚಿರಕಾಲಂ=ಬಹುಕಾಲದವರೆಗೆ, ನೈವೇದ್ಯಹೀನಂ=ನೈವೇದ್ಯವಿಲ್ಲದಿರುವ, ಪಾರಂತೀಶ್ವರಂ=ಪಾರಂತೀ ಎಂಬ ಪ್ರದೇಶದಲ್ಲಿರುವ ಮಹೇಶ್ವರನನ್ನು ದೃಷ್ಟ್ವಾ=ನೋಡಿ ಶೀಘ್ರಂ=ಬಹಳ ಬೇಗನೆ ಸರ್ವಸಂಪತ್ಸಮೃದ್ಧಿಂ=ಎಲ್ಲಾ ಐಶ್ವರ್ಯದ ಹೆಚ್ಚಳವನ್ನು, ತದ್ದೇವಾಲಯೇ=ಆ ದೇವಾಲಯದಲ್ಲಿ ಅಕರೋತ್ಇತಿಭಾವಃ ಮಾಡಿದರು ಎಂದು ಅಭಿಪ್ರಾಯ. ಯಃ=ಯಾವ ಶ್ರೀಮಧ್ವಾಚಾರ್ಯರು, ಸರಿತಾಮಂತರೇ ಸರಿತಾಮಂತರೇ ಎಂದರೆ ನದೀಮಧ್ಯೇ ದೇಶವಿಶೇಷೇ=ನದಿಯ ಮಧ್ಯದಲ್ಲಿರುವ ಇಡೆತುದೆ ಎಂಬ ಪ್ರದೇಶ ವಿಶೇಷದಲ್ಲಿ, ಗ್ರೀಷ್ಮೇ ಗ್ರೀಷ್ಮಕಾಲೇ =ಗ್ರೀಷ್ಮೇ ಎಂದರೆ ಬೇಸಿಗೆ ಕಾಲದಲ್ಲಿ ಎಂದು ಅರ್ಥ.ಅವರ್ಷಯತ್ =ವೃಷ್ಟಿಮಜನಯತ್, ಅವರ್ಷಯತ್ ಅಂದರೆ ಮಳೆ ಬರಿಸಿದರು ಎಂದು ಅರ್ಥ. ವೃಷಸೇಚನೇ ಲಙ್=ಅವರ್ಷಯತ್ ಎಂಬಲ್ಲಿ ವೃಷ ಸೇಚನೇ ಸೇಚನ ಸಿಂಪಡಿಸುವುದು ಹನಿಹಾಕುವುದು ಎಂಬ ಅರ್ಥದ ವೃಷಧಾತುವಿನ ಲಙ್ ಲಕಾರವು ನಿರ್ಜಲಂ=ನೀರಿಲ್ಲದ, ದೇಶವಿಶೇಷಸ್ಥಿತಂ= 'ಸರಿದಂತರ' (ಇಡೆ ತುದೆ) ಎಂಬ ದೇಶವಿಶೇಷದಲ್ಲಿದ್ದ, ತಟಾಕಂ=ಕೆರೆಯನ್ನು ಕ್ಷಣೇನ=ಕೂಡಲೇ ವೃಷ್ಟ್ಯಾ=ಮಳೆಯಿಂದ (ಜಲೇನ) ಪೂರಯಾಮಾಸ ಇತಿ ಭಾವಃ=ನೀರಿನಿಂದ ತುಂಬುವಂತೆ ಮಾಡಿದರು ಎಂದು ಅಭಿಪ್ರಾಯ. ಯಃ=ಯಾವ ಶ್ರೀ ಮಧ್ವಾಚಾರ್ಯರು, ಅಹಿತಂ=ಶತ್ರುಮಪಿ=ಅಹಿತಂ ಎಂದರೆ ಶತ್ರುವನ್ನೂ ಕೂಡ, ಮಿತ್ರೀಚಕಾರ=ಸ್ನೇಹಿತನನ್ನಾಗಿ ಮಾಡಿಕೊಂಡರು. (ತನ್ನಲ್ಲಿ ಸೌಹಾರ್ದದಿಂದ) ಇರುವಂತೆ ಮಾಡಿಕೊಂಡರು ಎಂದು

ಅಭಿಪ್ರಾಯ ಮಧ್ವಮಾಹಾತ್ಮ್ಯ ಸಹಿಷ್ಣುಭಿಃ=ಶ್ರೀ ಮಧ್ವಾಚಾರ್ಯರ ಮಹಿಮೆಯನ್ನು ಸಹಿಸಲಾರದ, ದುಷ್ಟೈಃ=ದುರ್ಜನರಿಂದ, ಮಂತ್ರೈಃ = ಮಂತ್ರಾಲೋಚನೆಗಳಿಂದ, ಪ್ರೇರಿತಂ=ಪ್ರೇರಿಸಲ್ಪಟ್ಟ, ಮಧ್ವಂ ಹಂತುಂ = ಶ್ರೀಮಧ್ವಾಚಾರ್ಯರನ್ನು ಹೊಡೆಯುವುದಕ್ಕೋಸ್ಕರ, ಸ್ವಭಟೈಃ ಸಹ ಆಗಚ್ಛಂತಂ=ತನ್ನ ಸೈನಿಕರಿಂದ ಕೂಡಿಕೊಂಡು ಬರುತ್ತಿರುವ, ಆಯುಧಪಾಣಿಂ=ಶಸ್ತ್ರಧಾರಿಯಾದ, ಶೂದ್ರಪ್ರಭುಂ=ಶೂದ್ರರಾಜನನ್ನು, ದೃಷ್ಟ್ವಾ=ನೋಡಿ, ಶ್ರೀಮಧ್ವಃ ಶ್ರೀ ಮಧ್ವಾಚಾರ್ಯರು, ಸ್ವಸ್ಮಿನ್=ತನ್ನಲ್ಲಿ, ಪೂಜ್ಯತಾಬುದ್ಧಿಂ ಇವರು=ಪೂಜ್ಯರು, ತಾಡನಾದಿಗಳಿಗೆ ಯೋಗ್ಯರಲ್ಲ ಎಂಬ ಬುದ್ಧಿಯನ್ನು, ತಸ್ಯ=ಆ ಶೂದ್ರರಾಜನಿಗೆ, ಉತ್ಪಾದ್ಯ=ಉಂಟುಮಾಡಿ, ವಶೀಕೃತವಾನಿತಿ ಭಾವಃ=ತನ್ನ ಸ್ವಾಧೀನಪಡಿಸಿಕೊಂಡರು ಎಂದು ಅಭಿಪ್ರಾಯ. ಅಥ=ಅನಂತರಂ ಅಥ ಎಂದರೆ ಅನಂತರ ಎಂದು ಅರ್ಥ. ವೈದ್ಯನಾಥಂ ಧನ್ವಂತರ್ಯಧಿಷ್ಠಿತಕ್ಷೇತ್ರವಿಶೇಷಂ, ವೈದ್ಯನಾಥಂ ಎಂದರೆ ವೈದ್ಯನಾಥ ಎಂಬ ಹೆಸರುಳ್ಳ ಧನ್ವಂತರಿರೂಪಿಯಾದ ಪರಮಾತ್ಮನಿಂದ ವಾಸಮಾಡಲ್ಪಟ್ಟ ಉಜಿರೆ ಎಂಬ ಹೆಸರಿನ ಕ್ಷೇತ್ರ ವಿಶೇಷವನ್ನು ಕುರಿತು, ಸ್ವಭೂತ್ಯೈ, ಸ್ವಾನಾಂ ಸ್ವಕೀಯಾನಾಂ ಸ್ವಎಂದರೆ ತನ್ನವರಾದ ಭಕ್ತರ, ಭೂತ್ಯೈ =ಎಂದರೆ ಸಂಪತ್ತಿಗೋಸ್ಕರ, ಗತಃ=ಪ್ರಾಪ್ತಃ, ಗತಃ ಎಂದರೆ ಹೋದಂತಹವರು ಎಂದು ಅರ್ಥ, ಕರ್ತರಿಕ್ತಃ=ಗತಃ ಎಂಬಲ್ಲಿ ಕರ್ತರಿ ಕ್ತಪ್ರತ್ಯಯ, ಆದ್ದರಿಂದ ಹೋದಂತಹವರು ಎಂದು ಅರ್ಥ. ತತ್ರ ಗತ್ವಾ=ಅಲ್ಲಿಗೆ ಹೋಗಿ, ಕೃಷ್ಣಾಮೃತ ಮಹಾರ್ಣವಂ=ಕೃಷ್ಣಾಮೃತಮಹಾರ್ಣವವೆಂಬ ಗ್ರಂಥವನ್ನು ಸ್ವಭಕ್ತಸಂಪದೇ=ತನ್ನ ಭಕ್ತರ ಸಂಪತ್ತಿಗೋಸ್ಕರ, ಕೃತವಾನಿತಿಭಾವಃ=ಮಾಡಿದರೆಂದು ಅಭಿಪ್ರಾಯ. ಛಂದಃಖಂಡಾರ್ಥವಾದೀ=ಛಂದಸಾಂ ವೇದಗಳ, ಯಃ ಖಂಡಾರ್ಥಃ=ಯಾವ ಖಂಡಾರ್ಥವಿದೆಯೋ, ತಂ ವದತೀತಿ ಛಂದಃಖಂಡಾರ್ಥವಾದೀ=ಆ ಖಂಡಾರ್ಥವನ್ನು ಹೇಳುವವರು ಎಂಬ ಅರ್ಥದಲ್ಲಿ 'ಛಂದಃ ಖಂಡಾರ್ಥವಾದೀ ಎಂಬ ಶಬ್ದವು ಪ್ರಯೋಗಿಸಲ್ಪಡುತ್ತದೆ ಎಂದು ಅಭಿಪ್ರಾಯ. "ಛಂದಸಾಂ ವೈ ಷಷ್ಠೇನ' ಇತ್ಯಾದಿಃ ಛಂದಃ ಖಂಡಃ ತಸ್ಯ ಅರ್ಥಂ ವದತೀತಿ ಸಃ ತಥಾ='ಛಂಧಸಾಂ ವೈ ಷಷ್ಠೇನ' ಇತ್ಯಾದಿಯಾದ ಛಂದಃಖಂಡವು ಯಾವುದಿದೆಯೋ ಅದರ ಅರ್ಥವನ್ನು ಹೇಳುತ್ತಾರೆ ಎಂದು ಆ ಮಧ್ವಾಚಾರ್ಯರು ಛಂದಃಖಂಡಾರ್ಥವಾದೀ ಎಂಬ ಪದದಿಂದ ವಾಚ್ಯರಾಗುತ್ತಾರೆ ಎಂದು ತಾತ್ಪರ್ಯ. ಜಿತಕುಮತಿಕುಲಃ ಜಿತದುರ್ವಾದಿಸಂಘಃ ಜಿತಕುಮತಿಕುಲಃ ಎಂದರೆ ದುರ್ವಾದಿಗಳ ಸಮೂಹವನ್ನು ಜಯಿಸಿದವರು ಎಂದು ಅರ್ಥ. ಕೈಶ್ಚಿದ್ ವಿದ್ವದ್ ಭಿಃ=ಕೆಲವು ಮಂದಿ ವಿದ್ವಾಂಸರಿಂದ, ಅಯಂ=ಈ ಮಧ್ವಾಚಾರ್ಯರು, ಯತಿತ್ವಾತ್ ಸಂನ್ಯಾಸಿಯಾದುದರಿಂದ, ಕರ್ಮಕಾಂಡಂ ನ ಜಾನಾತಿ=ಕರ್ಮಕಾಂಡವನ್ನು ತಿಳಿದಿಲ್ಲ, ಅತಃ=ಆದುದರಿಂದ, ಅತ್ರ=ಈ ವಿಷಯದಲ್ಲಿ, ಅಸ್ಯ=ಈ ಮಧ್ವಾಚಾರ್ಯರಿಗೆ ಪರಾಜಯಃ ಸ್ಯಾತ್=ಸೋಲು ಉಂಟಾಗಿಯೇ ತೀರುತ್ತದೆ.' ಇತಿ ದುರ್ಬುದ್ಧ್ಯಾ=ಎಂಬ ಕೆಟ್ಟ ಬುದ್ಧಿಯಿಂದ, **ಛಂದಃ** ಖಂಡಾರ್ಥೇ ಪೃಷ್ಟೇ=ವೇದಖಂಡದ ಅರ್ಥವು ಕೇಳಲ್ಪಡಲಾಗಿ, ತದಾ ಆಗ ಶ್ರೀಮಧ್ವಃ=ಶ್ರೀ ಮಧ್ವಾಚಾರ್ಯರು, **ತತ್** ಖಂಡಾರ್ಥಂ=ಆ ವೇದಖಂಡದ ಅರ್ಥವನ್ನು, ಸಮ್ಯಗುಕ್ತ್ವಾ=ಸರಿಯಾಗಿ ಹೇಳಿ, ತಾನ್=ಅವರನ್ನು, **ವಿಜಿತ್ಯ=ಜಯಿಸಿ** ಶಿಷ್ಯಹಿತಾರ್ಥಂ=ಶಿಷ್ಯರ ಹಿತಕ್ಕೋಸ್ಕರ, ಕರ್ಮನಿರ್ಣಯಾಖ್ಯಪ್ರಕರಣತ್ವೇನ=ಕರ್ಮನಿರ್ಣಯವೆಂಬ ಪ್ರಕರಣರೂಪದಿಂದ, ಲೇಖಯಾಮಾಸ ಇತಿಭಾವಃ=ಬರೆಸಿದರು ಎಂದು ಅಭಿಪ್ರಾಯ.

ದುರ್ಜನೇರ್ಷ್ಯಾಭ್ಯುಪೇಕ್ಷೀ ಎಂದರೆ ದುರ್ಜನಾನಾಂ=ಕೆಟ್ಟಜನರ, ಈರ್ಷ್ಯಾಂ ಅಸೂಯಾಂ **ಈರ್ಷ್ಯಾಂ ಎಂದರೆ** ಅಸೂಯೆಯನ್ನು, ಅಭ್ಯುಪೇಕ್ಷತೇ=ವಿಶೇಷವಾಗಿ ಉಪೇಕ್ಷಿಸುತ್ತಾರೆ, ಇತಿ=ಎಂಬ ಅಭಿಪ್ರಾಯದಿಂದ **ಸಃ=ಆ ಶ್ರೀ** ಮಧ್ವಾಚಾರ್ಯರು, ತಥಾ=ದುರ್ಜನೇರ್ಷ್ಯಾಭ್ಯುಪೇಕ್ಷೀ ಎಂಬ ಶಬ್ದದಿಂದ ವಾಚ್ಯರಾಗಿದ್ದಾರೆ. **ದುರ್ಜನೈಃ=ಕೆಟ್ಟಜನರಿಂದ** ಅಸೂಯಯಾ=ಹೊಟ್ಟೆಕಿಚ್ಚಿನಿಂದ, ಉಚ್ಯಮಾನಂ =ಹೇಳಲ್ಪಡುವ, ದುರ್ಭಾಷಣಂ=ಕೆಟ್ಟಮಾತನ್ನು, **ಉದಾಸ್ತೇ=ಉಪೇಕ್ಷಿಸುತ್ತಾರೆ.** (ಉದಾಸೀನದೃಷ್ಟಿಯಿಂದ ನೋಡುತ್ತಾರೆ) ಇತಿಭಾವಃ=ಎಂದು ಅಭಿಪ್ರಾಯ.

ಲಘು ಸ್ವಲ್ಪಂ=ಲಘು ಎಂದರೆ ಸ್ವಲ್ಪವಾದ, ಅನ್ನಂ=ಅನ್ನವನ್ನು ಬೃಂಹಯೇತ್**=ಹೆಚ್ಚಾಗಿ ಮಾಡಿಯೇ** ತೀರುತ್ತಾರೆ, ಬೃಹಿವೃದ್ಧೌ=ಲಿಙ್, ಬೃಹಿ ಎಂಬ ಧಾತುವಿಗೆ ವೃದ್ಧಿ ಎಂದು ಅರ್ಥ. **ಈ ಬೃಹಿಧಾತುವಿನ ವಿಧಿಲಿಙ್** ಲಕಾರ. ದರಿದ್ರೈಃ=ಬಡವರಿಂದ, ದತ್ತಂ=ಕೊಡಲ್ಪಟ್ಟ, ಅಲ್ಪಂ ಅನ್ನಂ=ಸ್ವಲ್ಪವಾದ ಅನ್ನವನ್ನೂ, **ಚತುರ್ಗುಣತಯಾ ವರ್ಧ**ಯಿತ್ವಾ=ನಾಲ್ಕು ಮಡಿಯಾಗಿ ಹೆಚ್ಚುಮಾಡಿ, ಭುಂಕ್ತೇ ಇತಿಭಾವಃ =ಭೋಜನ **ಮಾಡುತ್ತಾರೆ ಎಂದು** ಅಭಿಪ್ರಾಯ. ಧನಿನಾಂ

ಧನವತಾಂ=ಧನಿನಾಂ ಅಂದರೆ ಹಣವಂತರ, ಗೇಹೇಷು=ಮನೆಗಳಲ್ಲಿ, ಬಹು=ತ್ರಿಂಶತ್ ಪುರುಷಭೋಜ್ಯಂ ಅನ್ನಂ, ಬಹು ಅಂದರೆ ಮೂವತ್ತು ಮಂದಿ ಊಟಮಾಡಲು ಸಾಧ್ಯವಾಗುವ ಅನ್ನವನ್ನು, ಅಲ್ಪಕಲ್ಪೇನ=ಅಲ್ಪತ್ವೇನೇತಿಯಾವತ್ ಅಲ್ಪಕಲ್ಪೇನ ಎಂದರೆ ಸ್ವಲ್ಪವೇ ಎಂಬ ರೀತಿಯಿಂದ ಎಂದು ಅಭಿಪ್ರಾಯ, 'ಈಷದಸಮಾಪ್ತೌ ಕಲ್ಪಪ್ ಇತಿಕಲ್ಪಪ್ ಪ್ರತ್ಯಯಃ=ಈಷದ ಸಮಪ್ತೌ ಎಂಬ ಸೂತ್ರದಿಂದ ಕಲ್ಪಪ್ ಪ್ರತ್ಯಯ, ಅತ್ತಿ ಭುಂಕ್ತೇ ಅತ್ತಿ ಎಂದರೆ ಊಟ ಮಾಡುತ್ತಾರೆ ಎಂದು ಅರ್ಥ. ತ್ರಿಂಶನ್ನರೈರ್ಭೋಕ್ತವ್ಯಮನ್ನಂ ಏಕ ಏವಭುಂಕ್ತೇ ಇತಿ ಭಾವಃ=ಮೂವತ್ತು ಮಂದಿ ತರುಣಪುರುಷರಿಂದ ಊಟ ಮಾಡಲು ಸಾಧ್ಯವಾದ ಅನ್ನವನ್ನು ಒಬ್ಬರೇ ಊಟ ಮಾಡುತ್ತಾರೆ ಎಂದು ಭಾವ. ಅದ ಭಕ್ಷಣೇ ಲಟ್. ಅತ್ತಿ ಎಂಬಲ್ಲಿ ಅದ ಭಕ್ಷಣೇ ಎಂಬ ಧಾತುವಿನ ಲಟ್ ಲಕಾರವು. ಸಃ ಶ್ರೀ ಮಧ್ವಃ=ಅಂತಹ ಶ್ರೀ ಮಧ್ವಾಚಾರ್ಯರು ತುಷ್ಯೇತ್ ಅಂದರೆ ಸಂತುಷ್ಟರಾಗಲಿ ಎಂದು ಅರ್ಥ. ಅಲ್ಪಕಲ್ಪೇನೇತ್ಯಸ್ಯ ಅತ್ರ ವಾ ಅನ್ವಯಃ=ಅಲ್ಪಕಲ್ಪೇನ ಎಂಬುದಕ್ಕೆ ಇಲ್ಲಿಯಾದರೂ ಅನ್ವಯವನ್ನು ಹೇಳಬಹುದು. ದ್ವಿತ್ರಿಕಲ್ಪಮಾತ್ರೇಣ ತುಷ್ಟೋ ಭವೇಚ್ಚೇತಿ=ನಾವು ಮಾಡುವ ಎರಡು ಮೂರು ಪೂಜಾವಿಧಿಮಾತ್ರದಿಂದ ಸಂತುಷ್ಟರಾಗಲಿ ಎಂದರ್ಥ. ತುಷತುಷ್ಟೌ ಲಿಙ್=ತುಷ್ಯೇತ್ ಎಂಬಲ್ಲಿ ತುಷ್ಟ್ಯರ್ಥಕವಾದ ತುಷ ಧಾತುವಿನ ವಿಧಿಲಿಙ್ ಲಕಾರವು.

**ಅವತಾರಿಕಾ** - ಶ್ರೀ ಮಧ್ವಾಚಾರ್ಯರು ಮಳೆಯನ್ನು ನಿಲ್ಲಿಸುವುದು ಮಳೆ ಬರಿಸುವುದು ಮುಂತಾದ ಇನ್ನೂ ಅನೇಕ ಪವಾಡಗಳನ್ನು ತೋರಿಸದರೆಂದು ಹೇಳುತ್ತಾ ದೇವತೆಗಳು ಜಯಘೋಷಮಾಡುತ್ತಾ ಪುಷ್ಪವೃಷ್ಟಿಯನ್ನು ಮಾಡಿದರೆಂದು ಹೇಳಿ ಈ ಗ್ರಂಥವನ್ನು ಸಮಾಪ್ತಿಗೊಳಿಸುತ್ತಾರೆ.

**ವೃಷ್ಟ್ಯಾದೀನಾಂ ನಿಯಂತೇತ್ಯಭಿಹಿತಚರಿತಃ ಸರ್ವಗೀರ್ವಾಣರತ್ನೈಃ**
**ಗಂಧರ್ವೈರ್ಗೀಯಮಾನೋ ದ್ಯುಸದಸಿ ಸಕಲೈಃ ಕೌತುಕಾದ್ಗಮ್ಯಮಾನಃ**
**ದೃಷ್ಟ್ವಾ ಸಂಸ್ತೂಯಮಾನಃ ಸುರತರುಕುಸುಮೈರಾರ್ಯ ಆಕೀರ್ಯಮಾಣೋ**
**ಮಧ್ವೋದೇದೀಪ್ಯತೇSಸೌಜಗತಿ ವಿಜಯತೇ ಸತ್‌ಸಭಾಮಂಗಲಾಯ ।।೩೨।।**

~~**ಗೂಢಭಾವಪ್ರಕಾಶಿಕಾವ್ಯಾಖ್ಯಾನ** - ಸರ್ವಗೀರ್ವಾಣರತ್ನೈಃ ಸರ್ವದೇವಶ್ರೇಷ್ಠೈಃ ವೃಷ್ಟ್ಯಾದೀನಾಂ ನಿಯಂತಾನಿಯಾಮಕಃ~~ ಇತ್ಯಭಿಹಿತಚರಿತಃ ಸ್ತುತಚರಿತ್ರಃ ದ್ಯುಸದಸಿ ಸ್ವರ್ಗಸಭಾಯಾಂ ಗಂಧರ್ವೈಃ ಗೀಯಮಾನಃ ಸಕಲೈಃ ಮುನಿನಿಕರಾಭಿಃ ಕೌತುಕಾತ್ ವಿಜಯಮಹೋತ್ಸವಲೌಲ್ಯಾತ್ ಗಮ್ಯಮಾನಃ ಪ್ರಾಪ್ಯಮಾಣಃ, ದೃಷ್ಟ್ವಾಪ್ರೇಕ್ಷ್ಯ ಮಧ್ವದರ್ಶನಾನಂತರಂ ಸಂಸ್ತೂಯಮಾನಃ, ಸುರತರುಕುಸುಮೈಃ ಸುರತರೋಃ ಪಾರಿಜಾತಸ್ಯ ಕುಸುಮೈಃ ಪುಷ್ಪೈಃ 'ಪ್ರಸೂನಂ ಕುಸುಮಂ ಸುಮಂ' ಇತ್ಯಮರಃ, ಆಕೀರ್ಯಮಾಣಃ ಅಭಿಷಿಚ್ಯಮಾನಃ, ಆರ್ಯಃ ಶ್ರೇಷ್ಠಃ ಅಸೌ ಮಧ್ವಃ ದೇದೀಪ್ಯತೇ ಪುನಃ ಪುನಃ ದೀಪ್ಯತೇ ದೀಪೀ ದೀಪ್ತೌ, ಕ್ರಿಯಾಸಮಭಿಹಾರೇಯಙ್। ಸತ್ ಸಭಾಮಂಗಲಾಯ ಸತಾಂ ಸಭಾಯಾಃ ಮಂಗಲಾಯ, ಜಗತಿ ಲೋಕೇ, ವಿಜಯತೇ ಉತ್ಕೃಷ್ಟೋ ವರ್ತತೇ ಜಿ ಜಯೇ ಜಯ ಉತ್ಕರ್ಷಃ ಲಟ್ ।।೩೨।।

**ಪದಚ್ಛೇದ** - ವೃಷ್ಟ್ಯಾದೀನಾಂ ನಿಯಂತಾ ಇತಿ ಅಭಿಹಿತಚರಿತಃ ಸರ್ವಗೀರ್ವಾಣರತ್ನೈಃ ಗಂಧರ್ವೈಃಗೀಯಮಾನಃ ದ್ಯುಸದಸಿ ಸಕಲೈಃ ಕೌತುಕಾತ್ ಗಮ್ಯಮಾನಃ ದೃಷ್ಟ್ವಾ ಸಂಸ್ತೂಯಮಾನಃ, ಸುರತರುಕುಸುಮೈಃ ಆರ್ಯಃ ಆಕೀರ್ಯಮಾಣಃ ಮಧ್ವಃ ದೇದಿಪ್ಯತೇ ಅಸೌ ಜಗತಿ ವಿಜಯತೇ ಸತ್ ಸಭಾಮಂಗಲಾಯ।

**ಅನ್ವಯ** - ಸರ್ವಗೀರ್ವಾಣರತ್ನೈಃ ವೃಷ್ಟ್ಯಾದೀನಾಂ ನಿಯಂತಾ ಇತಿ ಅಭಿಹಿತಚರಿತಃ ದ್ಯುಸದಸಿ ಗಂಧರ್ವೈಃ ಗೀಯಮಾನಃಸಕಲೈಃ ಕೌತುಕಾತ್ ಗಮ್ಯಮಾನಃ ದೃಷ್ಟ್ವಾ ಸಂಸ್ತೂಯ ಮಾನಃ, ಸುರತರು ಕುಸುಮೈಃ ಆಕೀರ್ಯಮಾಣಃ ಆರ್ಯಃ ಅಸೌ ಮಧ್ವಃ ದೇದೀಪ್ಯತೇ, ಸತ್ಸಭಾಮಂಗಲಾಯ ಜಗತಿ ವಿಜಯತೇ ।

**ಅನ್ವಯಾರ್ಥ** - ಸರ್ವಗೀರ್ವಾಣರತ್ನೈಃ=ಎಲ್ಲಾ ದೇವಶ್ರೇಷ್ಠರಿಂದಲೂ ವೃಷ್ಟ್ಯಾದೀನಾಂ=ಮಳೆ ಮುಂತಾದವುಗಳ ನಿಯಂತಾ=ನಿಯಾಮಕರು, ಇತಿ=ಹೀಗೆಂದು, ಅಭಿಹಿತಚರಿತಃ=ವರ್ಣಿಸಲ್ಪಟ್ಟ ಚರಿತ್ರೆಯುಳ್ಳ, ದ್ಯುಸದಸಿ=ದೇವತೆಗಳ

ಸಭೆಯಲ್ಲಿ, ಗಂಧರ್ವೈಃ=ಗಂಧರ್ವರಿಂದ, ಗೀಯಮಾನಃ=ಸಂಗೀತದಿಂದ ಹೊಗಳಲ್ಪಡುತ್ತಿರುವ, ಸಕಲೈಃ=ಸಮಸ್ತರಿಂದಲೂ (ಋಷಿ ಸಮೂಹ, ದೇವಸಮೂಹ ಮುಂತಾದ ಸಮೂಹಗಳಿಂದ) ಕೌತುಕಾತ್=ವಿಜಯ. ಮಹೋತ್ಸವದ ದರ್ಶನಕುತೂಹಲದಿಂದ, ಗಮ್ಯಮಾನಃ=ಸಮೀಪಿಸಲ್ಪಡುತ್ತಿರುವ, ದೃಷ್ಟ್ವಾ=ನೋಡಿ, ಸಂಸ್ತೂಯಮಾನಃ=ಚೆನ್ನಾಗಿ ಸ್ತೋತ್ರ ಮಾಡಲ್ಪಡುತ್ತಿರುವ, ಸುರತರುಕುಸುಮೈಃ=ಪಾರಿಜಾತವೃಕ್ಷದ ಹೂವುಗಳಿಂದ, ಆಕೀರ್ಯಮಾಣಃ=ಅಭಿಷೇಕಿಸಲ್ಪಡುತ್ತಿರುವ, ಆರ್ಯಃ= ಶ್ರೇಷ್ಠರಾದ, ಅಸೌಮಧ್ವಃ=ಈ ಶ್ರೀಮಧ್ವಾಚಾರ್ಯರು, ದೇದೀಪ್ಯತೇ=ಪುನಃಪುನಃ ಅತಿಶಯವಾಗಿ ಪ್ರಕಾಶಿಸುತ್ತಾರೆ. ಸತ್=ಸಜ್ಜನರ, ಸಭಾ=ಸಮೂಹದ, ಮಂಗಲಾಯ=ಕಲ್ಯಾಣಕ್ಕೋಸ್ಕರ, ಜಗತಿ=ಲೋಕದಲ್ಲಿ, ವಿಜಯತೇ=ಉತ್ಕೃಷ್ಟರಾಗಿರುತ್ತಾರೆ.

**ತಾತ್ಪರ್ಯ** - ಆಚಾರ್ಯರು ಅತಿವೃಷ್ಟಿಯಾಗುತ್ತಿದ್ದಾಗ ತಮ್ಮ ಪ್ರಭಾವದಿಂದ ಅದನ್ನು ತಡೆಯುತ್ತಿದ್ದರು. ಅನಾವೃಷ್ಟಿಯುಂಟಾದಾಗ ತಮ್ಮ ಸಾಮರ್ಥ್ಯದಿಂದ ಬೇಕಾದಲ್ಲಿ ಮಾತ್ರ ಮಳೆ ಬರಿಸುತ್ತಿದ್ದರು. ಆಚಾರ್ಯರ ಇಂತಹ ಅದ್ಭುತ ಚರಿತ್ರೆಗಳನ್ನು ಎಲ್ಲಾ ದೇವಶ್ರೇಷ್ಠರೂ ಹೊಗಳುತ್ತಿದ್ದರು. ಸ್ವರ್ಗದ ಸಭೆಯಲ್ಲಿ ಗಂಧರ್ವರು ಆಚಾರ್ಯರ ಮಹಿಮೆಯನ್ನು ಹಾಡುತ್ತಿದ್ದರು. ಋಷಿಸಮೂಹಗಳು, ದೇವಸಮೂಹಗಳು ಇವೇ ಮೊದಲಾದ ದಿವ್ಯಚೇತನರ ಸಮೂಹಗಳು ಆಚಾರ್ಯರ ವಿಜಯಮಹೋತ್ಸವವನ್ನು ಕಣ್ಣಾರೆ ಕಾಣುವ ಬಯಕೆಯಿಂದ ಕುತೂಹಲಭರಿತರಾಗಿ, ಆಚಾರ್ಯರು ಇದ್ದಲ್ಲಿಗೆ ಬಂದು ಸೇರುತ್ತಿದ್ದರು. ಅವರೆಲ್ಲರೂ ಆಚಾರ್ಯರನ್ನು ನೋಡಿ ಭಕ್ತಿಯಿಂದ ಬಹಳ ಚೆನ್ನಾಗಿ ಸ್ತೋತ್ರಮಾಡುತ್ತಿದ್ದರು. ಇಂತಹ ಅದ್ಭುತ ವೈಭವದಿಂದ ಕೂಡಿದ ಆಚಾರ್ಯರು ಶಿಷ್ಯರಿಗೆ ಪಾಠ ಹೇಳುತ್ತಿದ್ದಾಗಲೇ ದೇವತೆಗಳು ದೇವಲೋಕದ ಪಾರಿಜಾತಕುಸುಮಗಳಿಂದ ಆಚಾರ್ಯರನ್ನು ಅಭಿಷೇಕಿಸಲು ಆರಂಭಿಸಿದರು. ಅತ್ಯಂತ ಶ್ರೇಷ್ಠರಾದ ತ್ರಿಭುವನಗುರುಗಳಾದ ಈ ಶ್ರೀ ಮಧ್ವಾಚಾರ್ಯರು ಇಂತಹ ಪರಮವೈಭವದ ದಿವ್ಯ ಸನ್ನಿವೇಶದಲ್ಲಿ ಬಹಳ ಚೆನ್ನಾಗಿ ಪ್ರಕಾಶಮಾನರಾಗಿದ್ದರು. ಸಜ್ಜನರು ಸಭೆಸೇರಿ ತತ್ತ್ವವಿಚಾರಮಾಡಿ ನಿರ್ಣಯವನ್ನು ಮಾಡಿಕೊಳ್ಳಲು ಇಂತಹ ಶ್ರೀ ಮಧ್ವಾಚಾರ್ಯರೊಬ್ಬರೇ ದೀಪದಂತಿದ್ದಾರೆ. ಇಂತಹ ಮಧ್ವರು ಸಾತ್ವಿಕ ಜನತೆಯ ಸಭೆಗೆ ಮಂಗಳವನ್ನು ಕರುಣಿಸಲು ಜಗತ್ತಿನಲ್ಲಿ ಉತ್ಕೃಷ್ಟರಾಗಿ ಶೋಭಿಸುತ್ತಿದ್ದಾರೆ. ಈ ರೀತಿ ಶ್ರೀಮನ್ನಾರಾಯಣಪಂಡಿತಾಚಾರ್ಯರು ಅಣುಮಧ್ವವಿಜಯದ ಕಥೆಯನ್ನು ಸಮಾಪ್ತಗೊಳಿಸಿದ್ದಾರೆ.

---

**ವಿಗ್ರಹ** – ವೃಷ್ಟಿಃ ಆದಿಃ ಯೇಷಾಂ ತೇವೃಷ್ಟ್ಯಾದಯಃ ತೇಷಾಂ ಅಭಿಹಿತಂ ಚರಿತಂ ಯಸ್ಯಸಃ ಸರ್ವೇಚ **ತೇ** ಗೀರ್ವಾಣಾಶ್ಚ ಸರ್ವಗೀರ್ವಾಣಾಃ ಸರ್ವಗೀರ್ವಾಣಾಃ ರತ್ನಾನೀವ ಸರ್ವಗೀರ್ವಾಣಃರತ್ನಾನಿ ತೈಃ, ದಿವಃ ಸದಃ **ದ್ಯುಸದಃ** ತಸ್ಮಿನ್, ಸುರಾಣಾಂ ತರುಃ ಸುರತರುಃ ಸುರತರೋಃಕುಸುಮಾನಿ ತೈಃ ಸತಾಂ ಸಭಾ ಸತ್ ಸಭಾ, **ಸತ್ಸಭಾಯಾಃ** ಮಂಗಲಂ ಸತ್ ಸಭಾಮಂಗಲಂ ತಸ್ಮೈ

**ಕ್ರಿಯಾಪದ** - ಪುನಃ ಪುನಃ ಅತಿಶಯೇನ ವಾ ದೀಪ್ಯತೇ ದೇದೀಪ್ಯತೇ ಧಾತೋರೇಕಾಚೋ **ಹಲಾದೇಃ** ಕ್ರಿಯಾಸಮಭಿವ್ಯಾಹಾರಕೇಯಙ್ ಎಂಬ ಸೂತ್ರದಿಂದ ಯಙ್, ದೇದೀಪ್ಯೇತೇ ದೇದಿಪ್ಯಂತೇ, ದೇದೀ**ಪ್ಯಸೇ ದೇದೀಪ್ಯೇಥೇ** ದೇದೀಪ್ಯಧ್ವೇ. ದೇದೀಪ್ಯೇ ದೇದೀಪ್ಯಾವಹೇ ದೇದೀಪ್ಯಾಮಹೇ ದೀಪೀ ದೀಪ್ತೌ (ದೀಪ್) ಅಕ. **ಸೇಟ್ ಆತ್ಮನೇ**ಪದಿ ವರ್ತಮಾನೇ **ಲಟ್** ಪ್ರಥಮಪುರುಷ ಏಕವಚನಂ

ವಿ+ಜಯತೇ ಜಯತೇ ಜಯಂತೇ, ಜಯಸೇ ಜಯೇಥೇ ಜಯಧ್ವೇ, ಜಯೇ **ಜಯಾವಹೇ ಜಯಾ**ಮಹೇ, ವಿ ಉಪಸರ್ಗಪೂರ್ವಕ ಜಿ ಜಯೇ, ಜಯ=ಉತ್ಕರ್ಷ ಪ್ರಾಪ್ತಿ ಅಕ. ಅನಿಟ್ **ಆತ್ಮನೇ ವಿಪರಾಭ್ಯಾಂ** ಜೇಃ ಎಂಬ ಸೂತ್ರದಿಂದ ಆತ್ಮನೇ ಪದ.

**ಪ್ರಯೋಗ** - ಸರ್ವಗೀರ್ವಾಣರತ್ನೈಃ ವೃಷ್ಟ್ಯಾದೀನಾಂ ನಿಯಂತ**ಾ ಇತ್ಯಭಿಹಿತಚರಿತೇನ**, ದ್ಯುಸದಸಿ ಗಂಧರ್ವೈಃ ಗೀಯಮಾನೇನ, ಸಕಲೈಃ ಕೌತುಕಾತ್ ಗಮ್ಯಾಮಾನೇನ, **ದೃಷ್ಟ್ವಾ ಸಂಸ್ತೂಯಮಾನೇನ** ಸುರತರು ಕುಸುಮೈಃ ಆಕೀರ್ಯಮಾಣೇನ ಆರ್ಯೇಣ ಅಮುನಾ ಮಧ್ವೇನ **ದೇದೀಪ್ಯತೇ, ಸತ್ಸಭಾ**ಮಂಗಲಾಯ ಜಗತಿ ವಿಜೀಯತೇ.

**ಗೂಢಭಾವಪ್ರಕಾಶಿಕಾ ಪ್ರತಿಪದಾರ್ಥ ವ್ಯಾಖ್ಯಾನ** - ಸರ್ವಗೀರ್ವಾಣರತ್ನೈಃ=ಸರ್ವದೇವಶ್ರೇಷ್ಠೈಃ ಎಲ್ಲಾ ದೇವಶ್ರೇಷ್ಠರಿಂದ, ವೃಷ್ಟ್ಯಾದೀನಾಂ=ಮಳೆಬರುವುದು, ಮಳೆ ನಿಲ್ಲಿಸುವುದು ಇತ್ಯಾದಿಗಳಿಗೆ ನಿಯಂತಾ=ನಿಯಾಮಕಃ ನಿಯಂತಾ ಅಂದರೆ ನಿಯಾಮಕರು, ಮಳೆ ಇತ್ಯಾದಿಗಳನ್ನು ತಡೆಹಿಡಿಯುವವರು. ಅಥವಾ ಬರುವಂತೆ ಮಾಡುವವರು, ಇತಿ=ಎಂಬುದಾಗಿ, ಅಭಿಹಿತಚರಿತಃ=ಸ್ತುತಚರಿತ್ರಃ, ಹೊಗಳಲ್ಪಟ್ಟ ವ್ಯಾಪಾರವುಳ್ಳ, ದ್ಯುಸದಸಿ=ಸ್ವರ್ಗಸಭಾಯಾಂ, ದ್ಯುಸದಸಿ ಎಂದರೆ ಸ್ವರ್ಗಸಭೆಯಲ್ಲಿ, ಗಂಧರ್ವೈಃ=ಗಂಧರ್ವರಿಂದ, ಗೀಯಮಾನಃ=ಹಾಡಲ್ಪಡುತ್ತಿರುವ, ಸಕಲೈಃ=ಎಲ್ಲಾ, (ಮುನಿನಿಕರಾದಿಭಿಃ= ಋಷಿಸಮೂಹ ಮೊದಲಾದವುಗಳಿಂದ,) ಕೌತುಕಾತ್=ವಿಜಯ ಮಹೋತ್ಸವಲೌಲ್ಯಾತ್, ಎಂದರೆ ಆಚಾರ್ಯರ ವಿಜಯಮಹೋತ್ಸವದರ್ಶನದ ತವಕದಿಂದ, ಗಮ್ಯಮಾನಃ ಪ್ರಾಪ್ಯಮಾಣಃ=ಗಮ್ಯಮಾನಃ ಎಂದರೆ ಸಮೀಪಿಸಲ್ಪಡುತ್ತಿರುವ ದೃಷ್ಟ್ವಾ=ಪ್ರೇಕ್ಷ್ಯ, ದೃಷ್ಟ್ವಾ ಎಂದರೆ ನೋಡಿ, ಮಧ್ವದರ್ಶನಾನಂತರಂ=ಶ್ರೀಮಧ್ವರ ದರ್ಶನದ ಅನಂತರದಲ್ಲಿ, ಸುರತರುಕುಸುಮೈಃ=ಸುರತರೋಃ=ದೇವವೃಕ್ಷವಾದ ಪಾರಿಜಾತದ, ಕುಸುಮೈಃ ಪುಷ್ಪೈಃ ಕುಸುಮೈಃ ಅಂದರೆ ಹೂವುಗಳಿಂದ, ಪ್ರಸೂನಂ=ಕುಸುಮಂ ಸುಮಂ ಇತ್ಯಮರಃ, ಈ ಅಮರಕೋಶಕ್ಕನುಸಾರವಾಗಿ ಕುಸುಮ ಅಂದರೆ ಹೂವು, ಆಕೀರ್ಯಮಾಣಃ=ಅಭಿಷಿಚ್ಯಮಾನಃ, ಆಕೀರ್ಯಮಾಣಃ ಅಂದರೆ ಅಭಿಷೇಕಿಸಲ್ಪಡುತ್ತಿರುವ, ಆರ್ಯಃ=ಶ್ರೇಷ್ಠಃ, ಆರ್ಯಃ ಅಂದರೆ ಶ್ರೇಷ್ಠರಾದ, ಅಸೌ ಮಧ್ವಃ=ಈ ಶ್ರೀ ಮಧ್ವಾಚಾರ್ಯರು, ದೇದೀಪ್ಯತೇ ಪುನಃ ಪುನಃ ದೀಪ್ಯತೇ =ಬಹಳ ಹೆಚ್ಚಾಗಿ ಪ್ರಕಾಶಮಾನರಾಗಿದ್ದಾರೆ. ದೀಪೀ ದೀಪ್ತೌ=ದೇದೀಪ್ಯತೇ ಎಂಬಲ್ಲಿ ದೀಪ್ತಿ=ಪ್ರಾಕಾಶ ಎಂಬ ಅರ್ಥವುಳ್ಳ ದೀಪ್ ಧಾತು. ಕ್ರಿಯಾಸಮಭಿಹಾರೇ ಯಙ್ ಸತ್=ಪುನಃ ಪುನಃ ಅತಿಶಯವಾಗಿ ಎಂಬ ಕ್ರಿಯಾಸಮಭಿಹಾರದಲ್ಲಿ ಯಙ್ ಪ್ರತ್ಯಯ. ಸತ್ಸಭಾಮಂಗಲಾಯ=ಸತಾಂ=ಸಜ್ಜನಾನಾಂ=ಸಜ್ಜನರ ಸಭಾಯಾಃ=ಸಮೂಹಕ್ಕೆ, ಮಂಗಲಾಯ=ಕಲ್ಯಾಣಕ್ಕೋಸ್ಕರ, (ಒಳಿತಿಗೋಸ್ಕರ) ಜಗತಿ=ಲೋಕೇ, ಲೋಕದಲ್ಲಿ, ವಿಜಯತೇ=ಉತ್ಕೃಷ್ಟೋ ವರ್ತತೇ=ಉತ್ಕೃಷ್ಟರಾಗಿರುತ್ತಾರೆ. ವಿಜಯತೇ ಎಂಬಲ್ಲಿ, ಜಿ ಜಯೇ ಜಯಾರ್ಥಕವಾದ ಜಿಧಾತು ಜಯಃ ಉತ್ಕರ್ಷ, ಜಯವೆಂದರೆ ಉತ್ಕರ್ಷವು, ಲಟ್ ಈ ಜಿಧಾತುವಿನ ಲಟ್ ವಿಜಯತೇ ಎಂದು ರೂಪ.

**ಅವತಾರಿಕಾ** - ಕವಿವರ್ಯರು ಗ್ರಂಥದ ಹೆಸರನ್ನೂ ತಮ್ಮ ಹೆಸರನ್ನೂ ಹೇಳುತ್ತಾ ಗ್ರಂಥಕ್ಕೆ ಮಂಗಳವನ್ನು ಹಾಡುತ್ತಾರೆ.

**ದಶಪ್ರಮತಿವಿಕ್ರಮಂ ಬಹುವಿಧಾತ್ಮನಾ ಹೇಮವ**
**ತ್ಸುಮಧ್ವವಿಜಯಾಭಿಧಂ ವ್ಯಧಿತ ಭಾವದೀಪಾಹ್ವಯಂ ।**
**ಪ್ರಮೇಯನವಮಾಲಿಕಾಂ ಪುನರಿಮಾಂ ಚ ದಕ್ಷ್ಯಾಂ ಚ ತಾಂ**
**ಸತಾಂ ಶ್ರವಣಭೂಷಣಂ ವ್ಯತನುತ್ತೈಷ ನಾರಾಯಣಃ ।।೩೩।।**

## ಇತಿ ಶ್ರೀಮದಣುಮಧ್ವವಿಜಯಃ ಸಮಾಪ್ತಃ
## ಶ್ರೀ ಕೃಷ್ಣಾರ್ಪಣಮಸ್ತು

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ದಶಪ್ರಮತೀತಿ ಬಹುವಿಧಾತ್ಮನಾ ಬಹುಪ್ರಕಾರಮನಸಾ, ಭಾವದೀಪಾಹ್ವಯಂ ಭಾವಾನಾಂ ಪ್ರಮೇಯಾನಾಂ ದೀಪಾಹ್ವಯಂ ದೀಪಾಖ್ಯಂ ಭಾವಪ್ರಕಾಶಿಕಾಮಿತಿಯಾವತ್ ಸುಮಧ್ವವಿಜಯಾಭಿಧಂ ಶೋಭನಮಧ್ವವಿಜಯಾಖ್ಯಂ, ದಶಪ್ರಮತಿವಿಕ್ರಮಂ ಪೂರ್ಣಬೋಧಚರಿತೋಪೇತಂ ಹೇಮವತ್ ಸುವರ್ಣಮಿವ ವ್ಯಧಿಕ ಕೃತವಾನ್ । ಆಚಾರ್ಯಚರಿತೋಪೇತಗ್ರಂಥದ್ವಯಮಕರೋದಿತಿ ಭಾವಃ। ಪುನಸ್ತಾಂ ಮಧ್ವಚರಿತೋಪೇತಾಮಿಮಾಂ ದ್ವಾತ್ರಿಂಶಚ್ ಛ್ಲೋಕಾತ್ಮಿಕಾಂ ದಕ್ಷ್ಯಾಂ ಸಮರ್ಥಾಂ ಸರ್ವಾಭೀಷ್ಟದೋಗ್ಧ್ರೀಂ ಪ್ರಮೇಯನವಮಾಲಿಕಾಂ ಪ್ರಮೇಯ ನವಮಾಲಿಕಾನಾಮ್ನೀಂ ಸತಾಂ ಶ್ರವಣಭೂಷಣಂ ಸಜ್ಜನಾನಾಂ ಕರ್ಣಭೂಷಾಯಿತಾಂ ಏಷಃ ನಾರಾಯಣಪಂಡಿತಾಚಾರ್ಯಃ ವ್ಯತನುತಕೃತವಾನ್ ತನುವಿಸ್ತಾರೇ ಲಙ್ ।।೩೩।।

**ಪದಚ್ಛೇದ** - ದಶಪ್ರಮತಿವಿಕ್ರಮಂ ಬಹುವಿಧಾತ್ಮನಾ ಹೇಮವತ್ ಸುಮಧ್ವವಿಜಯಾಭಿಧಂ ವ್ಯಧಿತ ಭಾವದೀಪಾಹ್ವಯಂ, ಪ್ರಮೇಯನವಮಾಲಿಕಾಂ ಪುನಃ ಇಮಾಂ ಚ, ದಕ್ಷಾಂ ಚ, ತಾಂ ಸತಾಂ ಶ್ರವಣಭೂಷಣಂ ವ್ಯತನುತ ಏಷಃ ನಾರಾಯಣಃ।

**ಅನ್ವಯ** - ಏಷಃ ನಾರಾಯಣಃ ಬಹುವಿಧಾತ್ಮನಾ ಭಾವದೀಪಾಹ್ವಯಂ ಸುಮಧ್ವವಿಜಯಾಭಿಧಂ ದಶಪ್ರಮತಿವಿಕ್ರಮಂ ಹೇಮವತ್ ವ್ಯಧಿತ ಪುನಸ್ತಾಂ ಚ ದಕ್ಷಾಂ ಇಮಾಂ ಚ ಸತಾಂ ಶ್ರವಣಭೂಷಣಂ ಪ್ರಮೇಯನವಮಾಲಿಕಾಂ ವ್ಯತನುತ ।

**ಅನ್ವಯಾರ್ಥ** – ಏಷಃ ನಾರಾಯಣಃ=ಈ ನಾರಾಯಣಪಂಡಿತಾಚಾರ್ಯನು, ಬಹುವಿಧಾತ್ಮನಾ=ಅನೇಕ ಪ್ರಕಾರವಾದ ಮನಸ್ಸಿನಿಂದ, ಭಾವದೀಪಾಹ್ವಯಂ=ಭಾವಪ್ರಕಾಶಿಕಾ ಎಂಬ ಹೆಸರುಳ್ಳ ಗ್ರಂಥವನ್ನೂ ಸುಮಧ್ವವಿಜಯಾಭಿಧಂ =ಮನೋಹರವಾದ ಮಧ್ವವಿಜಯವೆಂಬ ಹೆಸರುಳ್ಳ, ದಶಪ್ರಮತಿವಿಕ್ರಮಂ=ಶ್ರೀ ಮಧ್ವರ ಮಹಿಮೋಪೇತವಾದ ಕಾವ್ಯವನ್ನು ಹೇಮವತ್=ಭಂಗಾರವನ್ನೋಪಾದಿಯಲ್ಲಿ, ವ್ಯಧಿತ=ರಚಿಸಿದನು. ಪುನಃ=ತಿರುಗಿ, ತಾಂ ಚ ದಕ್ಷಾಂ ಇಮಾಂ ಚ=ಮಧ್ವಚರಿತೋಪೇತವಾದ ಸರ್ವಾಭೀಷ್ಟಪ್ರದಾನಸಮರ್ಥವಾದ ಅಂತಹ ಈ ಮೂವತ್ತು ಎರಡು ಶ್ಲೋಕ ಸಮೂಹರೂಪವಾದ, ಸತಾಂ=ಸಜ್ಜನರಿಗೆ, ಶ್ರವಣಭೂಷಣಂ=ಕರ್ಣಗಳಿಗೆ ಅಲಂಕಾರಪ್ರಾಯವಾದ, ಪ್ರಮೇಯನವಮಾಲಿಕಾಂ= ಪ್ರಮೆಯನವಮಾಲಿಕಾ ಎಂಬ ಗ್ರಂಥವನ್ನು, ವ್ಯತನುತ=ರಚಿಸಿದನು.

**ತಾತ್ಪರ್ಯ** – ಭಂಗಾರವು ಲೋಹಗಳಲ್ಲಿ ಶ್ರೇಷ್ಠವಾದುದು. ಅತಿ ಮೃದುವಾದುದು. ಅದರಿಂದ ಒಳ್ಳೆಯ ಆಭರಣಗಳನ್ನು ಮಾಡಬಹುದು. ಶ್ರೀಮಧ್ವಾಚಾರ್ಯರ ವಿಕ್ರಮ, ಪರಾಕ್ರಮ, ಮಹಿಮಾತಿಶಯಗಳು ಭಂಗಾರಕ್ಕೆ ಸಮಾನವಾಗಿವೆ. ನಾರಾಯಣ ಪಂಡಿತಾಚಾರ್ಯನು ಆಚಾರ್ಯರ ಚರಿತ್ರೆಯನ್ನು ಅನೇಕ ಪ್ರಕಾರಗಳಿಂದ ನಿರೂಪಿಸಬೇಕೆಂದು ಮನಸ್ಸಿನಲ್ಲಿ ಸಂಕಲ್ಪಮಾಡಿ ಮೊದಲು ಭಾವಪ್ರಕಾಶಿಕಾ ಎಂಬ ವ್ಯಾಖ್ಯಾನಸಹಿತವಾದ ಸುಮಧ್ವವಿಜಯವೆಂಬ ಮಹಾಕಾವ್ಯವನ್ನು ಬರೆದನು. ಭಂಗಾರದಂತಿರುವ ಈ ಗ್ರಂಥಗಳ ಸಾರವನ್ನು ಎಲ್ಲರೂ ಸುಲಭವಾಗಿ ತಿಳಿಯಲಿ ಎಂಬ ಉದ್ದೇಶದಿಂದ, ಭಂಗಾರದಿಂದ ಅನೇಕ ಎಳೆಯ ಸರಗಳನ್ನು ಮಾಡುವಂತೆ 32 ಶ್ಲೋಕಗಳೆಂಬ ಎಳೆಗಳಿಂದ ಕೂಡಿದ ಈ ಪ್ರಮೇಯನವಮಾಲಿಕಾ ಎಂಬ ಗ್ರಂಥವನ್ನು ರಚಿಸಿದನು. ಇದು ಸಜ್ಜನರಿಗೆ ಕರ್ಣಭೂಷಣವೂ ಆಗಿದೆ. ಕೇಳುವುದಕ್ಕೆ ಅತ್ಯಂತ ಆನಂದಕರವಾಗಿದೆ. ಈ ಗ್ರಂಥವು ಪಾಠಕರ, ಪಠಕರ, ಪಾರಾಯಣಕರ್ತೃಗಳ ಸರ್ವಾಭೀಷ್ಟಗಳನ್ನೂ ಪೂರೈಸುತ್ತದೆ.

**ವಿಗ್ರಹ** - ದಶ ಪ್ರಮತಯಃ ಯಸ್ಯ ಸಃ ದಶಪ್ರಮತಿಃ ದಶಪ್ರಮತೇಃ ವಿಕ್ರಮಃ ಯಸ್ಮಿನ್ ತತ್ ದಶ ಪ್ರಮತಿವಿಕ್ರಮಂ (ಕಾವ್ಯಂ) ಬಹವಃ ವಿಧಾಃ ಯಸ್ಯ ಸಃ ಬಹುವಿಧಃ ಬಹುವಿಧಶ್ಚಾಸೌ ಆತ್ಮಾ ಚ ಬಹುವಿಧಾತ್ಮಾತೇನ ಬಹುವಿಧಾತ್ಮನಾ, ಹೇಮ ಇವ ಹೇಮವತ್, ಶೋಭನಶ್ಚಾಸೌ ಮಧ್ವವಿಜಯಶ್ಚ ಸುಮಧ್ವವಿಜಯಃ ಸುಮಧ್ವವಿಜಯ ಇತಿ ಅಭಿಧಾಯಸ್ಯ ತತ್ ಸುಮಧ್ವವಿಜಯಾಭಿಧಂ ತತ್ ಭಾವದೀಪ ಇತಿ ಆಹ್ವಯಃ ಯಸ್ಯ ತತ್, ಭಾವದೀಪಾಹ್ವಯಂ ತತ್, ಶ್ರವಣಾನಾಂ ಭೂಷಣಂ ತತ್.

**ಕ್ರಿಯಾಪದ** – ವಿ+ಅಧಿತ ಅಧಿಷಾತಾಂ ಅಧಿಷತ, ಅಧಿಥಾಃ ಅಧಿಷಾಥಾಂ ಅಧಿಢ್ವಂ, ಅಧಿಷಿ ಅಧಿಷ್ವಹಿ, ಅಧಿಷ್ಮಹಿ, ವಿ ಉಪಸರ್ಗಡು (ಧಾ) ಇಞ್ ಧಾರಣಪೋಷಣಯೋಃ ಸಕ. ಉಭ. ಅನಿ. ಭೂತೇ ಲುಙ್ ಪ್ರಥಮ ಪುರುಷ ಏಕವಚನಂ ವಿ+ಅತನುತ ಅತನ್ವಾತಾಂ ಅತನ್ವತ, ಅತುನುಥಾಃ ಅತನ್ವಾಥಾಂ ಅತನುಧ್ವಂ, ಅತನ್ವಿ ಅತನುವಹಿ ಅತನ್ವಹಿ, ಅತನುಮಹಿ ಅತನ್ಮಹಿ । ವಿ ಉಪಸರ್ಗ ತನು ವಿಸ್ತಾರೇ (ತನ್) ಉಭ. ಸೇಟ್. ಸಕ ಅನದ್ಯತನಭೂತೇ ಲಙ್ ಪ್ರಥಮಪುರಷ ಏಕವಚನೇ ವ್ಯತನುತ ಇತಿ ರೂಪಂ.

**ಪ್ರಯೋಗ** - ಏತೇನ ನಾರಾಯಣೇನ ಬಹುವಿಧಾತ್ಮನಾ ಭಾವದೀಪಾಹ್ವಯಂ ಸುಮಧ್ವವಿಜಯಾಭಿಧಂ ದಶಪ್ರಮತಿವಿಕ್ರಮಮಂ (ಕಾವ್ಯಂ) ಹೇಮವತ್ ವ್ಯಧಾಯಿ. ಪುನಸ್ಸಾ ಚ ದಕ್ಷಾ ಚ ಸತಾಂ ಶ್ರವಣಭೂಷಣಂ ಇಯಂ ಪ್ರಮೇಯನವಮಾಲಿಕಾ ವ್ಯತನ್ಯತ.

**ಗೂಢಭಾವಪ್ರಕಾಶಿಕಾ ವ್ಯಾಖ್ಯಾನ** - ಏಷಃ ನಾರಾಯಣಃ=ಈ ನಾರಾಯಣಪಂಡಿತಾಚಾರ್ಯನೆಂಬ ಕವಿಯು ಬಹುವಿಧ=ಬಹುಪ್ರಕಾರವಾದ, ಮನಸಾ=ಮನಸ್ಸಿನಿಂದ ಭಾವದಿಪಾಹ್ವಯಂ, ಭಾವಾನಾಂ ಪ್ರಮೇಯಾನಾಂ, ಪ್ರಮೇಯಗಳ, ದೀಪಾಹ್ವಯಂ ದೀಪಾಖ್ಯಂ=ದೀಪವೆಂಬ ಹೆಸರುಳ್ಳ, ಸುಮಧ್ವವಿಜಯಾಭಿಧಂ=ಶೋಭನಮಧ್ವವಿಜಯಾಖ್ಯಂ=ಉತ್ತಮವಾದ ಮಧ್ವವಿಜಯವೆಂಬ ಹೆಸರುಳ್ಳ ದಶಪ್ರಮತಿ ವಿಕ್ರಮಂ=ಪೂರ್ಣಬೋಧಚರಿತೋಪೇತಂ=ಶ್ರೀಮದಾನಂದತೀರ್ಥರ ಚರಿತ್ರದಿಂದ ಕೂಡಿದ ಕಾವ್ಯವನ್ನು, ಹೇಮವತ್ ಸುವರ್ಣಮಿವ=ಚಿನ್ನವನ್ನೋಪಾದಿಯಲ್ಲಿ, ವ್ಯಧಿತ=ಕೃತವಾನ್=ಮಾಡಿದರು. ಆಚಾರ್ಯ ಚರಿತೋಪೇತಗ್ರಂಥದ್ವಯಮಕರೋದಿತಿಭಾವಃ=ಆಚಾರ್ಯರ ಚರಿತ್ರೆಯಿಂದ ಕೂಡಿದ ಎರಡು ಗ್ರಂಥಗಳನ್ನು ಬರೆದನು ಎಂದು ಅಭಿಪ್ರಾಯ. ಪುನಸ್ತಾಂ ಮಧ್ವಚರಿತೋಪೇತಾಂ=ಮತ್ತು ಮಧ್ವಚರಿತಸಹಿತವಾದ, ಇಮಾಂ ದ್ವಾತ್ರಿಂಶಚ್ಛ್ಲೋಕಾತ್ಮಿಕಾಂ=ಈ ಮೂವತ್ತು ಎರಡು ಶ್ಲೋಕರೂಪವಾದ, ದಕ್ಷಾಂ ಸಮರ್ಥಾಂ=ಸಮರ್ಥವಾದ, ಸರ್ವಾಭೀಷ್ಟದೋಗ್ಧ್ರೀಂ=ಎಲ್ಲಾ ಅಭೀಷ್ಟವನ್ನು ಕೊಡತಕ್ಕ, ಪ್ರಮೇಯನವಮಾಲಿಕಾಂ=ಪ್ರಮೇಯನವಮಾಲಿಕಾನಾಮ್ನೀಂ=ಪ್ರಮೇಯನವಮಾಲಿಕಾ ಎಂಬ ಹೆಸರುಳ್ಳ, ಸತಾಂ ಶ್ರವಣಭೂಷಣಂ=ಸಜ್ಜನಾನಾಂ ಕರ್ಣಭೂಷಾಯಿತಾಂ=ಸಜ್ಜನರಿಗೆ ಕರ್ಣಾಲಂಕಾರವಾಗಿರುವ ಗ್ರಂಥವನ್ನು, ಏಷಃ ನಾರಾಯಣಪಂಡಿತಾಚಾರ್ಯಃ=ಈ ನಾರಾಯಣ ಪಂಡಿತಾಚಾರ್ಯನು, ವ್ಯತನುತ=ಕೃತವಾನ್=ಮಾಡಿದನು. ತನು ವಿಸ್ತಾರೆ ಲಙ್=ವ್ಯತನುತ ಎಂಬಲ್ಲಿ ತನು ವಿಸ್ತಾರೇ ಎಂಬ ಧಾತುವಿನ ಲಙ್ ಲಕಾರವು.

**ಯದ್ಭ್ರೂಜೃಂಭೇಣ ವಿಶ್ವಸ್ಯ ಸ್ಥಿತ್ಯುತ್ಪತ್ತ್ಯಾದಿಕಂ ಭವೇತ್ ।**
**ತಸ್ಯ ಶ್ರೀ ಪದ್ಮನಾಭಸ್ಯ ಪಾದಪದ್ಮಂ ಸಮಾಶ್ರಯೇ ॥**

ಇತಿ ಶ್ರೀಮತ್ಕವಿಕುಲತಿಲಕ ತ್ರಿವಿಕ್ರಮಪಂಡಿತಾಚಾರ್ಯಸುತನಾರಾಯಣಪಂಡಿತಾಚಾರ್ಯ ವಿರಚಿತ ಪ್ರಮೇಯನವಮಾಲಿಕಾಯಾಃ ಮಹಾಭಾಷ್ಯವೆಂಕಟಭಟ್ಟಕೃತ ಗೂಢಭಾವಪ್ರಕಾಶಿಕಾಖ್ಯಾ ವ್ಯಾಖ್ಯಾ ಸಮಾಪ್ತಾ.

---

## ಶ್ರೀಕೃಷ್ಣಾರ್ಪಣಮಸ್ತು

ಯಾವನ ಹುಬ್ಬಿನ ವಿಲಾಸಮಾತ್ರದಿಂದ ಪ್ರಪಂಚದ ಪಾಲನೆ ಉತ್ಪತ್ತಿ ಮುಂತಾದುದೆಲ್ಲವೂ ಆಗುತ್ತದೆಯೋ ಅಂತಹ ಪದ್ಮನಾಭನ ಪಾದಕಮಲವನ್ನು ಶರಣು ಹೊಂದುತ್ತೇನೆ ಎಂದು ಶ್ರೀರಾಘವೇಂದ್ರತೀರ್ಥರು ತಮ್ಮ ವ್ಯಾಖ್ಯಾನಕ್ಕೆ ಅಂತ್ಯ ಮಂಗಳವನ್ನು ಹಾಡಿದ್ದಾರೆ.

ಇಲ್ಲಿ ಕವಿಕುಲತಿಲಕ ತ್ರಿವಿಕ್ರಮಪಂಡಿತಾಚಾರ್ಯರ ಪುತ್ರರಾದ ನಾರಾಯಣ ಪಂಡಿತಾಚಾರ್ಯರಿಂದ ವಿರಚಿತವಾದ ಪ್ರಮೇಯನವಮಾಲಿಕಾ ಗ್ರಂಥದ ಮಹಾಭಾಷ್ಯ ವೆಂಕಟಭಟ್ಟಕೃತವಾದ ಗೂಢಭಾವ ಪ್ರಕಾಶಿಕಾ ವ್ಯಾಖ್ಯಾನವು ಸಮಾಪ್ತವಾಯಿತು॥

